





1/8 ಡೆಮಿ   608 ಪುಟಗಳು   ₹ 390

ಪ್ರತಿಯೊಬ್ಬ ಮನುಷ್ಯನ ಬದುಕಿನ ಸಂಕೀರ್ಣತೆಗೆ ಕಾರಣವಾಗುವ ಸಾಧ್ಯತೆಗಳನ್ನು ಹೊಂದಿರುವ ವಾಂಶಿಕ ಸೂಕ್ಷ್ಮ ವಿವರಗಳನ್ನು ಹಲವು ತಲೆಮಾರುಗಳು ಬದುಕಿದ ರೀತಿಯ ಮೂಲಕ, ಅವುಗಳ ಮೇಲೆ ಪ್ರಭಾವ ಬೀರಿರಬಹುದಾದ ಬಾಹ್ಯ ಅಂಶಗಳು ಹಾಗೂ ಕಾಲಾನುಕ್ರಮದಲ್ಲಿ ಸುತ್ತಮುತ್ತಲಿನ ಪರಿಸರದಲ್ಲಿ ನಡೆಯತಕ್ಕಂತಹ ಸಾಮಾಜಿಕ, ಆರ್ಥಿಕ ಸ್ಥಿತ್ಯಂತರಗಳ ಮೂಲಕ ಪರಿಶೋಧಿಸುವ ದಿಟ್ಟ ಪ್ರಯತ್ನವನ್ನು ನಡೆಸುವ ಮಹಾಕಾದಂಬರಿ ಶ್ರೀ ಭಾಲಚಂದ್ರ ನೆಮಾಡೆಯವರ "ಹಿಂದೂ".
ಸಾಮಾನ್ಯ ತಿಳಿವಳಿಕೆಯಲ್ಲಿರುವ "ಹಿಂದೂ" ಪದದ ರೂಢಿಗತ ಅರ್ಥಕ್ಕೆ ಭಿನ್ನ ನೆಲೆಯಿಂದ ಐದು ಸಾವಿರ ವರ್ಷಗಳ ಪರಂಪರೆಯನ್ನು ಹೊಂದಿರುವಂತಹ ಅನನ್ಯ ಸಂಸ್ಕೃತಿಯೊಂದನ್ನು ವ್ಯಾಪಕ ಅರ್ಥದಲ್ಲಿ ಹಿಂದೂವೆಂದು ಗುರುತಿಸಿಕೊಂಡು ಅದರ ಕ್ರಮಾಗತ ಅವನತಿಗೆ ಕಾರಣವಾದ ಹಿನ್ನೆಲೆಯನ್ನು ಈ ಕಾದಂಬರಿ ಪ್ರಸ್ತುತಪಡಿಸುತ್ತದೆ. ಈ ಉತ್ಖನನದ ಪ್ರಕ್ರಿಯೆ ಆರ್ಯರ ಮೂಲಸ್ಥಾನವೆಂದು ಪರಿಗಣಿತವಾಗಿರುವ ಮೊಹೆಂಜದಾರೋದಲ್ಲಿ ಪ್ರಾರಂಭವಾಗಿ ಕಾದಂಬರಿ ನಾಯಕ ಪುರಾತತ್ವತಜ್ಞ ಖಂಡೇರಾವ್‌ನ ಸ್ಮೃತಿಪಟಲದಲ್ಲಿ ಅವನ ತಂದೆಯ ಅವಸಾನ ಕಾಲದ ಕರೆಯಿಂದ ಅವನ ಸ್ವಂತ ಊರು ಮೋರಗಾಂವಿನ ಸುಮಾರು ಏಳು ತಲೆಮಾರುಗಳ ಇತಿಹಾಸ ಮರುಕಳಿಸುವುದರೊಂದಿಗೆ ಮುಂದುವರಿಯುತ್ತದೆ. ಇದುವೇ ಈ ಕಾದಂಬರಿಯ ಮೂಲದ್ರವ್ಯ. ಮೊಹೆಂಜದಾರೋವಿನಿಂದ ಮೋರಗಾಂವಿಗೆ ಹಿಂತಿರುಗುವ ಖಂಡೇರಾವ್‌ನ ಮರುಪ್ರಯಾಣದಲ್ಲಿ ಮೋರಗಾಂವಿನ ಮೂಲವಾಸಿಗಳ, ಅಲೆಮಾರಿಗಳ, ವಲಸಿಗರ ಹಾಗೂ ಇಲ್ಲಿಂದ ಗುಳೇ ಹೋದವರ ಸಮಗ್ರ ಬದುಕು, ಅದರ ಏಳು–ಬೀಳುಗಳು, ವಿಕಾಸ–ನಾಶಗಳು, ಬದಲಾವಣೆ–ಪರಿವರ್ತನೆಗಳೊಂದಿಗೆ ಅನಾವರಣಗೊಳ್ಳುತ್ತಾ ಹೋಗುತ್ತದೆ.... ಇಲ್ಲಿ ಕಾದಂಬರಿಕಾರನಿಗೆ ವಸ್ತುಸ್ಥಿತಿಯನ್ನು ಅದರ ಎಲ್ಲಾ ಆಯಾಮಗಳೊಂದಿಗೆ– ಅದು ಜೀವವಿರೋಧಿಯಾಗಲೀ, ಜೀವಪರವಾಗಿರಲೀ – ಅನಾವರಣಗೊಳಿಸುವ ಕರ್ತವ್ಯದೊಂದಿಗೆ ಭವಿಷ್ಯದ ಕುರಿತು ಆಶಾವಾದವನ್ನು ವ್ಯಕ್ತಪಡಿಸುವ ಜವಾಬ್ದಾರಿಯೂ ಸೇರಿಕೊಂಡಿರುವುದು ಇತ್ಯಾತ್ಮಕ ಅಂಶವಾಗಿದೆ... "ಹಿಂದೂ" ಒಂದು ಸಾಹಿತ್ಯಕೃತಿ ಮಾತ್ರವಲ್ಲ ಮನುಷ್ಯನ ಬದುಕಿನ ವಾಸ್ತವಕ್ಕೆ ಬರೆದ ಭಾಷ್ಯವಾಗಿದೆ. ಬದುಕಿನ ಸಮೃದ್ಧತೆಗೆ ಮಾರಕವಾಗಿ ಪರಿಣಮಿಸಿದ ಅಂಶಗಳ ಕುರಿತು ಪ್ರತಿಯೊಬ್ಬರೂ ಗಮನಹರಿಸಲೇಬೇಕಾದ ಎಚ್ಚರಿಕೆಯ ಗಂಟೆಯಾಗಿದೆ. ಇಂತಹ ಒಂದು ಉತ್ಕೃಷ್ಟ ಕೃತಿ ಕನ್ನಡಕ್ಕೆ ಸಂದ ಅನುಪಮ ಕೊಡುಗೆಯಾಗಿದೆ...

– ಡಾ. ಗೀತಾ ಶೆಣೈ

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ತನು, ವಿ. ಗೋಪಾಲ್, ಜಿ. ಎಂ. ಬೊಮ್ನಳ್ಳಿ, ವಿ. ಆರ್. ಸಿ. ಶೇಖರ್, ಗೋಪಿ ಹಿರೇಬೆಟ್ಟು

**ಮುಖಪುಟ :** ಬರಿದಾದ ಕೆ.ಆರ್.ಎಸ್. ಅಣೆಕಟ್ಟು

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಈ ತಿಂಗಳಲ್ಲಿ ಬಂದ್‌ಗಳ ಸುರಿಮಳೆ. ಕಾವೇರಿ ವಿವಾದ ಎಬ್ಬಿಸಿದ ಕಿಚ್ಚಿಗೆ ಬಲಿಯಾದ್ದು ಬಸ್‌ಗಳು, ಲಾರಿಗಳು, ಟೈರುಗಳು. ಪ್ರತಿಭಟನೆಯಿಂದ ಎರಡು ದಿನ ಬೆಂಗಳೂರು ಸ್ತಬ್ಧ. ಕೆಲವು ಕನ್ನಡ ಪರ ಸಂಘಟನೆಗಳು ಏಕಾಏಕಿ ನಡೆಸಿದ ದಾಂಧಲೆಯಿಂದಾಗಿ ಜನ ಪರದಾಡಬೇಕಾಯಿತು. ಶಾಲೆ–ಕಾಲೇಜುಗಳು, ಅಂಗಡಿ ಮುಗ್ಗಟ್ಟುಗಳು, ಆಫೀಸುಗಳು ಅರ್ಧದಲ್ಲೇ ಮುಚ್ಚಿದ್ದರಿಂದ ಮನೆ ಸೇರಿಕೊಳ್ಳುವುದು ತ್ರಾಸವಾಯಿತು. ಇದಕ್ಕೆಲ್ಲ ಕಾರಣ ಕಾವೇರಿ ನೀರು ಹರಿಬಿಡುವುದರ ಕುರಿತು ಸುಪ್ರೀಮ್ ಕೋರ್ಟು ನೀಡಿದ ಆಜ್ಞೆ. ಆದರೆ ಪ್ರಕ್ಷುಬ್ಧತೆಯ ವಾತಾವರಣವನ್ನು, ಹಿಂಸಾಚಾರವನ್ನು ಪ್ರಚೋದಿಸಿದ್ದು ಮಾಧ್ಯಮಗಳು ಎಂದರೆ ತಪ್ಪಾಗುವುದಿಲ್ಲ. ಸೋಮವಾರ ಮಧ್ಯಾಹ್ನ ಟಿ.ವಿ. ವೀಕ್ಷಿಸಿದವರಿಗೆ ಅದು ವೇದ್ಯವಾಗಿದೆ. ಸುದ್ದಿ ಮಾಧ್ಯಮಗಳ ಆಂಕರುಗಳ ಅಬ್ಬರ, ಉತ್ಪ್ರೇಕ್ಷಿತ ವರದಿಗಳ ಪ್ರಸಾರ, ದಿಢೀರ್ ಪರಿಣತರುಗಳ ವ್ಯಾಖ್ಯಾನ, ಪ್ರಚೋದನಕಾರಿ ದೃಶ್ಯಗಳ ಪ್ರದರ್ಶನ ಇವೇ ಕಾರಣ. ದಿನಪತ್ರಿಕೆಯೊಂದರ ಅಂಕಣಕಾರ ಪ್ರತಿಕ್ರಿಯಿಸಿರುವುದು ಇಲ್ಲಿ ಉಲ್ಲೇಖಾರ್ಹ : "ಘಟನೆಯೊಂದು ಸಂಭವಿಸುವ ಕ್ಷಣ ಮತ್ತು ಅದು ಸುದ್ದಿಯಾಗಿ ಪ್ರಕಟ / ಪ್ರಸಾರವಾಗುವ ನಡುವಣ ಸಮಯದ ಅಂತರವನ್ನು ಈಗ ಬಹುತೇಕ ಶೂನ್ಯವಾಗಿಸುವ ಸಾಧ್ಯತೆಯನ್ನು ತಂತ್ರಜ್ಞಾನ ಒದಗಿಸಿದೆ. ಆದರೆ ಈ ವೇಗಕ್ಕೆ ಅನುಗುಣವಾಗಿರುವ ಪ್ರಬುದ್ಧತೆ ತಂತ್ರಜ್ಞಾನವನ್ನು ಬಳಸುತ್ತಿರುವ ಮಾಧ್ಯಮಕ್ಕೆ ಇಲ್ಲ." ಅಷ್ಟೇ ಆಗಿದ್ದರೆ ಪರಿಸ್ಥಿತಿ ಬಿಗಡಾಯಿಸುತ್ತಿರಲಿಲ್ಲ. ಮಾಧ್ಯಮ ಪ್ರತಿನಿಧಿಗಳಿಗೆ ಅತ್ಯಂತ ಅಗತ್ಯವಾಗಿರುವುದು ತಮ್ಮ ಅರಿವಿನ ಮಿತಿಯ ಕುರಿತ ಜ್ಞಾನ. ದುರದೃಷ್ಟವಶಾತ್ ಟಿ.ವಿ. ಸ್ಟುಡಿಯೋಗಳಲ್ಲಿ ಕ್ಯಾಮೆರಾದ ನಿರೂಪಕರಾಗಿ ಕುಳಿತವರು ಕಳೆದುಕೊಂಡಿರುವುದು ಈ ಜ್ಞಾನವನ್ನು. ಪರಿಣಾಮವಾಗಿ ಅವರು ಸಕಲ ವಿಷಯಗಳ ತಜ್ಞರೂ, ಹೋರಾಟಗಾರರೂ, ಸಮಾಜ, ಸರ್ಕಾರ, ಸಂಘಟನೆಗಳಿಗೆಲ್ಲ ಬೋಧಿಸುವ ಜ್ಞಾನಿಗಳೂ ಆಗಿಬಿಡುತ್ತಾರೆ. ಪರಿಣಾಮದ ಅರಿವೇ ಇಲ್ಲದೆ ಎಲ್ಲ ಅಪೂರ್ಣ, ಅರ್ಧಸತ್ಯಗಳಿಗೆ ಇವರು ನಿಜದ ಪೋಷಾಕು ತೊಡಿಸುತ್ತಾರೆ. ಸೋಮವಾರ ಟಿ.ವಿ. ತೆರೆಗಳ ಮೇಲೆ ಇದುವೇ ಪ್ರದರ್ಶನ. ಅದರ ಪರಿಣಾಮ ಕಾಣಿಸಿದ್ದು ಮಾತ್ರ ಬೆಂಗಳೂರಿನ ಬೀದಿಗಳಲ್ಲಿ.

✶ ✶ ✶

ಕೇಂದ್ರ ಸರಕಾರದ ಕಾರ್ಮಿಕ ವಿರೋಧಿ ನೀತಿಯನ್ನು ವಿರೋಧಿಸಿ ಈಚೆಗೆ ಹಲವು ಹೋರಾಟಗಳು, ಮುಷ್ಕರಗಳು ನಡೆದಿವೆ. ಈಚೆಗೆ ಸೆಪ್ಟೆಂಬರ್ ೨ರಂದು ನಡೆದ ಮುಷ್ಕರ ಇತಿಹಾಸದಲ್ಲೇ ಅತಿ ದೊಡ್ಡದು, ವ್ಯಾಪಕವಾದ್ದು. ಕೇಂದ್ರ ಸರಕಾರದ ಮುಂದೆ ಟ್ರೇಡ್ ಯೂನಿಯನ್‌ಗಳು ಇರಿಸಿರುವ ೧೨ ಅಂಶಗಳ ಬೇಡಿಕೆಯನ್ನು ಕೇಂದ್ರ ಸರಕಾರ ಅಂಗೀಕರಿಸಲು ಸಿದ್ಧವಿಲ್ಲ. ಒಂದು ವರ್ಷದ ಹಿಂದೆ ಕೂಡ ಮೋದಿ ಸರಕಾರದ ಕಾರ್ಮಿಕ ವಿರೋಧಿ ನೀತಿಯ ವಿರುದ್ಧ ಸಾರ್ವತ್ರಿಕ ಮುಷ್ಕರ ನಡೆದಿತ್ತು. ಅದರಲ್ಲಿ ಭಾಜಪದ ಅಂಗಸಂಸ್ಥೆಗಳೂ ಭಾಗವಹಿಸಿದ್ದುವು. ಈ ಬಾರಿ ನಡೆದ ಮುಷ್ಕರಕ್ಕೆ ಹತ್ತು ಕೇಂದ್ರ ಟ್ರೇಡ್ ಯೂನಿಯನ್ ಸಂಘಟನೆಗಳು ಒಂದುಗೂಡಿದ್ದುವು. ಸುಮಾರು ೧೨೦ ಮಿಲಿಯ ಕಾರ್ಮಿಕರು ಈ ಹೋರಾಟದಲ್ಲಿ ಭಾಗಿಯಾಗಿದ್ದರು. ಕಾರ್ಮಿಕರ ಈ ಹೋರಾಟದಲ್ಲಿ ಕನಿಷ್ಠ ದಿನಗೂಲಿಯನ್ನು ೨೪೬ ರೂ.ನಿಂದ ೬೯೨ಕ್ಕೆ ಹೆಚ್ಚಿಸಬೇಕೆಂಬುದು ಮುಖ್ಯವಾದ್ದು. ಸರಕಾರ ಅದಕ್ಕೆ ಸಿದ್ಧವಿಲ್ಲ, ಬದಲಾಗಿ ಅದು ಕನಿಷ್ಠ ವೇತನವನ್ನು ರೂ. ೩೫೦ಕ್ಕೆ ಸೀಮಿತಗೊಳಿಸಿದೆ. ಇನ್ನು ಪ್ರಮುಖವಾದ ಬೇಡಿಕೆಗಳು ಸರಕಾರ ಸೂಚಿಸಿರುವ ಕಾರ್ಮಿಕ ಕಾಯಿದೆಗಳ ಬದಲಾವಣೆಗಳನ್ನು ಕೈಬಿಡಬೇಕು ಎಂಬುದು. ಸಾರ್ವಜನಿಕ ಕ್ಷೇತ್ರದಲ್ಲಿರುವ ಉದ್ಯಮಗಳ ಖಾಸಗೀಕರಣ, ಕಾರ್ಖಾನೆಗಳಲ್ಲಿ ರಿಟ್ರೆಂಚ್‌ಮೆಂಟ್‌ಗೆ (ಸಾಮೂಹಿಕವಾಗಿ ಕೆಲಸಗಾರರನ್ನು ವಜಾಗೊಳಿಸುವುದು) ಕಾನೂನಿನಲ್ಲಿ ಅವಕಾಶ ನೀಡುವುದು, ನೇಮಕಾತಿಯಲ್ಲಿ ಕಂಟ್ರಾಕ್ಟ್ ಪದ್ಧತಿಯನ್ನು ಜಾರಿಗೊಳಿಸುವುದು, ವಿದೇಶೀ ಬಂಡವಾಳ ಆಕರ್ಷಿಸಲು ಬೇಕೆನಿಸಿದಾಗ ಕೆಲಸಗಾರರನ್ನು ಕೆಲಸದಿಂದ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆನ್ನೆದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೮ ಸಂಚಿಕೆ-೩ ಅಕ್ಟೋಬರ್ ೨೦೧೬





■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೯೭೪೨೬

■ *ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೨೨೯೨೪೭೩, ೨೨೨೦೩೫೮೨
ಫ್ಯಾಕ್ಸ್: ೨೨೨೦೩೫೮೦
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಕಾವೇರಿ ಖಾಲಿಯಾಗಿದೆ; ಇಲ್ಲವೆನ್ನುತ್ತದೆ ನ್ಯಾಯಾಲಯ

**ಮ**ಳೆ ಇಲ್ಲ, ಕಾವೇರಿ ತುಂಬಿ ಹರಿಯಲಿಲ್ಲ, ಕೃಷ್ಣರಾಜಸಾಗರ ತುಂಬಲಿಲ್ಲ. ಅದು ಜಗತ್ತಿಗೆ ಕಾಣುತ್ತಿದೆ, ಆದರೆ ತಮಿಳುನಾಡು ಮುಖ್ಯಮಂತ್ರಿಗೆ ಮತ್ತು ದೆಹಲಿಯ ಸರ್ವೋಚ್ಚ ನ್ಯಾಯಾಲಯದ ಸರ್ವಜ್ಞ ಪೀಠಕ್ಕೆ ಅದು ಗೋಚರವಲ್ಲ ಅಥವಾ ಕಣ್ಣಿದ್ದೂ ಕುರುಡರಂತೆ ವರ್ತಿಸುವ ಮೊಂಡುತನ. ಅದರ ಪರಿಣಾಮವಾಗಿ ಕರ್ನಾಟಕದಲ್ಲಿ ಭುಗಿಲೆದ್ದಿತು, ಬಸ್ಸುಗಳು ಸುಟ್ಟು ಕರಕಲಾದವು. ಜನಜೀವನ ಮೂರು ದಿನಗಳ ಕಾಲ ಅಸ್ತವ್ಯಸ್ತಗೊಂಡಿತು. ರಾಜ್ಯದ ಪ್ರತಿಭಟನೆಯ ವೇಳೆಯಲ್ಲಿ ಆಗಬಾರದ ಸಂಗತಿಗಳು ಘಟಿಸಿವೆ. ಆದರೆ ಇದಕ್ಕೆಲ್ಲಾ ಸರ್ವೋಚ್ಚ ನ್ಯಾಯಾಲಯದ ತೀರ್ಪು ಮೊದಲ ಆಪಾದಿತ ಸ್ಥಾನದಲ್ಲಿ ನಿಲ್ಲಬೇಕಾಗಿದೆ. ಇಬ್ಬರ ಪೈಕಿ ಒಬ್ಬ ನ್ಯಾಯಮೂರ್ತಿ ಜಯಲಲಿತಾ ಮತ್ತು ಅಮಿತ್ ಷಾ ಇಬ್ಬರಿಗೂ ಹಿಂದೆ ವಕೀಲರಾಗಿದ್ದರೆಂಬುದು ಈ ಸಂದರ್ಭದಲ್ಲಿ ಗೌಣ, ಆದರೆ ಅದು ವಾಸ್ತವ ಕೂಡ. ನಿಜವಾದ ಪ್ರತಿಭಟನೆಯು ತಮಿಳುನಾಡಿನ ಜನರ ಮೇಲಲ್ಲ, ಅಂಗಡಿ ಸುಡುವುದಲ್ಲ ಎಂಬ ತಿಳಿವಳಿಕೆ ಎಂದು ಮೂಡುತ್ತದೋ ಕಾದು ನೋಡಬೇಕು. ನಮ್ಮದೇ ಸ್ವತ್ತುಗಳನ್ನು ಹಾಳುಮಾಡಿಕೊಳ್ಳುವುದು ಪ್ರತಿಭಟನೆ ಎನಿಸಿಕೊಳ್ಳುವುದಿಲ್ಲ. ಅದು ನಮ್ಮ ಬಂಧನವನ್ನು ನಾವೇ ಬಿಗಿ ಮಾಡಿಕೊಂಡಂತಾಗುತ್ತದೆ.

ಎರಡನೆಯದಾಗಿ, ಸ್ವಾತಂತ್ರ್ಯಾನಂತರ ೧೯೨೪ರ ಕಾವೇರಿ ನೀರಿನ ಹಂಚಿಕೆಯ ಸೂತ್ರವನ್ನು ಪರಿಷ್ಕರಿಸುವುದರ ಬದಲು ಇದ್ದುದನ್ನು ಇದ್ದಂತೆಯೇ ಮುಂದುವರಿಸಿಕೊಂಡು ಬಂದಿದ್ದು ಇಂದು ಕುತ್ತಿಗೆಯ ಸುತ್ತ ರಾಗಿಕಲ್ಲು ಹೇರಿಕೊಂಡಂತೆ ಆಗಿದೆ. ಹಿಂದಿನ ಸೂತ್ರವನ್ನು ಸ್ವಲ್ಪ ಬದಲಾಯಿಸಲಾಗಿದೆ; ಆದರೆ, ಆಮೂಲಾಗ್ರ ಬದಲಾವಣೆ ಆಗಬೇಕಾಗಿದೆ.

ನೀರೆಷ್ಟಿದೆ ಮತ್ತು ಎಷ್ಟನ್ನು ನೆರೆರಾಜ್ಯಕ್ಕೆ ಒದಗಿಸಬಹುದು ಎಂಬುದನ್ನು ತಿಳಿಯಲು ನ್ಯಾಯಾಲಯವು ಕನಿಷ್ಠ ಒಂದು ಪರಿಣತರ ತಂಡವನ್ನು ಕೃಷ್ಣರಾಜಸಾಗರಕ್ಕೆ ಕಳಿಸಬಹುದಿತ್ತು. "ಅದರ ಅಗತ್ಯವಿಲ್ಲ, ನಮಗೆಲ್ಲ ತಿಳಿದಿದೆ" ಎಂದು ನ್ಯಾಯಾಲಯವು ಘೋಷಿಸಿದ್ದು ಗೌರವವನ್ನು ಹೆಚ್ಚಿಸಿಕೊಳ್ಳುವ ಕ್ರಮವಂತೂ ಆಗಲಿಲ್ಲ. ವಿಚಾರಣೆಯ ಹಲವು ಹಂತಗಳಲ್ಲಿ ನ್ಯಾಯಾಲಯವು ಬಳಸಿದ ಭಾಷೆಯು ರುಚಿಕರವಾಗಿರಲಿಲ್ಲ. ಪ್ರಜಾಪ್ರಭುತ್ವದಲ್ಲಿ ಅಂತಹ ಕಟುಭಾಷೆಗೆ ಸ್ಥಾನವಿಲ್ಲ ಮತ್ತು ನಮ್ಮ ಸಂವಿಧಾನದ ಪ್ರಾಥಮಿಕ ಪಾಠಗಳನ್ನು ಪುನರಾವರ್ತನೆ ಮಾಡಿ ಹೇಳಿಕೊಡುವ ಅಗತ್ಯವೂ ಇಲ್ಲ. ನಮ್ಮ ರಾಜ್ಯವು ದೇಶದ ಒಕ್ಕೂಟದ ಅವಿಭಾಜ್ಯ ಅಂಗವೆಂದು ತಿಳಿದೇ ವರ್ತನೆಯಲ್ಲಿ ತೊಡಗಿದ್ದೇವೆ. ಕೇಂದ್ರ ಮತ್ತು ರಾಜ್ಯಗಳಲ್ಲಿ ಯಾರು ಅಧಿಕಾರದಲ್ಲಿದ್ದರೂ ಕಾವೇರಿ ತುಂಬಿ, ಇಲ್ಲವೆ ತೆಳುವಾಗಿ, ಹರಿಯುವುದು ಪ್ರಕೃತಿಯ ಆಣತಿಯಂತೆಯೇ. ಇರುವ ನೀರನ್ನು ಇಡಿಯಾಗಿ ಹರಿಸಿಬಿಟ್ಟರೆ ನಾಳಿನ ಕಡುಸಂದರ್ಭವನ್ನು ನಿಭಾಯಿಸುವುದು ಹೇಗೆಂಬುದಕ್ಕೆ ಯಾರಲ್ಲೂ ಉತ್ತರವಿರುವುದಿಲ್ಲ.

ರಾಜ್ಯದ ಅಡ್ವೊಕೇಟ್ ಜನರಲ್ ಆಗಿದ್ದ ಶ್ರೀ. ಬಿ. ವಿ. ಆಚಾರ್ಯ ಅವರ ವಾದವನ್ನು ರಾಜ್ಯ ಸರ್ಕಾರವು ಗಂಭೀರವಾಗಿ ಪರಿಗಣಿಸಬೇಕಿತ್ತು. ಈಗಲೂ ಅದನ್ನು ಮಾಡುವ ಅವಶ್ಯಕತೆ ಇದೆ. ಅವರ ಪ್ರಕಾರ ಸರ್ವೋಚ್ಚ ನ್ಯಾಯಾಲಯವು ಈಗ ನೀಡಿರುವ ತೀರ್ಪು ಕಾನೂನುಬದ್ಧವಲ್ಲ, ಏಕೆಂದರೆ ಬೇರೊಂದು ಅಂಗಸಂಸ್ಥೆಗೆ ಕಾವೇರಿ ನೀರಿನ ಹಂಚಿಕೆಯ ಜವಾಬ್ದಾರಿಯನ್ನು ವಹಿಸಿಕೊಟ್ಟಿರುವುದರಿಂದ ಆ ಬಗ್ಗೆ ನ್ಯಾಯಾಲಯವು ಸ್ವತಃ ತೀರ್ಪು ನೀಡುವುದು ಅಸಂಗತ. ರಾಜ್ಯದಲ್ಲಿ ಕುಡಿಯುವ ನೀರು ಮತ್ತು ಕೃಷಿಯ ಅಗತ್ಯಗಳೆರಡನ್ನೂ ಪರಿಶೀಲಿಸಿ ಎಷ್ಟು ನೀರನ್ನು ತಮಿಳುನಾಡಿಗೆ ಹರಿಸಬಹುದಿತ್ತೆಂಬುದು ಮೂಲಭೂತ ಪ್ರಶ್ನೆ. ಒಮ್ಮೆ ಇಂತಿಷ್ಟು ಎಂದು ನಿಗದಿಪಡಿಸಿ ಇನ್ನೊಮ್ಮೆ ಅದನ್ನು ಹೆಚ್ಚಿಸಿದ ನ್ಯಾಯಾಲಯವು ಅದಾವ ಕಾನೂನಿನಡಿ ಆಜ್ಞೆ ನೀಡಿತೆಂಬುದನ್ನು ತಿಳಿಯುವ ಹಕ್ಕು ನಮ್ಮ ರಾಜ್ಯದ ಜನತೆಗಿದೆ. ಮಳೆ ಬಾರದೆ ಸಂಕಷ್ಟ ಸ್ಥಿತಿ ಉಂಟಾದಾಗ ಸಂಕಷ್ಟದ ಪರಿಣಾಮವನ್ನು ಗುರುತಿಸಿ ಅದರ ಆಧಾರದ ಮೇಲೆ ನೀರಿನ ಹಂಚಿಕೆ ನಡೆಯಬೇಕೆಂಬುದು ಸಾಮಾನ್ಯಜ್ಞಾನ. ಸಂಕಷ್ಟ ಕಾಲದ ಸೂತ್ರವನ್ನು ಕರ್ನಾಟಕ, ತಮಿಳುನಾಡು ಮತ್ತು ಕೇರಳ ಸರ್ಕಾರಗಳ ಭಾಗವಹಿಸುವಿಕೆಯಿಂದ ತೀರ್ಮಾನಿಸಬೇಕು. ಅದಕ್ಕೆ ಪರಿಣತರ ಭಾಗವಹಿಸುವಿಕೆ ಬೇಕು. ತಮಿಳುನಾಡಿನಲ್ಲಿ ಅಂತರ್ಜಲವನ್ನು ಮಾಪನ ಮಾಡಿ ಅದನ್ನು ಹೊರತೆಗೆಯುವ ಬಗೆಗೂ ಒಂದು ನಿರ್ಧಾರಕ್ಕೆ ಬರಬೇಕು. ಇದಾವುದನ್ನೂ ಗಣನೆಗೆ ತೆಗೆದುಕೊಳ್ಳದೆ "ಇರುವ ನೀರನ್ನು ಬಿಡಿ, ಆಮೇಲೆ ಮುಂದಿನ ಚರ್ಚೆ ನೋಡೋಣವಂತೆ" ಎಂಬ ಧೋರಣೆಯು ಅಂಗೀಕಾರಕ್ಕೆ ಸರ್ವಥಾ ಅರ್ಹವಲ್ಲ.

ಈ ನಿಟ್ಟಿನಲ್ಲಿ ದೇಶದ ಪ್ರಧಾನಿಗೆ ಒಂದು ಪ್ರಧಾನ ಪಾತ್ರವಿದೆ. ಪುದುಚೇರಿಯೂ ಸೇರಿದಂತೆ ನಾಲ್ಕೂ ರಾಜ್ಯಗಳ ಮುಖ್ಯಮಂತ್ರಿಗಳ ಸಭೆಯನ್ನು ಕರೆದು ಪರಿಣತರ ಸಮಕ್ಷಮದಲ್ಲಿ ಸಂಕಷ್ಟಕ್ಕೆ ತಕ್ಕಂತೆ ನೀರಿನ ಹಂಚಿಕೆಗೆ ಸೂತ್ರಗಳನ್ನು ಹೆಣೆಯಬೇಕು. ಹೊಸೂರು ಮತ್ತು ಬೆಂಗಳೂರಿನ ನಡುವೆ ರಾಜ್ಯಗಳ ಗಡಿಗಳ ಎರಡು ಕಡೆ ಇಬ್ಬರು ಮುಖ್ಯಮಂತ್ರಿಗಳು ಕೂತು ನಡೆಸುವ ಚರ್ಚೆಯು ಅಸಂಬದ್ಧವಾಗಿರುತ್ತದೆ. ಹಿಂದೊಮ್ಮೆ ತಮಿಳುನಾಡು ಮುಖ್ಯಮಂತ್ರಿ ಜಂಟೀ ಸಭೆಗೆ ತಮ್ಮದೇ ಕುರ್ಚಿ ಹೊತ್ತು ತಂದಿದ್ದರು! ಪ್ರಧಾನಿ ಒಂದು ಸಭೆಯನ್ನು ಕರೆದರೆ ಯಾರೂ ತಮ್ಮ ತಮ್ಮ ಕುರ್ಚಿ ಹೊತ್ತುಕೊಂಡು ಹೋಗಬೇಕಾಗುವುದಿಲ್ಲ. ನಮ್ಮ ರಾಜ್ಯದ ಭಾರತೀಯ ಜನತಾ ಪಕ್ಷದ ನಾಯಕರು "ಇದರಲ್ಲಿ ಪ್ರಧಾನಿಯ ಪಾತ್ರವೇನೂ ಇಲ್ಲ" ಎಂದು ಹೇಳುತ್ತಾ ಪ್ರಧಾನಿಯ ಕಾರ್ಯವ್ಯಾಪ್ತಿಗೆ ಸಂಚುಂಟುಮಾಡುತ್ತಿದ್ದಾರೆ. ಸಂಕಷ್ಟ ಕಾಲದ ಸೂತ್ರವನ್ನು ರೂಪಿಸುವುದು ಪ್ರಧಾನಿಯವರ ಕಕ್ಷೆಗೆ ಬರದಿದ್ದರೆ ಬೇರಿನ್ನಾರ ಕಕ್ಷೆಗೆ ಬರುತ್ತದೆ? ಪ್ರಧಾನಿಯವರಾಗಲಿ, ಬೇರೆಯವರಾಗಲಿ ನಾಳಿನ ರಾಜಕೀಯ ಮೈತ್ರಿಯ ಸಾಧ್ಯತೆಯನ್ನು ಲೆಕ್ಕಾಚಾರ ಮಾಡಿಕೊಂಡು ನೀರಿನ ಹಂಚಿಕೆಯ ವಿಷಯದಲ್ಲಿ ರಾಜ್ಯಗಳ ಜನತೆಗೆ ಎರಡು ಬಗೆಯಬಾರದು. ಕರ್ನಾಟಕದಲ್ಲಿ ಅರುಣಾಚಲ ಪ್ರದೇಶದ ರಾಜಕೀಯವನ್ನೇನಾದರೂ ಮಾಡುವ ಹುನ್ನಾರ ಪ್ರಧಾನಿಯವರದೆ?

ಈ ಮಧ್ಯೆ ಕರ್ನಾಟಕ ಮತ್ತು ಮದ್ರಾಸ್ ಉಚ್ಚ ನ್ಯಾಯಾಲಯಗಳಲ್ಲಿ ನ್ಯಾಯಮೂರ್ತಿಯಾಗಿದ್ದ ಶ್ರೀ. ಸಿ. ಶಿವಪ್ಪನವರು ಕರ್ನಾಟಕ ಸರ್ಕಾರದ ಒಂದು ಲೋಪವನ್ನು ಗುರುತಿಸಿದ್ದಾರೆ. ಮಳೆ ಬಾರದಿದ್ದ ಸಂದರ್ಭದಲ್ಲಿ ಕೂಡಲೇ ನೀರಿನ ಪ್ರಮಾಣವು ನಿಗದಿತವಾದಂತೆ ಇರಲಾಗದೆಂಬುದನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ತಿಳಿಸಬೇಕಾಗಿತ್ತೆಂಬುದು ಅವರ ಮಾತು. ಕರ್ನಾಟಕ ಸರ್ಕಾರವು ಇದನ್ನು ಆಗಾಗ್ಗೆ ಮಾಡುತ್ತಿರಬೇಕು. ನಮ್ಮ ರಾಜ್ಯದ ನಾಚಿಕೆಗೇಡಿನ ಒಂದು ನಡತೆಯೆಂದರೆ ನ್ಯಾಯಾಲಯದಲ್ಲಿ ನಮ್ಮ ವಾದ ಮಂಡಿಸಲು ನಮ್ಮ ರಾಜ್ಯದ ವಕೀಲರನ್ನು ಕೇಳಿಕೊಳ್ಳದೆ ಆಮೇಲೆ ಅವರ ಸಲಹೆ ಪಡೆಯಲು ಸಭೆ ಕರೆಯುವ ಪರಿಪಾಠ.

ಈ ವರ್ಷದ ಕೆಟ್ಟ ಅನುಭವ ಮತ್ತೆಂದೂ ಉಂಟಾಗದಿರುವಂತೆ ಕಾನೂನಿನ ತೊಡಕುಗಳನ್ನು ಶೀಘ್ರಗತಿಯಲ್ಲಿ ನಿವಾರಿಸಿಕೊಳ್ಳಬೇಕಾದ್ದು ಇಂದಿನ ತುರ್ತು ಅಗತ್ಯ. ಬರುವ ತಿಂಗಳುಗಳಲ್ಲಿ ಕುಡಿಯುವ ನೀರಿಗೆ ಅಭಾವ ಉಂಟಾಗದಂತೆ ನೀರನ್ನು ಬಳಸುವುದರಲ್ಲಿ ಶಿಸ್ತು ಮೂಡಿಸಬೇಕಾದ ಕರ್ತವ್ಯವೂ ಇದೆ.

ನಿರೀಕ್ಷಿಸಿದ್ದಂತೆ ಇನ್ನೊಂದು ತೀರ್ಪು ಹೊರಬಂದಿದೆ, ಅದರೊಂದಿಗೆ ಮುಂದಿನ ಪ್ರಕರಣ ತೆರೆದುಕೊಳ್ಳುತ್ತಿದೆ. ಸರ್ವೋಚ್ಚ ನ್ಯಾಯಾಲಯದ ಸೆಪ್ಟೆಂಬರ್ ೧೯ರ ತೀರ್ಪು ಸರ್ವಥಾ ಕ್ರೂರವಾದ್ದು, ಅಸಂಬದ್ಧವಾದ್ದು. ನಮ್ಮ ರಾಜ್ಯದ ಕಾವೇರಿ ನೀರಿನ ಉಸ್ತುವಾರಿಯನ್ನು ಇಡಿಯಾಗಿ ನಂಬಲರ್ಹವಲ್ಲದ ಒಂದು ಸಮಿತಿಗೆ ವಹಿಸಬೇಕಂತೆ! ನಾವು ಹಣ ವ್ಯಯಿಸಿ ಕಟ್ಟಿರುವ ಕಟ್ಟೆಗಳ ದೊಣೆನಾಯಕರು ಬೇರೆ ಯಾರೋ ಆಗಬೇಕೆಂಬ ತೀರ್ಪಿಗೆ ಎಷ್ಟು ಛೀಮಾರಿ ಹಾಕಿದರೂ ಸಾಲದು. ಆದಾಗ್ಯೂ ಭಾರತೀಯ ಜನತಾ ಪಕ್ಷವು ಅದನ್ನು ಕುರಿತು ಏನನ್ನೂ ಹೇಳದೆ ಮೋದಿಯಂತೆ ಮೌನವಾಗಿದೆ. ಇಡೀ ಪ್ರಸಂಗವು ನಮ್ಮ ರಾಜ್ಯದ ವಿರುದ್ಧದ ಷಡ್ಯಂತ್ರದಂತೆ ತೋರುತ್ತಿದೆ. ನಮ್ಮ ಕೃಷ್ಣರಾಜ ಸಾಗರ ಈಗಾಗಲೇ ಖಾಲಿಯಾಗಿದ್ದರೂ ಇನ್ನೂ ನೀರು ಹರಿಸುತ್ತಲೇ ಇರಬೇಕೆಂದು ನ್ಯಾಯಾಲಯ ಆಜ್ಞೆ ಮಾಡಿದೆ. ಅಂದರೆ, ಕರ್ನಾಟಕವು ನೀರನ್ನು ಸೃಷ್ಟಿಸುವ ಕಲೆಯನ್ನು ಕಲಿಯಬೇಕಾಗಿದೆ. ರಾಜ್ಯದ ಮುಖ್ಯಮಂತ್ರಿ ಹೇಳಿರುವಂತೆ ಸದ್ಯದಲ್ಲಿ ಇನ್ನೊಂದು ಹನಿ ನೀರನ್ನೂ ಕೊಡಲಾಗದು. ಅದಕ್ಕೆ ಇಡೀ ರಾಜ್ಯ ಬದ್ಧವಾಗಬೇಕು. ಅದಕ್ಕೆ ಅಪಸ್ವರ ಎಳೆಯುವವರು ಬೇರೆ ಏನೇ ಸಮಜಾಯಿಷಿ ನೀಡಲಿ, ಅವರು ನಮ್ಮ ಪ್ರತಿನಿಧಿಗಳಾಗಿರಲು ಅನರ್ಹರಾಗುತ್ತಾರೆ.

ಶಾಸನ ಸಭೆಯ ವಿಶೇಷ ಅಧಿವೇಶನವನ್ನು ಸೆಪ್ಟೆಂಬರ್ ೨೩ರಂದು ನಡೆಸುವ ಸಾಧ್ಯತೆಯಿದೆಯೆಂದು ವರದಿಯಾಗಿದೆ. ಸದ್ಯದ ನೀರಿನ ಪರಿಸ್ಥಿತಿಯನ್ನಲ್ಲದೆ, ಕಾವೇರಿ ನೀರಿನ ಹಂಚಿಕೆಯ ವಿಷಯವಾಗಿ ಸಮಗ್ರವಾದ ನಿಲುವೊಂದನ್ನು ರೂಪಿಸಲು ಸಭೆಯು ಯಶಸ್ವಿಯಾಗುತ್ತದೆ ಎಂದು ನಿರೀಕ್ಷಿಸಲಾಗುತ್ತದೆ. ಅದರಲ್ಲೂ ಒಮ್ಮತ ಮೂಡಬೇಕೆಂಬುದು ಜನತೆಯ ಆಶಯ. (೨೦-೦೯-೨೦೧೬)

## ಡಾ॥ ಕಲಬುರ್ಗಿ ಹತ್ಯೆಗೆ ಒಂದು ವರ್ಷ

ವಿಚಾರವಾದಿ, ಸಂಶೋಧಕ ಡಾ॥ ಎಂ. ಎಂ. ಕಲಬುರ್ಗಿಯವರ ಹತ್ಯೆಯಾಗಿ ಕಳೆದ ಆಗಸ್ಟ್ ೩೦ಕ್ಕೆ ಸರಿಯಾಗಿ ಒಂದು ವರ್ಷ ಕಳೆಯಿತು. ಹತ್ಯೆ ಮಾಡಿದ ವ್ಯಕ್ತಿಗಳ್ಯಾರು ಎಂಬುದು ಇಂದಿಗೂ ಪತ್ತೆಯಾಗಿಲ್ಲ. ಕಲಬುರ್ಗಿಯವರ ಹತ್ಯೆ ಮಾತ್ರವಲ್ಲ, ಅವರಿಗಿಂತಲೂ ಮುಂಚೆ ಹತ್ಯೆಯಾದ



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಮಹಾರಾಷ್ಟ್ರದ ನರೇಂದ್ರ ದಾಭೋಲ್ಕರ್ ಮತ್ತು ಗೋವಿಂದ ಪಾನ್ಸರೆಯವರ ಹತ್ಯೆಯ ತನಿಖೆಯೂ ಅಷ್ಟೇ ಮಂದಗತಿಯಲ್ಲಿ ನಡೆದಿದೆ. ಆದರೆ ಅಲ್ಲಿ ನ್ಯಾಯಾಂಗದ ಮಧ್ಯಪ್ರವೇಶದಿಂದಾಗಿ ತನಿಖೆ ಸ್ವಲ್ಪ ಚಾಲನೆ ಪಡೆದಿದೆ. ಪರಿಣಾಮ ಮಾತ್ರ ಹತ್ಯೆಯ ಹಿಂದಿನ ಶಕ್ತಿಗಳನ್ನು ಪತ್ತೆ ಹಚ್ಚುವಲ್ಲಿ ಸರ್ಕಾರಗಳು ವಿಫಲವಾಗಿವೆ. ಡಾ॥ ಕಲಬುರ್ಗಿಯವರ ಹತ್ಯೆಯ ಒಂದು ವರ್ಷದ ನಂತರ ಕರ್ನಾಟಕ ಸರ್ಕಾರ ಮತ್ತು ತನಿಖಾ ಸಂಸ್ಥೆ ಈ ಹತ್ಯೆ ವೈಚಾರಿಕ ಹಿನ್ನೆಲೆಯಲ್ಲಿ ನಡೆದಿದೆ ಎಂಬುದನ್ನು ಮತ್ತು ಮಹಾರಾಷ್ಟ್ರದಲ್ಲಿ ನಡೆದ ದಾಭೋಲ್ಕರ್ ಹಾಗೂ ಪಾನ್ಸರೆ ಹತ್ಯೆ ಏಕರೂಪಿಯಾಗಿವೆ ಎನ್ನುವ ತೀರ್ಮಾನಕ್ಕೆ ಬಂದಿದ್ದಾರೆ. ಅಲ್ಲಿಗೆ ಹತ್ಯೆಯ ಹಿಂದಿನ ಶಕ್ತಿ ಯಾವುದು ಎಂಬುದು ಸ್ಪಷ್ಟವಾಗಿದೆ. ಆದರೆ ವ್ಯಕ್ತಿಗಳ ಬಗೆಗೆ ಮಾಹಿತಿ ಲಭ್ಯವಾಗಿಲ್ಲ. ತನಿಖೆಯ ಗತಿಯನ್ನು ನೋಡಿದರೆ ಮುಂದೊಂದು ದಿನ ತನಿಖಾ ಸಂಸ್ಥೆಗಳು ಕೈಚಲ್ಲಬಹುದೇನೋ ಎಂಬ ಅನುಮಾನ, ಆತಂಕ ವ್ಯಕ್ತವಾಗುತ್ತಿದೆ. ವಿಶ್ವದ ಕೆಲವು ಖ್ಯಾತನಾಮರ ಹತ್ಯೆಗಳು ತನಿಖೆಯ ತಾರ್ಕಿಕ ಅಂತ್ಯ ಕಾಣದೆ ನಿಗೂಢವಾಗಿ ಉಳಿದಿರುವ ಉದಾಹರಣೆಗಳು ನಮ್ಮ ಮುಂದಿವೆ.

ದೇಶದಲ್ಲಿ ವಿಚಾರವಾದಿಗಳ ಮೇಲಿನ ಹಲ್ಲೆ ಮತ್ತು ಹತ್ಯೆಗಳು ನಿರಂತರವಾಗಿ ನಡೆಯುತ್ತಿವೆ. ವಿಚಾರವಾದಿಗಳ ವಿರುದ್ಧ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ದಮನ ಮಾಡಲು ಮತಾಂಧ ಶಕ್ತಿಗಳು ದಾಳಿಗಿಳಿದಿವೆ. ಆದರೆ ಸರಕಾರಗಳು ಅಂಥ ಮತಾಂಧ ಶಕ್ತಿಗಳನ್ನು ನಿಯಂತ್ರಿಸಲು ವಿಫಲವಾಗಿರುವುದು, ಇಚ್ಛಾಶಕ್ತಿಯನ್ನು ತೋರದೇ ಇರುವುದು ಆತಂಕಕಾರಿಯಾದ ವಿಷಯವಾಗಿದೆ. ಇದು ಹತ್ಯಾವಾದಿಗಳ, ಮತಾಂಧ ಶಕ್ತಿಗಳ ದೌರ್ಜನ್ಯದ ಮನೋಭಾವ ವೃದ್ಧಿಗೆ ಪೂರಕವಾಗುತ್ತದೆಯೇ ಹೊರತು ಹತ್ಯೆಯ ಕುರಿತು ಅವರಲ್ಲಿ ಭಯವನ್ನಾಗಲಿ ಪಶ್ಚಾತಾಪವನ್ನಾಗಲಿ ಉಂಟುಮಾಡುವುದಿಲ್ಲ. ಇಷ್ಟು ಸುಲಭವಾಗಿ ತಮ್ಮನ್ನು ವಿರೋಧಿಸುವ, ಪ್ರಶ್ನಿಸುವ ವ್ಯಕ್ತಿಗಳನ್ನು ಕೊಲ್ಲಬಹುದು, ಕೊಂದು ದಕ್ಕಿಸಿಕೊಳ್ಳಬಹುದು ಎಂಬ ವಾತಾವರಣ ಉಂಟಾದರೆ ಪ್ರಭುತ್ವಕ್ಕೆ ಪರ್ಯಾಯವಾದ ಶಕ್ತಿಯೊಂದು ಅನಿಯಂತ್ರಿತವಾಗಿ ಬೆಳೆಯುತ್ತದೆ. ಇದು ಯಾವುದೇ ಸಿದ್ಧಾಂತದ ಪಕ್ಷಕ್ಕೂ, ಸರ್ಕಾರಕ್ಕೂ ಒಳ್ಳೆಯದಲ್ಲ. ಇಂದು ಮತಾಂಧ ಶಕ್ತಿಗಳನ್ನು ನಿಯಂತ್ರಿಸದೇ ಇದ್ದರೆ ಡಾ॥ ಕಲಬುರ್ಗಿಯವರ ಹತ್ಯೆಯಂಥ ಘಟನೆಗಳು ಮರುಕಳಿಸುತ್ತಲೇ ಹೋಗುತ್ತವೆ. ಆಗ ಪ್ರಭುತ್ವದ ಮೇಲೆ, ಪ್ರಭುತ್ವದ ತನಿಖಾ ಸಂಸ್ಥೆಗಳ ಮೇಲೆ ವಿಶ್ವಾಸ ಕಳೆದುಕೊಂಡು ಮತಾಂಧ ಶಕ್ತಿಗಳಿಂದ ದಮನಕ್ಕೊಳಗಾದ ಜನತೆ ತಮ್ಮ ತಮ್ಮ ರಕ್ಷಣೆಗಾಗಿ ತಾವೇ ಸಿದ್ಧರಾದರೆ ನಾಗರಿಕ ಸಂಘರ್ಷ, ಅಂದರೆ ಸಿವಿಲ್ ವಾರ್ ಆರಂಭವಾಗುತ್ತದೆ.

ಕಲಬುರ್ಗಿಯವರ ಹತ್ಯೆಯಾದ ಒಂದು ವರ್ಷದ ಸಂದರ್ಭದಲ್ಲಿ ಧಾರವಾಡ ನಗರದಲ್ಲಿ ಕಳೆದ ಆಗಸ್ಟ್ ೩೦ರಂದು 'ಡಾ॥ ಕಲಬುರ್ಗಿ, ದಾಭೋಲ್ಕರ್, ಪಾನ್ಸರೆ ಹತ್ಯಾವಿರೋಧಿ ಹೋರಾಟ ಸಮಿತಿ'ಯವರು ಪ್ರತಿಭಟನಾ ಸಮಾವೇಶವನ್ನು ಹಮ್ಮಿಕೊಂಡಿದ್ದರು. ಧಾರವಾಡ ನಗರ, ಕರ್ನಾಟಕ ರಾಜ್ಯ ಹಾಗೂ ದೇಶದ ವಿವಿಧ ಭಾಗಗಳಿಂದ ಚಿಂತಕರು, ಬುದ್ಧಿಜೀವಿಗಳು, ಸಾಹಿತಿ, ಕಲಾವಿದರು, ಪ್ರಗತಿಪರ ಸಂಘಟನೆಗಳು, ವಿದ್ಯಾರ್ಥಿಗಳೂ ಸೇರಿದಂತೆ ಹತ್ತು ಸಾವಿರಕ್ಕೂ ಹೆಚ್ಚಿನ ಜನ ಭಾಗವಹಿಸಿದ್ದ ಈ ಸಮಾವೇಶ ಮಹತ್ವದ ಸಂದೇಶವನ್ನು ಸರ್ಕಾರಗಳಿಗೂ ಮತಾಂಧ ಶಕ್ತಿಗಳಿಗೂ ರವಾನಿಸಿದೆ. ಸಾಹಿತಿಗಳು ಮತ್ತು ಕಲಾವಿದರ ಜೊತೆ ರಾಜ್ಯದ ಜನಪರ, ಪ್ರಗತಿಪರ ಸಂಘಟನೆಗಳ ಪ್ರತಿನಿಧಿಗಳು ಭಾಗವಹಿಸಿದ ಈ ಸಮಾವೇಶ ತಮ್ಮ ಎಲ್ಲ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಮತಾಂಧಶಕ್ತಿಗಳ ವಿರುದ್ಧ, ನಿಷ್ಕ್ರಿಯ ಸರ್ಕಾರದ ವಿರುದ್ಧ ಒಂದಾಗಿ ಎದ್ದುನಿಂತ ವೇದಿಕೆಯಾಗಿತ್ತು. ಕೊಲೆ ಮಾಡಿ ತಪ್ಪಿಸಿಕೊಂಡ, ಪರೋಕ್ಷವಾಗಿ ಕೊಲೆಗಡುಕರಿಗೆ ರಕ್ಷಣೆ ಕೊಡುತ್ತಿರುವ ಶಕ್ತಿಗಳ ವಿರುದ್ಧ ಮಾತ್ರವಲ್ಲ, ಪ್ರಜಾಸತ್ತೆಯನ್ನು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ರಕ್ಷಿಸುವಲ್ಲಿ ವಿಫಲವಾದ ಸರಕಾರಗಳ ವಿರುದ್ಧವೂ ತೀವ್ರವಾದ ಆಕ್ರೋಶ ಅಲ್ಲಿ ವ್ಯಕ್ತವಾಯಿತು. ಕೋಮುವಾದವನ್ನು ಪ್ರತಿಪಾದಿಸುವ ಪ್ರಚೋದಿಸುವ ಇಂದಿನ ಕೇಂದ್ರದ, ಕೆಲವು ರಾಜ್ಯಗಳ ಬಿ.ಜೆ.ಪಿ. ನೇತೃತ್ವದ ಆಡಳಿತದ ಸರಕಾರಗಳು ಇದರಿಂದ ಪಾಠ ಕಲಿಯುವುದಿಲ್ಲ. ಅವುಗಳ ಉದ್ದೇಶವೇ ಮತಾಂಧ ಶಕ್ತಿಗಳನ್ನು ಬೆಳೆಸಿ ತಮ್ಮ ರಾಜಕೀಯದ ನೆಲೆಯನ್ನು ಕಂಡುಕೊಳ್ಳುವುದು. ಆದರೆ ಕರ್ನಾಟಕದ ಕಾಂಗ್ರೆಸ್ ಸರಕಾರ ಇನ್ನಾದರೂ ಕಲಬುರ್ಗಿಯವರ ಹತ್ಯೆಯನ್ನು, ಹತ್ಯೆಯ ಹಿಂದಿನ ಶಕ್ತಿಗಳನ್ನು ಗಂಭೀರವಾಗಿ ಪರಿಗಣಿಸಬೇಕು. ಧಾರವಾಡದ ಸಮಾವೇಶ ನಡೆದ ಒಂದು ವಾರದಲ್ಲಿಯೇ ರಾಜ್ಯದ ಗೃಹಮಂತ್ರಿ ಡಾ॥ ಪರಮೇಶ್ವರ ಅವರು ಪ್ರಗತಿಪರ ಚಿಂತಕರನ್ನು, ಸಾಹಿತಿಗಳನ್ನು, ಡಾ॥ ಕಲಬುರ್ಗಿಯವರ ಕುಟುಂಬ ಸದಸ್ಯರನ್ನು ಕರೆದು ಸಭೆ ನಡೆಸಿ ಮಾತನಾಡಿದ್ದಾರೆ. ಕಲಬುರ್ಗಿಯವರ ಹತ್ಯೆಯ ಕುರಿತ ತನಿಖಾ ಸಂಸ್ಥೆಯ ಮುಖ್ಯಸ್ಥರನ್ನು ಕರೆದು ತನಿಖೆಯ ಕೆಲವು ವಿವರಗಳನ್ನು ಕೊಟ್ಟು ತಾವು ನಡೆಸಿದ ಪ್ರಯತ್ನಗಳನ್ನು ಮನಗಾಣಿಸಿದ್ದಾರೆ. ಧಾರವಾಡದ ಆಗಸ್ಟ್ ೩೦ರ ಪ್ರತಿಭಟನಾ ಸಮಾವೇಶವನ್ನು ಕರ್ನಾಟಕ ಸರಕಾರ, ಗೃಹಮಂತ್ರಿ ಗಂಭೀರವಾಗಿ ಪರಿಗಣಿಸಿದ್ದಾರೆ ಎಂಬುದನ್ನು ಇದು ತೋರಿಸುತ್ತದೆ. ಕಲಬುರ್ಗಿಯವರ ಹತ್ಯೆಯ ವಿಷಯದಲ್ಲಿ ಸರಕಾರ ತೋರಿಸುವ ಈ ಗಂಭೀರತೆಯನ್ನು ರಾಜ್ಯದಲ್ಲಿ ಮತಾಂಧ ಶಕ್ತಿಗಳನ್ನು ನಿಯಂತ್ರಿಸುವಲ್ಲಿ ತೋರುತ್ತಿಲ್ಲ. ಒಂದು ಕಡೆ ಗೋರಕ್ಷಾ ಹೆಸರಿನಲ್ಲಿ ದಾಳಿ ಮತ್ತು ಕೊಲೆಗಳು ನಡೆಯುತ್ತಿವೆ. ಹುಸಿ ದೇಶಪ್ರೇಮಿಗಳಿಂದ 'ರಾಜದ್ರೋಹ', 'ದೇಶದ್ರೋಹ'ದ ಆರೋಪಗಳು ದಾಖಲಾಗುತ್ತಿವೆ. ಸ್ವತಃ ಆಡಳಿತ ಪಕ್ಷದ ಸದಸ್ಯೆ, ಮಾಜಿ ಸಂಸದೆ ರಮ್ಯಾ ವಿರುದ್ಧ ಹುಸಿ ಆರೋಪಗಳನ್ನು ಮಾಡಿ ಅಪಪ್ರಚಾರ ನಡೆಸಿದ ಕೋಮುವಾದಿಗಳ ಅಟ್ಟಹಾಸದ ವಿರುದ್ಧ ಕಾಂಗ್ರೆಸ್ ಪಕ್ಷ, ಸರಕಾರ ಮೌನವಾಗಿವೆ. ಕನ್ನಡದ ಖ್ಯಾತ ನಟಿಯೂ ಆಗಿರುವ ರಮ್ಯಾ ತಮ್ಮ ಹೇಳಿಕೆಯನ್ನು ಏಕಾಂಗಿಯಾಗಿ ಸಮರ್ಥಿಸಿಕೊಳ್ಳಬೇಕಾಯಿತು. ಇಂದು ಕಾಂಗ್ರೆಸ್ ಪಕ್ಷ, ಅದರ ಪದಾಧಿಕಾರಿಗಳು ಅಧಿಕಾರ ರಾಜಕಾರಣ ಮಾಡುತ್ತಿದ್ದಾರೆಯೇ ಹೊರತು ಒಂದು ಸಿದ್ಧಾಂತ ಆಧಾರದ ರಾಜಕಾರಣ ಮಾಡುತ್ತಿಲ್ಲ. ಮುಂದೆ ಅಧಿಕಾರ ಹೋದ ಮೇಲೆ ಕಾಂಗ್ರೆಸ್‌ನವರೂ ಬಿ.ಜೆ.ಪಿ. ಸೇರಿದರೆ ಆಶ್ಚರ್ಯವೇನೂ ಇಲ್ಲ. ಅದಕ್ಕಾಗಿಯೇ ಕೋಮುವಾದದ ಕುರಿತು ಹೆಚ್ಚಿನ ಕಾಂಗ್ರೆಸ್ಸಿಗರು ಮಾತನಾಡುವುದಿಲ್ಲ. ಮೌಢ್ಯವಿರೋಧಿ ಕಾನೂನು ಜಾರಿಗೆ ಬರಲು ಹಿನ್ನಡೆಯಾಗುತ್ತಿರುವುದು ಕಾಂಗ್ರೆಸ್‌ನಲ್ಲಿ ತುಂಬಿಹೋಗಿರುವ ಸಮಯಸಾಧಕ ರಾಜಕಾರಣಿಗಳ ಕಾರಣಕ್ಕಾಗಿಯೇ. ಕಾಂಗ್ರೆಸ್ ಪಕ್ಷಕ್ಕೆ ಮತ್ತು ಅದರ ಸರಕಾರಕ್ಕೆ ಕೋಮುವಾದವನ್ನು ಎದುರಿಸಿ, ವಿಚಾರವಾದ, ಅಭಿವ್ಯಕ್ತಿ ಸ್ವಾತಂತ್ರ್ಯ, ಸೌಹಾರ್ದತೆಯನ್ನು ರಕ್ಷಿಸುವ ಕಾಳಜಿ ಇಲ್ಲದೇ ಹೋದರೆ ಮುಂಬರುವ ದಿನಗಳಲ್ಲಿ ಅದು ರಾಜಕೀಯವಾಗಿಯೂ ನಿರ್ನಾಮವಾಗುತ್ತದೆ.

ಧಾರವಾಡದಲ್ಲಿ ನಡೆದ ಪ್ರಗತಿಪರ ಸಂಘಟನೆಗಳ, ಚಿಂತಕರ ಐಕ್ಯತೆ, ಅದಕ್ಕಾಗಿ ಶ್ರಮಿಸಿದ ಎಲ್ಲರೂ ಸ್ತುತ್ಯರ್ಹರು. ಆದರೆ ನಮ್ಮ ರಾಜ್ಯದ ಎಡಪಂಥೀಯ, ದಲಿತ, ಪ್ರಗತಿಪರ ಸಂಘಟನೆಗಳು, ಚಿಂತಕರು ಒಂದಾಗ ಬೇಕಾದರೆ ಫ್ಯಾಸಿಸ್ಟ್ ಶಕ್ತಿಗಳೇ ಕಾರಣವಾಗುತ್ತಿರುವುದು ದುರಂತ. ತಮ್ಮ ತಮ್ಮ ಸಿದ್ಧಾಂತಗಳನ್ನು ಪ್ರತಿಪಾದಿಸುವಾಗ ಪ್ರಗತಿಪರರೆಲ್ಲರೂ ಕಿತ್ತಾಡುತ್ತಾರೆ. ಪ್ರಗತಿಪರರ ನಡುವೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳ ಮಧ್ಯೆಯೂ ಒಂದು ಸಾಮಾನ್ಯ ಕನಿಷ್ಠ ಕಾರ್ಯಕ್ರಮ ರೂಪಿಸಿಕೊಳ್ಳುವ ಸಾಧ್ಯತೆ ಇದೆ. ಧಾರವಾಡದ ಸಮಾವೇಶ ಅದನ್ನು ತೋರಿಸಿಕೊಟ್ಟಿದೆ. ಡಾ॥ ಕಲಬುರ್ಗಿಯವರು ತಮ್ಮ ಸಾವಿನ ಮೂಲಕ ಇವರೆಲ್ಲರನ್ನೂ ಒಂದುಗೂಡಿಸಿದ್ದಾರೆ. ಈ ಒಂದುಗೂಡುವಿಕೆ ಕೇವಲ ಪ್ರತಿಭಟನೆ ಪ್ರತಿರೋಧದಲ್ಲಿ ಪರ್ಯಾವಸಾನವಾಗಬಾರದು, ಪರ್ಯಾಯ ರೂಪಿಸಲೂ ಸಹಕಾರಿಯಾಗಿಬೇಕು.

ಸಿದ್ಧನಗೌಡ ಪಾಟೀಲ

*(ಈ ತಿಂಗಳು : ೩ನೇ ಪುಟದಿಂದ)*

ತೆಗೆದುಹಾಕುವ ಅವಕಾಶವನ್ನು (ಅಂದರೆ ಹೈ ಅಂಡ್ ಫೈರ್ ಪದ್ಧತಿಯನ್ನು) ಕಲ್ಪಿಸುವುದು, ಮೊದಲಾದವುಗಳನ್ನು ಕಾರ್ಮಿಕರು ವಿರೋಧಿಸುತ್ತಿದ್ದಾರೆ. ಮೋದಿ ಸರಕಾರ ಅಧಿಕಾರಕ್ಕೆ ಬಂದನಂತರ ಅಭಿವೃದ್ಧಿಯ ಹೆಸರಿನಲ್ಲಿ ಕಾರ್ಮಿಕರ ಹಕ್ಕುಗಳ ಮೇಲೆ ಕ್ರಮಬದ್ಧವಾಗಿ ದಾಳಿ ನಡೆಯುತ್ತಿದೆ. ಕಳೆದೆರಡು ವರ್ಷಗಳಲ್ಲಿ ಉದ್ಯೋಗ ಹೆಚ್ಚುವ ಬದಲು ಕ್ಷೀಣಿಸುತ್ತಿದೆ. ಸಂಘಟಿತ ಕಾರ್ಮಿಕರ ಸ್ಥಿತಿಯೇ ಬಿಗಡಾಯಿಸಿರುವಾಗ ಇನ್ನು ಅಸಂಘಟಿತ ಕಾರ್ಮಿಕರ ಗತಿ ಏನು ? ಕೇಂದ್ರ ಸರಕಾರದ ಕಾರ್ಮಿಕ ಸಚಿವಾಲಯ ಸೂಚಿಸಿರುವ ಬದಲಾವಣೆಗಳಲ್ಲಿ ಒಂದು ೩೦೦ಕ್ಕಿಂತ ಹೆಚ್ಚು ಸಿಬ್ಬಂದಿ ಹೊಂದಿರುವ ಕಾರ್ಖಾನೆಗಳು, ಕಚೇರಿಗಳು ಸರಕಾರದ ಅನುಮತಿ ಇಲ್ಲದೆಯೇ ಎಲ್ಲ ಕೆಲಸಗಾರರನ್ನೂ ತೆಗೆದು ಹಾಕಬಹುದು. ಕಾರ್ಪೊರೇಟ್ ವಲಯ ಬಯಸುತ್ತಿರುವುದೂ ಇದನ್ನೇ. ಕನಿಷ್ಠ ವೇತನದ ನಿಷ್ಕರ್ಷೆಯಿಂದ ಕೇಂದ್ರ ಸರಕಾರ ಜಾರಿಕೊಳ್ಳಲು ಹವಣಿಸಿದೆ. ಕೇಂದ್ರ ಸರಕಾರದ ಒಡೆತನದಲ್ಲಿರುವ ಉದ್ಯಮಗಳಿಗೆ ಮಾತ್ರ ಕನಿಷ್ಠ ವೇತನವನ್ನು ನಿಗದಿ ಮಾಡಿ, ಉಳಿದದ್ದನ್ನು ರಾಜ್ಯ ಸರಕಾರಗಳ ತಲೆಗೆ ಕಟ್ಟಲು ನಿರ್ಧರಿಸಲಾಗಿದೆ. ಅಂತೂ ಮುಂದಿನ ದಿನಗಳಲ್ಲಿ ಕಾರ್ಮಿಕರ ಸ್ಥಿತಿಗತಿಗಳು ಸುಧಾರಿಸುವ ಬದಲು ಹದಗೆಡುವುದಂತೂ ಖಚಿತವಾಗಿದೆ.

* * *

ಈಗ ದೇಶದಲ್ಲೆಲ್ಲ ಗೋವಿನದೇ ಕತೆ. ಗೋರಕ್ಷಣೆಯ ಹೆಸರಿನಲ್ಲಿ ಹಿಂದುತ್ವ ಸಂಘಟನೆಗಳು ನಡೆಸುತ್ತಿರುವ ಧಂಧೆಯನ್ನು ಕುರಿತು ಹಿಂದೆಯೇ ಈ ಅಂಕಣದಲ್ಲಿ ಪ್ರಸ್ತಾಪಿಸಿದ್ದೇವೆ. ಈ ಸಲ ಮುಸಲ್ಮಾನರ ಬಕ್ರೀದ್ ಹಬ್ಬ ಭೀತಿಯ ವಾತಾವರಣದಲ್ಲೇ ಆಚರಣೆಯಾಯಿತು. ದೇಶದ ಹಲವೆಡೆ ಮಾಂಸಾಹಾರಿ ಭಕ್ಷ್ಯ 'ಬಿರಿಯಾನಿ' ಇಲ್ಲದೆಯೇ ನಡೆಯಿತು. ಭಾಜಪ ಆಡಳಿತದಲ್ಲಿರುವ ಹರಿಯಾಣದ ಮಾಂಸಾಹಾರಿ ಹೋಟೆಲೊಂದರ 'ಬಿರಿಯಾನಿ'ಯಲ್ಲಿ ಗೋಮಾಂಸ ಪತ್ತೆಹಚ್ಚಿ ಪೊಲೀಸರು ದಾಳಿ ನಡೆಸಿದ ಪ್ರಕರಣ ನೆನಪು ಮಾಡಿಕೊಂಡರೆ ಎಲ್ಲ ಅರ್ಥವಾಗುತ್ತದೆ.

ಎರಡನೇ ಅವಧಿಗೆ ಅತ್ಯಂತ ಅಧಿಕ ಬಹುಮತದಿಂದ ಅಧಿಕಾರಕ್ಕೆ ಬಂದಿರುವ ಭಾಜಪ ನೇತೃತ್ವದ ಸರಕಾರದ ಅಡಿಯಲ್ಲಿ ಗೋವು ಮತ್ತು ಅದರ ಉತ್ಪನ್ನಗಳಿಗೆ ಎಲ್ಲಿಲ್ಲದ ಪ್ರಾಶಸ್ತ್ಯ ಬಂದಿದೆ. ಕ್ಷೀರೋತ್ಪನ್ನಗಳಿಗಿಂತ ಗೋಮಾಂಸ, ಗೋಮೂತ್ರ, ಸಗಣಿಗಳಿಗೆ ಕಾಲ ಕೂಡಿಬಂದಿದೆ. 'ಪಂಚಗವ್ಯ' ಕುರಿತು ಆಯುರ್ವೇದ ವಿಜ್ಞಾನಗಳ ಕೇಂದ್ರ ಸಂಸ್ಥೆ ಈಗ ಭಾರಿ ಸಂಶೋಧನೆಯಲ್ಲಿ ತೊಡಗಿದೆ. ಏನಿದು 'ಪಂಚಗವ್ಯ' ಎಂದರೆ ? ಗೋವಿನ ಐದು ಉತ್ಪನ್ನಗಳಿಂದ ತಯಾರಾಗುವ ಒಂದು ಮಿಶ್ರಣ – ಹಾಲು, ಮೊಸರು, ತುಪ್ಪ, ಸಗಣಿ, ಗಂಜಲ ಸೇರಿಸಿರುವ ಪೇಯ. ಇದರ ಔಷಧೀಯ ಗುಣಗಳನ್ನು ಕುರಿತು ಈಗ ಸಂಶೋಧನೆ ನಡೆಯುತ್ತಿದೆ. ಹಿಂದೆ ಒಂದು ಕಾಲದಲ್ಲಿ ವಿದೇಶಗಳಿಗೆ ಹೋಗಿಬಂದ ಹಿಂದೂಗಳನ್ನು, ಮುಖ್ಯವಾಗಿ ಬ್ರಾಹ್ಮಣರನ್ನು ಶುದ್ಧೀಕರಿಸಲು ತಲೆ ಮೇಲೆ ನೀರು ಸುರಿದು, 'ಪಂಚಗವ್ಯ' ಸೇವನೆ ಮಾಡಿಸಿ ಒಳಗೆ ಬಿಟ್ಟುಕೊಳ್ಳುತ್ತಿದ್ದರು. ಈ ಪದ್ಧತಿ ಈಚೆಗೆ ಹೋಗಿದೆ, ಲಕ್ಷಾಂತರ ಮಂದಿ ವಿದೇಶಗಳಲ್ಲಿ ನೆಲೆಸಿರುವುದರಿಂದ. ಆಯುರ್ವೇದ ವೈದ್ಯಪದ್ಧತಿ ಪ್ರಾರಂಭವಾದಾಗಿನಿಂದ 'ಪಂಚಗವ್ಯ'ದ ಔಷಧೀಯ ಗುಣಗಳ ಪ್ರಸ್ತಾಪ ಇದೆ. ಈಗಂತೂ ಸಂಘಪರಿವಾರ 'ಪಂಚಗವ್ಯ' ಸರ್ವರೋಗ ನಿವಾರಣೋಪಾಯ ಎಂದು ಪ್ರತಿಬಿಂಬಿಸುತ್ತಿದೆ. ನಡೆಯುತ್ತಿರುವ ಸಂಶೋಧನೆಗಳ ಪ್ರಕಾರ ಈ ಗೋವುತ್ಪನ್ನ ಕ್ಯಾನ್ಸರ್, ಏಡ್ಸ್ ಮುಂತಾದ ರೋಗಗಳನ್ನು ಗುಣಪಡಿಸುವಂಥದ್ದು. ಈ ಬಗ್ಗೆ ಸಂಶೋಧಕರು ಪ್ರಬಂಧಗಳನ್ನೂ ಕೂಡ ಪ್ರಕಟಿಸಿದ್ದಾರೆ. ಇನ್ನು ಯೋಚಿಸಬೇಕಾಗಿಲ್ಲ, ದುಬಾರಿ ಹಣತೆತ್ತು ಪರಿಣತ ವೈದ್ಯರ ಬಳಿಗಾಗಲಿ, ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳಿಗಾಗಲಿ ಹೋಗಬೇಕಾಗಿಲ್ಲ. ಮನೆಯಲ್ಲೇ 'ಪಂಚಗವ್ಯ' ಮಾಡಿಕೊಂಡು ಸೇವಿಸಿ ಮುಕ್ತಿ ಪಡೆಯಬಹುದು. ಸಂಘಪರಿವಾರದ ಅಮೂಲ್ಯ ಕೊಡುಗೆ ಇದು.

* * *

ಚೆನ್ನೈನಿಂದ ಪ್ರಕಟವಾಗುವ 'ಫ್ರಂಟ್‌ಲೈನ್' ಪತ್ರಿಕೆ ಒಂದು ಬಗೆಯಲ್ಲಿ ಎಡಪಂಥೀಯ ವಿಚಾರಗಳನ್ನು ಪ್ರತಿಬಿಂಬಿಸುತ್ತ ಬಂದಿದೆ. ಮೂರು ದಶಕಗಳಿಗಿಂತ ಹೆಚ್ಚು ಕಾಲದಿಂದ ಪ್ರಕಟವಾಗುತ್ತಿರುವ ಈ ಪತ್ರಿಕೆಯ ಇತ್ತೀಚಿನ ಸಂಚಿಕೆಯಲ್ಲಿ ಬೆಜವಾಡ ವಿಲ್ಸನ್ ಎಂಬುವರ ಸಂದರ್ಶನವೊಂದು ಪ್ರಕಟವಾಗಿದೆ. ಈತ ಸಫಾಯಿ ಕರ್ಮಚಾರಿ ಆಂದೋಳನದ ರಾಷ್ಟ್ರೀಯ ಸಂಚಾಲಕ ಹಾಗೂ ರಮೋನ್ ಮ್ಯಾಗ್ಸಸೆ ಪ್ರಶಸ್ತಿ ಪುರಸ್ಕೃತ. ಮೋದಿಯ 'ಸ್ವಚ್ಛ ಭಾರತ', ಶೌಚಾಲಯಗಳ ನಿರ್ಮಾಣ ಯೋಜನೆಗಳ ಕುರಿತು ಅವರು ಸಂದರ್ಶನದಲ್ಲಿ ಹೇಳಿರುವುದನ್ನು ಯಥಾವತ್ತಾಗಿ ನೀಡುತ್ತಿದ್ದೇವೆ :

ಅಕ್ಟೋಬರ್ ೨, ೨೦೧೪ರಂದು ಪ್ರಧಾನಿ ನರೇಂದ್ರ ಮೋದಿ ಸ್ವಚ್ಛ ಭಾರತ ಅಭಿಯಾನ ಪ್ರಾರಂಭಿಸಿದರು. ಎರಡು ನಿಮಿಷಗಳ ಕಾಲ ಪೊರಕೆ ಹಿಡಿದು ಗುಡಿಸಿ, ಫೋಟೋ ಕ್ಲಿಕ್ಕಿಸಿಕೊಂಡು ಹೊರಟು ಹೋದರು. ಅವರು ಈ ವಿಷಯದಲ್ಲಿ ೫,೦೦೦ ವರ್ಷಗಳಿಂದ ಮಲ ಹೊತ್ತು ಶುದ್ಧೀಕರಿಸುತ್ತಿರುವವರನ್ನು ಗಮನಿಸಲಿಲ್ಲ. ಸಫಾಯಿ ಕರ್ಮಚಾರಿಗಳ ಕುರಿತು ಪ್ರಸ್ತಾಪವನ್ನೂ ಮಾಡಲಿಲ್ಲ.

ದೇಶದಲ್ಲಿ ಈಗಲೇ ಬೇಕಾದಷ್ಟು ಸೆಪ್ಟಿಕ್ ಟ್ಯಾಂಕ್‌ಗಳಿಗೆ ವಿಸರ್ಜನೆಯಾಗುವ ಶೌಚಾಲಯಗಳಿವೆ. ೧೯೯೩ರಿಂದ ೧,೩೭೦ ಕರ್ಮಚಾರಿಗಳು ಈ ಸೆಪ್ಟಿಕ್ ಟ್ಯಾಂಕ್ ತೊಳೆಯುವ ಕಾಯಕದಲ್ಲಿ ಮಡಿದಿದ್ದಾರೆ. ಭಯೋತ್ಪಾದನೆಯ ಕೃತ್ಯದಲ್ಲಿ ಮಡಿದವರ ಸಂಖ್ಯೆಗಿಂತಲೂ ಇದು ಅಧಿಕ. ಇದರ ಬಗ್ಗೆ ಯಾರೂ ಮಾತನಾಡುವುದಿಲ್ಲ. ಭಯೋತ್ಪಾದನೆಯ ಬಗ್ಗೆ ಮಾತ್ರ ಮಾತಾಡುತ್ತೀರಿ. ದೇಶದಲ್ಲಿ ೨೦೧೯ರ ವೇಳೆಗೆ ೧೨ ಕೋಟಿ ಶೌಚಾಲಯಗಳನ್ನು ನಿರ್ಮಿಸುವ ಕಾರ್ಯದಲ್ಲಿ ತೊಡಗಿಕೊಂಡಿದ್ದೀರಿ. ನಿಮ್ಮಲ್ಲಿ ಅದಕ್ಕೆ ಬೇಕಾದ ತಂತ್ರಜ್ಞಾನವಿಲ್ಲ. ಸೆಪ್ಟಿಕ್ ಟ್ಯಾಂಕ್‌ಗೆ (ತ್ಯಾಜ್ಯ ಸಂಗ್ರಹವಾಗುವುದಕ್ಕೆ ನಿರ್ಮಾಣವಾಗಿರುವ ತೊಟ್ಟಿ) ಹರಿಬಿಡಲು ನಿಮ್ಮಲ್ಲಿ ಪೈಪ್ ವ್ಯವಸ್ಥೆಯೂ ಇಲ್ಲ. ಹಾಗಿರುವಾಗ ಈ ಟ್ಯಾಂಕ್‌ಗಳನ್ನು ಶುದ್ಧೀಕರಿಸುವವರು ಯಾರು ? ಸಫಾಯಿ ಕರ್ಮಚಾರಿಗಳು (ದಲಿತರು) ತಾನೆ ? ೧೨ ಕೋಟಿ ಶೌಚಾಲಯಗಳನ್ನು ನಿರ್ಮಿಸಿದರೆ ಇನ್ನೆಷ್ಟು ದಲಿತರು ಸಾಯುತ್ತಾರೋ !

* * *

'ಹೊಸತು'ವಿನಲ್ಲಿ ಪ್ರಕಟವಾಗಿದ್ದ ಋಗ್ವೇದ ಲೇಖನಗಳನ್ನು 'ಋಗ್ವೇದ ಪ್ರವೇಶಿಕೆ – ಐತಿಹ್ಯ ಮತ್ತು ವಾಸ್ತವ' ಎಂಬ ಗ್ರಂಥದಲ್ಲಿ ಸಂಕಲಿಸಿ ನವಕರ್ನಾಟಕ ಪ್ರಕಾಶನವು ಹೊರತಂದಿದ್ದು ಸರಿಯಷ್ಟೆ. 'ಪ್ರಜಾವಾಣಿ'ಯ ಆಗಸ್ಟ್‌ನ ೧೪ರ ಭಾನುವಾರದ ಪುರವಣಿ "ಮುಕ್ತ ಛಂದ"ದಲ್ಲಿ ಅದರ ವಿಮರ್ಶೆಯೊಂದನ್ನು ಪ್ರಕಟಿಸಲಾಗಿತ್ತು. ಆ ಸಂಬಂಧ ಲೇಖಕ ಜಿ. ರಾಮಕೃಷ್ಣ ಪತ್ರಿಕೆಗೆ ವಿಮರ್ಶೆಯ ವಿಮರ್ಶೆಯೊಂದನ್ನು ಬರೆದಿದ್ದರು. ಅದು ಪ್ರಕಟವಾಗಿಲ್ಲ. ಆ ಒಕ್ಕಣೆಯನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ :

ಆಗಸ್ಟ್ ೧೪ರ ಪ್ರಜಾವಾಣಿಯ 'ಮುಕ್ತ ಛಂದ' ಪುರವಣಿಯಲ್ಲಿ ಶ್ರೀ. ಸೂರ್ಯಪ್ರಕಾಶ ಪಂಡಿತ್ ಅವರು ನನ್ನ "ಋಗ್ವೇದ ಪ್ರವೇಶಿಕೆ – ಐತಿಹ್ಯ ಮತ್ತು ವಾಸ್ತವ" ಎಂಬ ಕೃತಿಯ ವಿಮರ್ಶೆಯನ್ನು ಪ್ರಕಟಿಸಿರುವುದಕ್ಕಾಗಿ ಕೃತಜ್ಞ. ಅದಕ್ಕೆ "ಭಾರತೀಯ ಸಂವೇದನೆ ಇಲ್ಲದ ಋಗ್ವೇದ ಮೀಮಾಂಸೆ" ಎಂಬ ಶೀರ್ಷಿಕೆಯನ್ನಿತ್ತು ಗ್ರಂಥದ ದೃಷ್ಟಿಕೋನವನ್ನು ಗ್ರಹಿಸುವಲ್ಲಿ ಎಡವಿದ್ದಾರೆ. ನನ್ನ ತಥಾಕಥಿತ ಪಾಂಡಿತ್ಯವನ್ನು ಸ್ವಲ್ಪ ಅತಿಯಾಗಿಯೇ ಮೆಚ್ಚಿಕೊಂಡು, ಗ್ರಂಥದ ಮೂಲಭೂತ ಸಾರವನ್ನು ಅಲ್ಪಗೊಳಿಸಲು ಅವರಿಗೇನು ನ್ಯೂನತೆಗಳು ತೋರಿದವೋ ತಿಳಿಯದು. ಪ್ರಥಮತಃ ಭಾರತೀಯ ಸಂವೇದನೆಯು ಏಕಮುಖಿಯಾದುದೆಂಬ ತಿಳಿವಳಿಕೆಯು ನಮ್ಮ ಹಿರಿದಾದ ಮತ್ತು ವಿಶಾಲವಾದ ಪರಂಪರೆಯನ್ನು ಒಂದೇ ನಿರ್ದಿಷ್ಟ ನೆಲೆಯಲ್ಲಿ ವಿಮರ್ಶಿಸ ಹೊರಡುವುದಕ್ಕೆ ಕಾರಣವಾಗುತ್ತದೆ. ಋಗ್ವೇದದ ಸಂಸ್ಕೃತಿ ಸಹ ಬಹುಮುಖಿಯಾದ್ದು ; ನಂತರದ ಸಂಸ್ಕೃತಿಯಂತೂ ಅಪಾರ ಕವಲುಗಳ ಮಹಾ ಕಲ್ಪವೃಕ್ಷ. ಮಾನ್ಯ ಪಂಡಿತ್ ಅವರು ಶ್ರೀ. ಆನಂದ ಕುಮಾರಸ್ವಾಮಿ ವ್ಯಾಖ್ಯಾನದ ಸ್ರೋತವೊಂದನ್ನು ಮಾತ್ರ 'ಭಾರತೀಯ' ಎಂಬಂತೆ ಚಿತ್ರಿಸಿದ್ದಾರೆ. ಒಂದು ಕನ್ನಡದ ಪತ್ರಿಕೆಯಲ್ಲಿ ಕುಮಾರಸ್ವಾಮಿಯವರ ದೀರ್ಘ ಭಾಗವೊಂದನ್ನು ಉದ್ಧರಿಸುವಾಗ ಅದನ್ನು ಕನ್ನಡ ಅನುವಾದ ರೂಪದಲ್ಲಿ ಪ್ರಸ್ತುತಪಡಿಸುವ ಸೌಜನ್ಯವನ್ನು ತೋರಿಸಿಲ್ಲದಿರುವುದು ಅಚ್ಚರಿಯೆನಿಸುತ್ತದೆ. ಅದೇ ಫ್ರೆಂಚ್ ಭಾಷೆಯಲ್ಲಿರುವ ಭಾಗವಾಗಿದ್ದರೆ ವಿಮರ್ಶಕರು ಅದನ್ನು ಅದೇ ಭಾಷೆಯಲ್ಲಿ ಉದ್ಧರಿಸುತ್ತಿರಲಿಲ್ಲ. ಇಂಗ್ಲಿಷಿನ ಕಡಿವಾಣ ಅಷ್ಟು ಗಟ್ಟಿಯಾಗಿದೆ. ಋಗ್ವೇದವನ್ನು ಅರ್ಥೈಸಿಕೊಳ್ಳಲು ಭಾಷೆಯ ಪಾಂಡಿತ್ಯವಷ್ಟೇ ಸಾಲದೆಂಬ ಕುಮಾರಸ್ವಾಮಿಯವರ ಮಾತು ಎಲ್ಲ ಸಾಹಿತ್ಯಗಳಿಗೂ ಅನ್ವಯವಾಗುತ್ತದೆ. ಮಾನವಶಾಸ್ತ್ರ, ಇತಿಹಾಸ, ಅಂದಂದಿನ ಪುರಾಣ ಅಥವಾ ಮಿತ್‌ಗಳ ಪರಿಚಯ, ಹೀಗೆ ಹಲವು ಪರಿಕರಗಳು ನಮಗೆ ಪೂರಕ

ಸಾಮಗ್ರಿಗಳಾಗಿರುತ್ತವೆ. ಅತಿ ಪ್ರಾಚೀನ ಸಾಹಿತ್ಯವಾದ ಋಗ್ವೇದದ ಬಗೆಗಂತೂ ಇದು ಅನಿವಾರ್ಯ. ಕುಮಾರಸ್ವಾಮಿಯವರು ಸೂಚಿಸುವ ಸಂವೇದನೆ ಗಿಂತಲೂ ಭಿನ್ನವಾದ ಸಂವೇದನೆಯ ನಮ್ಮ ಶ್ರೇಷ್ಠ ವಿದ್ವಾಂಸ ಪ್ರೊಫೆಸರ್ ಎಂ. ಹಿರಿಯಣ್ಣನವರದು. ಹಾಗೆಂದು ಹಿರಿಯಣ್ಣನವರ ಸಂವೇದನೆಯನ್ನು ಭಾರತೀಯವಲ್ಲದ್ದೆಂದು ಹೇಳಿದರೆ ಅದು ಯಥಾರ್ಥ ವಾಗುವುದಿಲ್ಲ. ನಿರುಕ್ತಕಾರ ಯಾಸ್ಕನ ಕಾಲದಿಂದಲೂ ಋಗ್ವೇದವನ್ನು ಅರ್ಥೈಸಿಕೊಳ್ಳುತ್ತಲೇ ಬಂದಿರುವ ಪರಂಪರೆ ನಮ್ಮದು. ಈಚಿನ ವ್ಯಾಖ್ಯಾನಕಾರರಲ್ಲಿ ಅರವಿಂದರು ಮತ್ತು ಅವರ ಅನುಯಾಯಿ ಶ್ರೀ. ಕಪಾಲಿ ಶಾಸ್ತ್ರಿಗಳು ತಮ್ಮದೇ ಹಾದಿಯೊಂದನ್ನು ವಿಶದೀ ಕರಿಸಿದ್ದಾರೆ. ಅಧ್ಯಾತ್ಮದ ಸಿರಿಯನ್ನು ಋಗ್ವೇದದಲ್ಲಿ ಅನ್ವೇಷಿಸಲು ತವಕಿಸದಿದ್ದರೆ ಅದು "ಭಾರತೀಯ ಸಂವೇದನೆ"ಗೆ ಹೊರತಾಗುತ್ತದೆಯೆಂಬ ಮಿಥ್ಯೆಗೆ ನಾವು ಕಟ್ಟುಬೀಳಬೇಕಾಗಿಲ್ಲ. ನಾಸದೀಯ ಸೂಕ್ತದಂತಹ ಮಹತ್ವದ ಕಾಣ್ಕೆಯು ನಂತರದ ಬೃಹದಾರಣ್ಯಕ ಉಪನಿಷತ್ತಿನ ಕಾಣ್ಕೆಯಲ್ಲ, ಕಾಣ್ಕೆಯಾಗಬೇಕಾಗಿಲ್ಲ. ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗಳ ದೃಷ್ಟಿಯಿಂದ ವಿಭಿನ್ನವಾದ ಆಯಾಮಗಳು ವೈದಿಕ ಸಾಹಿತ್ಯದುದ್ದಕ್ಕೂ ನಿರ್ಮಿತಿಗೊಂಡಿವೆ. ಅವೆಲ್ಲವೂ ಭಾರತೀಯ ಸಂವೇದನೆಗಳೇ. ಅಧ್ಯಾತ್ಮವು ನಮ್ಮ ಪರಂಪರೆಯಲ್ಲಿ ಏಕಪ್ರಕಾರವಾಗಿ ಪ್ರತಿಫಲಿಸಲ್ಪಟ್ಟಿಲ್ಲ. ಚಾರಿತ್ರಿಕವಾಗಿ ನಂತರದ ಘಟ್ಟಗಳಿಗೆ ಸೇರಿದ ಅಧ್ಯಾತ್ಮವನ್ನು ಋಗ್ವೇದದಲ್ಲಿ ಅರಸುವ ಅನಗತ್ಯ ಸಾಹಸವು ಅನಪೇಕ್ಷಣೀಯ. ಭಾರತೀಯ ಸಂವೇದನೆ ಯಲ್ಲಿ ಋಗ್ವೇದವೂ ಇದೆ, ಬೃಹದಾರಣ್ಯಕವೂ ಇದೆ. ಅಂತೆಯೇ ನಮ್ಮ ಇತಿಹಾಸದಲ್ಲಿ ಲೋಕಾಯತ, ಬುದ್ಧ, ಚರಕ, ಶಂಕರಾಚಾರ್ಯ, ಆರ್ಯಭಟ, ಕಣಾದ, ಹೀಗೆ ಹತ್ತಾರು ಸಂವೇದನಾ ಸ್ರೋತಗಳ ಪ್ರತಿನಿಧಿಗಳಿದ್ದಾರೆ. ನನ್ನ ಗ್ರಂಥವು ಎಷ್ಟೇ ಕುಬ್ಜವಾಗಿದ್ದರೂ ಅದು ಭಾರತೀಯವಲ್ಲದ ಸಂವೇದನೆಯಂತೂ ಆಗುವುದಿಲ್ಲ.

ಋಗ್ವೇದವು ಯಾವುದೋ ಒಂದು ನಿರ್ದಿಷ್ಟ ಶತಮಾನದಲ್ಲಿ ರಚನೆಗೊಂಡ ಸಂಪತ್ತಲ್ಲ; ಹಲವು ಶತಮಾನಗಳ ವಿವಿಧ ಹಂತಗಳನ್ನು ಗುರುತಿಸಲು ಅಲ್ಲಿ ಪ್ರಶಸ್ತ ಸಾಮಗ್ರಿಗಳಿವೆ. ವರ್ಣಗಳ ಪ್ರಸ್ತಾಪವಿರುವ ಅಂತಿಮ ಭಾಗವನ್ನು ಹೊರತುಪಡಿಸಿದರೆ ಋಗ್ವೇದದಲ್ಲಿ ವರ್ಣ ವಿಭಜನೆ ಇಲ್ಲದಿದ್ದ ಹಂತಗಳೇ ಹೆಚ್ಚು. ಅಲ್ಲಿ ವಿಸ್ಮಯಗಳಿವೆ, ದೇವತೆಗಳಿದ್ದಾರೆ, ದೇವತೆಗಳು ನಿಜಕ್ಕೂ ಇಲ್ಲವೇನೋ ಎಂಬ ಸಂಶಯವನ್ನು ವ್ಯಕ್ತಪಡಿಸು ವುದಿದೆ, ವಿಪುಲ ವಿಸ್ತಾರವನ್ನುಳ್ಳ 'ಋತ' ಎಂಬ ಪರಿಕಲ್ಪನೆ ಇದೆ, ದಸ್ಯುಗಳಿದ್ದಾರೆ, ಸೋಮರಸವಿದೆ, ಸೂರ್ಯಾಳ ಸಂಭ್ರಮದ ವಿವಾಹ ಪ್ರಸಂಗವಿದೆ, ಇಂದ್ರ ಮತ್ತು ಪಣಿಗಳ ನಡುವಣ ಸಂಘರ್ಷವಿದೆ, 'ಅಸ್ಯ ವಾಮಸ್ಯ' ಎಂಬ ಸೂಕ್ತದ ಜಿಜ್ಞಾಸೆಯ ಹರಹಿದೆ, ಊರ್ವಶಿ–ಪುರೂರವರ ಸಂವಾದವಿದೆ, ಮತ್ತು ಒಬ್ಬ ಜೂಜುಗಾರನ ಅಳಲೂ ಇದೆ. ಇವೆಲ್ಲವೂ ಭಾರತೀಯ ಸಂವೇದನೆಯ ಅವಿಭಾಜ್ಯ ಅಂಗಗಳೇ. ಇರುವುದನ್ನು ಗೌಣವಾಗಿಸಿ ಇಲ್ಲದ್ದನ್ನು ಆರೋಪಿಸುವುದು ಋಗ್ವೇದದ ವ್ಯಾಪ್ತಿಯನ್ನು ಕುಗ್ಗಿಸುವ ಪ್ರಮಾದವಾಗಿಬಿಟ್ಟಿದೆ, ಅದರ ಮೌಲಿಕ ಪ್ರಸ್ತುತತೆಯನ್ನು ಕುಗ್ಗಿಸಿಬಿಟ್ಟಿದೆ.

ಮಾನ್ಯ ಸೂರ್ಯಪ್ರಕಾಶ ಪಂಡಿತ್ ಅವರು ನೀಡಿರುವ ಒಂದು ಉದಾಹರಣೆಯನ್ನು ಗಮನಿಸ ಬಹುದು : ಯಮನ ಬಗ್ಗೆ ಲೇಖಕನು ವೈರುಧ್ಯದಿಂದ ಕೂಡಿದ ಮಾತುಗಳನ್ನಾಡಿದ್ದಾನೆ ಎಂಬುದು ಅವರ ಒಂದು ಮಾತು. ಅದರಲ್ಲಿ ವೈರುಧ್ಯವೇನೂ ಇಲ್ಲ. ಏಕೆಂದರೆ, ಸೋದರಿ ಯಮಿಯ ಜೊತೆ ಸಂವಾದಿಸುವ ಯಮನು ಋಗ್ವೇದ ಪೂರ್ವಕಾಲದ ಒಂದು ನೆನಪಿನ ಮೂರ್ತಿ, ಅವನು ಮೃತ್ಯುದೇವತೆಯಲ್ಲ; ಆದರೆ ಪಿತೃಸೂಕ್ತಗಳ ಯಮನು ಮುಂದಿನ ಮೃತ್ಯುದೇವತೆಯ ಆದಿರೂಪದವನು. ಋಗ್ವೇದದ ಅಶ್ವಿನಿ ದೇವತೆಗಳು ಯಜುರ್ವೇದದ ತೈತ್ತಿರೀಯ ಸಂಹಿತೆಯ ಕಾಲಕ್ಕೆ ಯಜ್ಞದಲ್ಲಿ ಹವಿಸ್ಸು ಪಡೆಯಲು ಪ್ರಾಯಶ್ಚಿತ್ತ ಮಾಡಿ ಕೊಳ್ಳುವ ಪೇಚಿಗೆ ಸಿಲುಕುತ್ತಾರೆ. ಅದಕ್ಕೆ ಚಾರಿತ್ರಿಕ–ಸಾಮಾಜಿಕ ಕಾರಣಗಳಿವೆ. ಆದರೆ ಎರಡು ಹಂತಗಳೂ ಭಾರತೀಯ ಸಂವೇದನೆಗಳೇ ಎಂಬುದರಲ್ಲಿ ಅನುಮಾನ ಇಲ್ಲ. ಇಂದಿಗೂ ಉಳಿದಿರುವ ಬುಡಕಟ್ಟುಗಳ ಸಂವೇದನೆಯು ಭಾರತೀಯವಲ್ಲವೆನ್ನುವುದು ಅಜ್ಞಾನ ಮತ್ತು ಅಹಂಕಾರದ ಕುರುಹಾಗುತ್ತದೆ.

ಒಂದೇ ಮಾತಿನಲ್ಲಿ ಹೇಳುವುದಾದರೆ ಋಗ್ವೇದ ಮತ್ತು ನಮ್ಮ ಜಾನಪದ ಪರಂಪರೆಗಳೆರಡೂ ಸಂವೇದನೆಯ ದೃಷ್ಟಿಯಿಂದ ಅಪ್ಪಟ ಭಾರತೀಯವೇ. ಅಂತೆಯೇ, ಆನಂದ ಕುಮಾರಸ್ವಾಮಿ ಎಷ್ಟು ಭಾರತೀಯ ಸಂವೇದನೆಯ ಪ್ರತಿನಿಧಿಯೋ ಅಷ್ಟೇ ಅಥವಾ ಅದಕ್ಕಿಂತಲೂ ಮಿಗಿಲಾಗಿ ಹಿರಿಯಣ್ಣ, ದೇವಿಪ್ರಸಾದ ಚಟ್ಟೋಪಾಧ್ಯಾಯ, ಡಿ. ಡಿ. ಕೋಸಾಂಬಿ ಮುಂತಾದವರೂ ಭಾರತೀಯ ಸಂವೇದನೆಯ ವ್ಯಕ್ತಿತ್ವ ಉಳ್ಳವರೇ ಆಗಿದ್ದಾರೆ. ಭಾರತೀಯತ್ವವು ಯಾವೊಂದು ಗುಂಪಿನ ಏಕಸ್ವಾಮ್ಯದಲ್ಲೂ ಇಲ್ಲ, ಇರಕೂಡದು. ಋಗ್ವೇದವನ್ನು ಗ್ರಹಿಸುವಲ್ಲಿ ಸಂವೇದನೆಯು ಸ್ವಭಾವತಃ ಸಂಕೀರ್ಣವಾಗಿರುತ್ತದೆ. ಅದು ನಮ್ಮ ಸಾಂಸ್ಕೃತಿಕ ಇತಿಹಾಸದ ಅನನ್ಯತೆ.

✶ ✶ ✶

ಗುಜರಾತಿನ ಊನಾ ಪ್ರಕರಣ ನೆನಪಿನಲ್ಲಿದೆ ತಾನೆ ? ದಲಿತರನ್ನು ಅಮಾನುಷವಾಗಿ ನಡೆಸಿಕೊಂಡ ಧೂರ್ತ ಘಟನೆ ಅದು. ಅರುಣ್ ಜೆಟ್ಲಿ ಕೇಂದ್ರ ಸರ್ಕಾರದ ವಾರ್ತಾ ವಿಭಾಗದ ಸಚಿವರಾಗಿ ಈ ಖಂಡನಾರ್ಹ ಪ್ರಸಂಗವನ್ನು ಆಕಾಶವಾಣಿ ವಾರ್ತೆಯಲ್ಲಿ ತಿಳಿಯ ಪಡಿಸಿದ್ದು ಹೇಗೆ ಹೊತ್ತೆ ? ಇಡೀ ಪ್ರಪಂಚವು ಸಾಕ್ಷಿಯಾಗಿದ್ದ ದೌರ್ಜನ್ಯದ ಬಗ್ಗೆ ಹೇಳಿದ್ದಿದು : "ಗುಜರಾತಿನಲ್ಲಿ ದಲಿತರ ಮೇಲೆ ನಡೆಯಿತೆನ್ನಲಾದ ಹಲ್ಲೆಯ ವಿರುದ್ಧ ಗುಜರಾತಿನ ಅನೇಕ ಭಾಗಗಳಲ್ಲಿ ಪ್ರತಿಭಟನೆಗಳನ್ನು ನಡೆಸಲಾಯಿತು." ಪ್ರಧಾನಿ ಮೋದಿ ಯವರ ಪಕ್ಷವು ಅಧಿಕಾರದಲ್ಲಿರುವ ಗುಜರಾತಿನಲ್ಲಿ "ನಡೆದ ಹಲ್ಲೆಯ ವಿರುದ್ಧ" ಎಂದು ಆಕಾಶವಾಣಿ ಹೇಗೆ ಹೇಳೀತು ! ಆದ್ದರಿಂದ ಅದು "ನಡೆಯಿತೆನ್ನಲಾದ" ದೌರ್ಜನ್ಯವಾಗಿಹೋಯಿತು ! ಆದರೆ ಕನ್ಹಯ್ಯ ಮತ್ತು ಅವನ ಸಂಗಾತಿಗಳು "ಪಾಕಿಸ್ತಾನದ ಪರವಾಗಿ ಘೋಷಣೆಗಳನ್ನು ಕೂಗಿದರು" ಎನ್ನುತ್ತದೆ ಆಕಾಶವಾಣಿ. ಅವರು ಹಾಗೆ ಕೂಗಿಲ್ಲದಿದ್ದರೂ "ಕೂಗಿದರು" ಎಂದು ಹೇಳುವುದು ಅವಕಾಶವಾಣಿಯೇ ವಿನಾ ಆಕಾಶವಾಣಿಯಲ್ಲ. ಇದು ಜೇಟ್ಲಿಯವರ ನೇತೃತ್ವದ ಮಾಹಿತಿ ಪ್ರಸಾರದ ವೈಖರಿ. "ನಾವು ವಸ್ತುನಿಷ್ಠರು" ಎಂದು ಪ್ರಧಾನಿ ಹಾಗೂ ಜೇಟ್ಲಿ ಹೇಳುತ್ತಲೇ ಇರುತ್ತಾರೆ. ಭಾಜಪದ ದೃಷ್ಟಿಯಲ್ಲಿ ವಸ್ತುನಿಷ್ಠವೆಂದರೆ ಏನೆಂದು ತಿಳಿಯಲು ಆಕಾಶವಾಣಿಯ ಜಾಹಿರಾತು ಮತ್ತು ವಾರ್ತಾಪ್ರಸಾರವನ್ನು ಕೇಳಬೇಕು !!

✶ ✶ ✶

ಕೇಂದ್ರ ಗೃಹಮಂತ್ರಿ ರಾಜನಾಥ ಸಿಂಗ್ ಅಮೆರಿಕಾ ಮತ್ತು ರಷ್ಯಾಕ್ಕೆ ಭೇಟಿ ನೀಡಲಿದ್ದಾರೆಂದು ವರದಿ ಯಾಗಿದೆ. ಈ 'ಹೊಸತು' ಸಂಚಿಕೆಯು ಓದುಗರ ಕೈ ಸೇರುವ ವೇಳೆಗೆ ಹೋಗಿಬಂದಿರುತ್ತಾರೋ ಏನೋ ! ಒಬ್ಬ ಗೃಹಮಂತ್ರಿಯು ಗೃಹದಾಚೆ ಇಷ್ಟೊಂದು ಕಾರ್ಯಭಾರ ಹೊರುತ್ತಿರುವುದು ಅಚ್ಚರಿಯೆನಿಸುತ್ತದೆ. ಅಲ್ಲಿ ನಮ್ಮ ದೇಶವೆಂಬ ಗೃಹದ ಬಗ್ಗೆ ಯಾರೊಡನೆ ಏನು ಚರ್ಚಿಸುತ್ತಾರೆ ? ರಷ್ಯಾಕ್ಕೆ ಹೋಗುತ್ತಾರೆ ಎನ್ನುವುದಂತೂ ಕೌತುಕದ ಸಂಗತಿ. ಕಳೆದ ಐವತ್ತು ವರ್ಷಗಳಲ್ಲಿ ಭಾಜಪ ಮತ್ತು ಅದರ ಪೂರ್ವರೂಪದ ಭಾರತೀಯ ಜನಸಂಘ, ರಷ್ಯಾ (ಅಂದಿನ ಸೋವಿಯೆತ್ ಒಕ್ಕೂಟ) ಎಂದರೆ ಸಿಡಿಮಿಡಿಗೊಳ್ಳುತ್ತಿದ್ದವು. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಭಾರತದ ಪರವಾಗಿ, ವಿಶೇಷತಃ ಕಾಶ್ಮೀರದ ಚರ್ಚೆ ನಡೆದು ನಿರ್ಣಯಗಳ ಮಂಡನೆಯಾದಾಗ, ಅದೆಷ್ಟು ಬಾರಿ ವೀಟೋ ಚಲಾಯಿಸಿತ್ತು ಸೋವಿಯತ್ ಒಕ್ಕೂಟ ಎಂಬುದು ಮಾನ್ಯ ಸಿಂಗ್ ಅವರಿಗೆ ತಿಳಿದಿರಬೇಕು. ಆದರೂ ಜನಸಂಘವು ಆ ದೇಶದ ಬಗ್ಗೆ ವಿಷಕಾರಿದ್ದು ಈಗ ಇತಿಹಾಸ. ಅವರು ರಷ್ಯಾದಲ್ಲಿ ಚರ್ಚಿಸುವ ವಿಷಯಗಳನ್ನು ದೇಶದ ಮುಂದಿಟ್ಟಿದ್ದರೆ ಚೆನ್ನಾಗಿರುತ್ತಿತ್ತು. ಇನ್ನೊಂದು ಕೌತುಕ ಪ್ರಧಾನಿಯವರ ವಿಯೆಟ್ನಾಂ ಭೇಟಿ. ಚೀಣಾದವರನ್ನು ವಿಯೆಟ್ನಾಂ ಹಿಮ್ಮೆಟ್ಟಿಸುವ ಪ್ರಸಂಗ ಉಂಟಾಗಿರುವುದರಿಂದ ಭಾರತಕ್ಕೆ ಈಗ ವಿಯೆಟ್ನಾಂ ಮಿತ್ರರಾಷ್ಟ್ರವೆನಿಸಿದೆ. ಇತಿಹಾಸದ ವ್ಯಂಗ್ಯ ಹೇಗಿದೆ ನೋಡಿ : ವಿಯೆಟ್ನಾಂ ಮೇಲೆ ಅಮೆರಿಕಾ ದಿನನಿತ್ಯ ಟನ್ನುಗಟ್ಟಲೆ ಬಾಂಬು ಗಳನ್ನು ಸುರಿಸುತ್ತಿದ್ದಾಗ ಲೋಕಸಭೆಯಲ್ಲಿ ಮಾನ್ಯ ಅಟಲ್ ಬಿಹಾರಿ ವಾಜಪೇಯಿಯವರು ಹೇಳಿದ್ದರು, "ವಿಯೆಟ್ನಾಂನಲ್ಲಿ ಅಮೆರಿಕಾವು ಭಾರತದ ಯುದ್ಧವನ್ನು ಜರುಗಿಸುತ್ತಿದೆ" ಎಂದು. ನಮ್ಮ ಪ್ರಧಾನಿಯವರಿಗೆ ಇದು ನೆನಪಿನಲ್ಲಿರಲಾರದೇನೊ ! ಭಾರತವು ಅಂದಾಗಲಿ, ಇಂದಾಗಲಿ, ವಿಯೆಟ್ನಾಂ ಮೇಲೆ ಯುದ್ಧ ನಡೆಸಬೇಕಾದ ಅಗತ್ಯವೇನು ? ವಿಯೆಟ್ನಾಂ ಪ್ರಧಾನಿ ನಮ್ಮ ಪ್ರಧಾನಿ ಯವರಿಗೆ ವಾಜಪೇಯಿ ಉವಾಚವನ್ನು ನೆನಪಿಸಿದ್ದರೆ ಹೇಗಿರುತ್ತಿತ್ತು ! ನಾವು ಕಲಿಯಬೇಕಾದ ಪಾಠ ಬಹಳ ಸರಳವಾಗಿದೆ : ಯಾವ ದೇಶದ ಬಗೆಗೂ ಅತಿಯಾದ ತಾತ್ಸಾರ, ಪೂರ್ವಗ್ರಹ ಮತ್ತು ಜಿದ್ದು ಕಡೆಗೆ ಬಾಣವಾಗಿ ನಮ್ಮನ್ನೇ ಅರಸಿಕೊಂಡು ಬರುತ್ತದೆ. ಅಮೆರಿಕಾದ ಬಾಲ ಹಿಡಿದು ಹೋದ ಎಲ್ಲ ದೇಶಗಳ ಅನುಭವವೂ ಇದೇ. ಆದ್ದರಿಂದ ಎಚ್ಚರದಿಂದ ಕಾಲಿರಿಸುವುದು ನಮಗೆ ಕ್ಷೇಮ. ಮನಸ್ಸಿನ ಹರಣ ಮಾಡುವ ಮನೋಹರ ಪಾರಿಕ್ಕರ್ ಅವರಿಗೆ ಇದು ತಿಳಿದಿರಬೇಕು. ●




## 'ರಾಶಿ'

✉ ಭಾರತೀ ಕಾಸರಗೋಡು ಅವರು 'ಮೆಲ್ಬರ್ನ್ ಚೆಲುವೆಯರು' ಲೇಖನದಲ್ಲಿ 'ರೂಪರಾಶಿ'ಯೊಂದನ್ನು ಬಣ್ಣಿಸಿದ್ದಾರೆ. ಅವರ ಬರಹವೂ ಒಂದು 'ಅಕ್ಷರ ರಾಶಿ'ಯಾಗಿ ಪರಿಣಮಿಸಿದೆ ! ಅಭಿನಂದನೆಗಳು.

ಮೈಸೂರು **ಸಿಪಿಕೆ**

✉ 'ಹೊಸತು' ಜುಲೈ ತಿಂಗಳ ಮಾಸ ಪತ್ರಿಕೆ ಬಂದಿದ್ದು ಕಳಚಿದ ಕೊಂಡಿ, ಸಾಹಿತ್ಯ ರತ್ನ ಪ್ರೇಮ್‌ಚಂದ್ ಸ್ತ್ರೀ ಅಸ್ಮಿತೆಯ ಪರಿಕಲ್ಪನೆ. ಕೇರಳದ ದಲಿತ ಹೋರಾಟಗಾರ, ಲೇಖನಗಳು ಸೊಗಸಾಗಿ ವಿಷಯ ಮಂಡನೆಯಾಗಿದ್ದು ಎಲ್ಲಾ ಲೇಖನಗಳು ಚೆನ್ನಾಗಿರುತ್ತವೆ. ಅಂತೆಯೇ ಒಳ್ಳೆಯ ಲೇಖನಗಳು ಬರುತ್ತಿರುವುದು ಸ್ವಾಗತಾರ್ಹ, ಹಾಗೆಯೇ ಒಳ್ಳೆಯ ಲೇಖನಗಳು ಬರಲೆಂದು ಆಶಿಸುವ.

*ಬೆಂಗಳೂರು* **ಸುಮಂಗಲಿ ಸೇವಾ ಆಶ್ರಮ**

✉ ಆಗಸ್ಟ್ ೨೦೧೬ರ ಹೊಸತು ಸಂಚಿಕೆ ಎಂದಿನಂತೆ ವಿಚಾರ ಪ್ರಭೇದಕ ಲೇಖನಗಳಿಂದ ಸೊಗಸಾಗಿ ಬಂದಿದೆ. ರಹಮತ್, ಪಾರ್ಥಸಾರಥಿ ಮೊದಲಾದವರ ಬರಹಗಳು, ವಿನಯಾ ವಕ್ಕುಂದ ಅವರ ಕತೆ, ಶೈಲಜಾ, ಎಸ್. ಮಾಲತಿ ಅವರ ವಿಶೇಷ ಲೇಖನಗಳು, ಹೀಗೆ.

ಈ ಸಂಚಿಕೆಯ ವಿಶೇಷವಾಗಿ ಡಾ॥ ಸರ್ಫ್ರಾಜ್ ಚಂದ್ರಗುತ್ತಿ ಅವರ 'ಬುದ್ಧ ಎಂಬ ಬೆಳಕು' ಲೇಖನ ವಿಶೇಷವಾಗಿ ನನ್ನ ಗಮನ ಸೆಳೆಯಿತು. ಇಂದು ಬುದ್ಧನ ಬಗ್ಗೆ ತುಸು ಭಾವುಕ ಹಾಗೂ ಧಾರ್ಮಿಕ ಉತ್ತೇಜನ ದನಿಯ ಬರಹಗಳೇ ಹೆಚ್ಚಾಗಿರುವ ಕಾಲದಲ್ಲಿ ಸರ್ಫ್ರಾಜ್ ಅವರ ಬರಹ ಬುದ್ಧನ ವೈಚಾರಿಕತೆಗೆ ಹೆಚ್ಚಿನ ಒತ್ತು ನೀಡಿದ ಸಮಚಿತ್ತದ ಬರಹವಾಗಿ ಮೂಡಿಬಂತು. ಬುದ್ಧನ ತತ್ವಕೇಂದ್ರಿತ ಹಾಗೂ ಜೀವಕೇಂದ್ರಿತ ನೆಲೆಗಳನ್ನು ಅತ್ಯಂತ ಸೂಕ್ಷ್ಮ ಹಾಗೂ ಸಂಕ್ಷಿಪ್ತವಾಗಿ ಇಂದಿನ ಹಿನ್ನೆಲೆಯಲ್ಲಿ ವಿವರಿಸಿರುವುದು ಸಮಯೋಚಿತವಾಗಿದೆ. ನಿನಗೆ ನೀನೇ ಒಡೆಯ (ಅತ್ತಾಹಿ ಅತ್ತನೋ ನಾಥೊ) ಎಂಬ ಬೌದ್ಧ ವಿಚಾರ ನಮ್ಮ ಕಾಲಕ್ಕೆ ಇಂದು ಅತ್ಯಂತ ಅಗತ್ಯ ವಾಗಿದೆ. ಸಂಸ್ಕೃತಿಯ ಆವೇಶದಲ್ಲಿ ನಲುಗುತ್ತಿರುವ ಸಮಾಜಕ್ಕೆ ಈ ರೀತಿಯ ಬೌದ್ಧಿಕ ವಿಚಾರಗಳ ಅಗತ್ಯ ಇದೆ. ಕವಿ ಗೋಪಾಲಕೃಷ್ಣ ಅಡಿಗರು 'ನಿನಗೆ ನೀನೇ ಗೆಳೆಯ / ನಿನಗೆ ನೀನೇ' ಎಂದರು. ಸ್ವಂತಿಕೆ ಹಾಗೂ ಅಸ್ಮಿತೆಯ ಹುಡುಕಾಟ ಅನಿವಾರ್ಯವಾಗುವಷ್ಟು ಸಾಂಸ್ಕೃತಿಕ ಭಾವಾವೇಶದ ಪ್ರವಾಹದಲ್ಲಿ ಸಿಕ್ಕಿ ಬಿದ್ದಿರುವ ನಮ್ಮ ಇಂದಿನ ದಿನಗಳಿಗೆ ಬೌದ್ಧ ಚಿಂತನೆ ಹೊಸ ವಿಚಾರಗಳನ್ನು ಸೂಚಿಸಲು ಉತ್ತಮವಾದ ಮಾರ್ಗಗಳಲ್ಲಿ ಒಂದಾಗಿದೆ.

*ಬೆಂಗಳೂರು* **ಎಸ್. ಆರ್. ವಿಜಯಶಂಕರ**

## ಗೋವಿಗಾಗಿ ಮನುಷ್ಯನ ರಕ್ತ ಚೆಲ್ಲಾಡಬೇಕೆ ?

✉ ಇಂದು ಎಲ್ಲೆಲ್ಲೂ ಸ್ವಯಂಘೋಷಿತ ಗೋರಕ್ಷಕರ ಪಡೆ ಮತ್ತವರ ಪೊಲೀಸ್ ವರ್ತನೆಯನ್ನು ನೋಡುತ್ತೇವೆ. ಗೋವುಗಳು ಕಾಮಧೇನು, ಅದರಲ್ಲಿ ಕೋಟ್ಯಾನುಕೋಟಿ ದೇವರುಗಳು ನೆಲೆಸಿರುತ್ತಾರೆ...




ಎಂದೆಲ್ಲ ನಂಬಿಸಿ ಗೋವು ಸತ್ತ ನಂತರ ಅದರ ಮಾಂಸ ತಿಂದರೂ ಅವನನ್ನು ತಪ್ಪಿತಸ್ಥನನ್ನಾಗಿಸುವುದು, ಎಷ್ಟೋ ಸಂದರ್ಭದಲ್ಲಿ ಬೇರೆ ಪ್ರಾಣಿಯ ಮಾಂಸವನ್ನು ಕತ್ತರಿಸುವಾಗಲೂ ಗೋಮಾಂಸವನ್ನೇ ಕತ್ತರಿಸುತ್ತಿದ್ದಾನೆಂದು ಅವನನ್ನೇ ಕತ್ತರಿಸುವ (ಮಹಮದ್ ಇಕ್ಲಾಕ್) ಮೂಲಕ ಮನುಷ್ಯರಿಗಿಂತ ಗೋವುಗಳೇ ಶ್ರೇಷ್ಠವೆನಿಸಿಬಿಡುವಷ್ಟು ಅತಿರೇಕದ ಮೌಢ್ಯತೆ ಬಿಂಬಿತವಾಗುತ್ತಲಿದೆ. ಇದೊಂದು ಅಂಧಶ್ರದ್ಧೆಯಷ್ಟೇ. ದೇವರು ಸೃಜಿಸಿದ ಸಕಲ ಪ್ರಾಣಿ ಪಕ್ಷಿಗಳ ಸ್ವಭಾವಕ್ಕನುಸಾರವಾಗಿ ವರ್ಗೀಕರಿಸಿದ ಆಧಾರದ ಮೇಲೆ ಮನುಷ್ಯ ಜಾತಿ, ಕುದುರೆಯ ಜಾತಿ, ಆನೆಯ ಜಾತಿ, ಕಾಗೆಯ ಜಾತಿ, ಹಾವಿನ ಜಾತಿ... ಎಂದು ಗುರುತಿಸಬಹುದು. ಸಕಲ ಪ್ರಾಣಿ ಪಕ್ಷಿಗಳೂ ಸಹ ಹೀಗೆ ಭಾವಿಸಿದ್ದಾವೆ. ಆದರೆ ಮನುಷ್ಯ ಮಾತ್ರ ತಮ್ಮಲ್ಲಿಯೇ ವಿಭಿನ್ನ ಜಾತಿ, ಧರ್ಮ, ಪಂಗಡವೆಂದು ವಿಂಗಡಿಸಿಕೊಂಡು ಮೇಲುಕೀಳೆಂದು ಗುರುತಿಸಿ ಕೊಂಡಿದ್ದಾನೆ. ಮನುಷ್ಯನದ್ದು ಯಾವುದೇ ಧರ್ಮ, ಜಾತಿಯಾಗಿದ್ದರೂ ಒಬ್ಬರ ರಕ್ತ ಅವಶ್ಯವಿದ್ದರೆ ಇನ್ನೊಬ್ಬರಿಗೆ ಉಪಯೋಗಿಸಬಹುದು. ಆದರೆ ಮನುಷ್ಯನ ರಕ್ತ ಬೇರೊಂದು ಪ್ರಾಣಿ ಅಥವಾ ಪಕ್ಷಿಗೆ ಉಪಯೋಗವಾಗದು. ಗೋವು ಬಹಳ ಪವಿತ್ರ. ಕೋಟಿಗಳ ಲೆಕ್ಕದಲ್ಲಿ ದೇವರು ಅದರಲ್ಲಿ ವಾಸ ವಾಗಿದ್ದಾನೆಂಬ ಮೌಢ್ಯ ನಿಜವಾಗಿದ್ದರೆ ಯಾವುದೇ ಮನುಷ್ಯನಿಗೆ ರಕ್ತದ ಅವಶ್ಯಕತೆ ಇದ್ದಾಗ ಗೋವಿನ ಪವಿತ್ರ ರಕ್ತ ಪೂರೈಸಿದರೆ ಅದು ಹೊಂದಾಣಿಕೆಯಾಗ ಬೇಕಿತ್ತಲ್ಲ ? ಆದರೆ ಹಾಗಾಗದು. ಹೀಗಿದ್ದಾಗ ಗೋವಿನ ರಕ್ತಕ್ಕಾಗಿ ಮನುಷ್ಯನ ರಕ್ತವನ್ನು ಚೆಲ್ಲಾಡುವುದು ಎಷ್ಟು ಸರಿ ? ಒಬ್ಬೊಬ್ಬರಿಗೊಂದೊಂದು ಪ್ರಾಣಿ ಅಥವಾ ಪಕ್ಷಿ ಪವಿತ್ರವಾಗಿರಬಹುದು. ಅವರವರ ಭಾವನೆಗಳನ್ನು ಗೌರವಿಸಲೇಬೇಕು. ಆದರೆ ಸಕಲ ಜೀವಿಗಳಲ್ಲಿಯೂ ದೇವನಿರುವುದರಿಂದ ಸಕಲ ಜೀವಿಗಳಿಗೆ ಲೇಸನೇ ಬಯಸುವ ಉದಾತ್ತತೆ ನಮ್ಮಲ್ಲೇಕಿಲ್ಲವೆಂಬುದು ಚಿಂತೆ ಮತ್ತು ಚಿಂತನೆ.

*ಕನಕಗಿರಿ* **ವೆಂಕಟೇಶ ಕೆ. ಜನಾದ್ರಿ**

✉ ನಾನು ಆಗಸ್ಟ್, ೨೦೧೬ರಲ್ಲಿ ಪ್ರಕಟವಾದ 'ವಚನ ಸಂಸ್ಕೃತಿಯ ಸಮಾನತೆ–ಸಿದ್ಧಾಂತ' ಓದಿದೆ. ಲೇಖನ ತುಂಬ ಸೊಗಸಾಗಿದೆ. ಅವರು ವಚನ ಸಾಹಿತ್ಯದ ಎಲ್ಲ ಮಗ್ಗಲುಗಳನ್ನು ವಿವರವಾಗಿ ತಿಳಿಸಿದ್ದಾರೆ. ಬಸವಣ್ಣನ ಸಮಾನತೆಯ ಸಿದ್ಧಾಂತ ಅಲ್ಪ ಕಾಲದ್ದಾಗಿತ್ತು. ಬಸವಣ್ಣ ಇಂದು ಭಾಷಣದ ಸರಕಾಗಿದ್ದಾನೆ. ಬಸವಣ್ಣನ ಕ್ರಾಂತಿಯನ್ನು ಹಾಳುಮಾಡಿದವರು ಲಿಂಗಾಯತರೇ ಎನ್ನುವದನ್ನು ಮರೆಯುವ ಹಾಗಿಲ್ಲ.

*ರಾಣೇಬೆನ್ನೂರು* **ಎ. ಸಿ. ಹಿರೇಒಡೆಯರ**

## ಭಾಷಾ ಚಳುವಳಿಗಳ ತಾತ್ವಿಕ ಸಮಸ್ಯೆಗಳು

✉ ನಮ್ಮ ರಾಜ್ಯದಲ್ಲಿ ಕನ್ನಡದ ಹೆಸರಿಟ್ಟುಕೊಂಡು ಅನೇಕ ವೇದಿಕೆಗಳು, ಪಕ್ಷಗಳು, ಸಂಘಸಂಸ್ಥೆಗಳು ಹುಟ್ಟಿಕೊಳ್ಳುತ್ತಿವೆ. ಅವುಗಳನ್ನೇ ನಿಮ್ಮ ಹೋರಾಟಗಳ ನಿಜವಾದ ಆಶಯವೇನೆಂದು ಕೇಳಿದರೆ ಉತ್ತರ ಗಳೆಲ್ಲವೂ ಮೌನಕ್ಕೆ ಜಾರುವುದಂತೂ ಖಂಡಿತ. ಕೇವಲ ಹೋರಾಟಗಳು ಕನ್ನಡ ಭಾಷೆಯನ್ನು ಉಳಿಸಲಾರದು. ಅನ್ಯಭಾಷೆಯ ಬೋರ್ಡುಗಳಿಗೆ ಮಸಿ ಬಳಿದು ಧಿಕ್ಕರಿಸೋ ರೀತಿಯೂ ಕನ್ನಡ ಭಾಷೆಯನ್ನು ಬೆಳೆಸಲಾರದು. ನಿಜವಾಗಿ ಸಮಸ್ಯೆ ಇರೋದು ಕನ್ನಡ ಭಾಷೆಗೆ ಅಲ್ಲ, ಕನ್ನಡವನ್ನು ಮಾತಾಡುವ, ಕನ್ನಡವನ್ನೇ ಉಸಿರಾಡುವ ಜನರಿಗೆ ಎಂಬುದಂತೂ ಸತ್ಯ. ಪ್ರಸಕ್ತ ಜಾಗತೀಕರಣದ ಭರಾಟೆಗೆ ಸಿಲುಕಿ ಕನ್ನಡಿಗರ ಜನರ ಜೀವನವೇ ಅಭದ್ರಗೊಳ್ಳುತ್ತಿರುವ ಹೊತ್ತಿನಲ್ಲಿ ಅವರ ಜೀವನ ಸುಧಾರಿಸಲು ಕ್ರಿಯಾತ್ಮಕ ಯೋಜನೆಗಳು ಸಿದ್ಧವಾಗದ ಹೊರತು ಎಷ್ಟೇ ಹೋರಾಟಗಳು ಮಾಡಿದರೂ ಫಲ ಶೂನ್ಯವಾಗಿರುತ್ತದೆ. ಬಹುಶಃ ಕನ್ನಡಪರ ಚಿಂತನೆಗಳು ಮತ್ತು ಹೋರಾಟಗಳು ಈ ನೆಲೆಗಟ್ಟಿನಲ್ಲಿ ರೂಪುಗೊಳ್ಳ ಬೇಕಿರುವುದು ಅವಶ್ಯಕ ಮತ್ತು ತುರ್ತಿನದ್ದು ಎಂದು ತಿಳಿಯಲೇಬೇಕಿದೆ. ಕಾವೇರಿ, ಕೃಷ್ಣ ನೀರಿನ ಕುರಿತಂತೆ ನಡೆದಿರುವ ಹೋರಾಟಗಳಲ್ಲಿ ಕೇವಲ ಕ್ರಿಯೆ–ಪ್ರಕ್ರಿಯೆ

ರೀತಿಯಲ್ಲಿ ಇರುವುದರಿಂದ ಅದರಿಂದ ನಾವೇನನ್ನು ತಾನೇ ನಿರೀಕ್ಷಿಸಬಹುದು ಅಲ್ಲವೇ ? ಪ್ರಸಕ್ತ ದೇಸೀಯ ಭಾಷೆಗಳು ಹಿನ್ನೆಲೆಗೆ ಸರಿದು ಆ ಜಾಗದಲ್ಲಿ ಜಾಗತಿಕ ಭಾಷೆಯು ಆದ್ಯತೆ ಪಡೆಯುತ್ತಿದೆ. ಈ ಆದ್ಯತೆಯ ಮತ್ತು ಜಾಗತಿಕ ಭಾಷೆ ಅನಿವಾರ್ಯ ಎಂದು ಬಿಂಬಿಸುತ್ತಿರುವ, ನಂಬಿಸುತ್ತಿರುವ ಹಿಂದಿನ ಹುನ್ನಾರಗಳೇನು ಎಂದು ವಿವರಿಸಿಕೊಳ್ಳದೇ ಎಡವುತ್ತಿದ್ದೇವೆ. ಹಾಗಾಗಿ ನಮ್ಮ ಶತ್ರುಗಳನ್ನು ತಪ್ಪಾಗಿ ಭಾವಿಸಿಕೊಂಡು ಹೋರಾಟಗಳನ್ನು ಮಾಡುತ್ತಿದ್ದೇವೆ. ಪರಂತು ತಮಿಳು, ತೆಲುಗು, ಮರಾಠಿ, ಮಲೆಯಾಳಿ ಭಾಷೆಗಳನ್ನು ಮತ್ತು ಅದನ್ನಾಡುವ ಜನರನ್ನು ಶತ್ರುಗಳನ್ನಾಗಿ ಭಾವಿಸಿ ಹೋರಾಟಗಳನ್ನು ರೂಪಿಸುತ್ತಿದ್ದೇವೆ. ಹಾಗಾಗಿ ಹೋರಾಟಗಳ ಕೇಂದ್ರ ಗಮನವು ಬದಲಾಗಬೇಕಾದ ತುರ್ತು ಇದೆ. ಹೀಗಾಗಿಯೇ ಇಂಗ್ಲಿಷ್, ಸಂಸ್ಕೃತ ಭಾಷೆಯ ಬಗೆಗೆ, ಒಂದು ರೀತಿಯ ಸಾಫ್ಟ್ ಕಾರ್ನರ್ ಧೋರಣೆ ನಮಗೆ ನಾವೇ ರೂಢಿಸಿಕೊಂಡಿದ್ದೇವೆ. ಹೀಗಾಗಿ ಕನ್ನಡಾಭಿಮಾನವನ್ನು ಸಹೋದರ ಭಾಷೆಗಳನ್ನು ಟೀಕಿಸುವುದರಲ್ಲಿ ವ್ಯಕ್ತ ಮಾಡುತ್ತಿದ್ದೇವೆ. ಇದು ಸಂಪೂರ್ಣ ತಪ್ಪು ಎಂದು ಹೇಳುತ್ತಿಲ್ಲ ಆದರೆ ಅದರ ರೂಪಸ್ವರೂಪದ ಔಚಿತ್ಯದ ಬಗೆಗೆ ನಮಗೆ ತಕರಾರು ವ್ಯಕ್ತವಾಗುತ್ತದೆ. ಭಾಷೆಯು ಅದನ್ನಾಡುವ ಜನರ ಔನತ್ಯವನ್ನು ಅವಲಂಬಿಸಿರುತ್ತದೆ. ಜನರ ಸ್ಥಿತಿಯಲ್ಲಿ ಗುಣಾತ್ಮಕ ಬದಲಾವಣೆಗಳು ಆಗದೇ ಹೋದರೆ ಇದು ಭಾಷೆಯ ಬೆಳವಣಿಗೆಯ ಮೇಲೆ ಪರಿಣಾಮ ಉಂಟುಮಾಡುತ್ತದೆ. ಸರಿ ಇತ್ತೀಚೆಗೆ ಅನೇಕ ರೈತರು ಆತ್ಮಹತ್ಯೆ ಮಾಡಿಕೊಂಡರು. ಅದಕ್ಕೆ ಕಾರಣಗಳು ಅನೇಕ ಇರಬಹುದು. ಆದರೆ ಆಗ ಯಾವೊಂದು ಕನ್ನಡಪರ ಸಂಘಟನೆಗಳು ಅವರ ನೋವಿಗೆ ಸ್ಪಂದಿಸಿದವು ? ಕಾರಣಗಳನ್ನು ಅಧ್ಯಯನ ಮಾಡಿ ಸರ್ಕಾರಕ್ಕೆ ವರದಿ ಒಪ್ಪಿಸಿದವು ? ರೈತರ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರದ ಮೇಲೆ ಏಕೆ ಒತ್ತಡವನ್ನು ಹಾಕಲಿಲ್ಲ ? ಇವೆಲ್ಲವೂ ಕನ್ನಡಪರ ಹೋರಾಟಗಳಲ್ಲಿ ಇರುವ ತಾತ್ವಿಕ ಸಮಸ್ಯೆಗಳನ್ನು ನಮಗೆ ಕಾಣಿಸುತ್ತವೆ. ಕೇವಲ ಕನ್ನಡದ ಝಂಡಾ ನಿಶಾನೆ ಹಿಡಿದು ನಗರಗಳಲ್ಲಿ ಮುಷ್ಕರ ಮಾಡುತ್ತಾ ಧಿಕ್ಕಾರ ಕೂಗುವುದಕ್ಕೆ ಸೀಮಿತವಾದ ಹೋರಾಟಗಳು ಜನರಲ್ಲಿ ವಿಶ್ವಾಸ, ನಂಬಿಕೆ ಪಡೆಯಲು ಸಾಧ್ಯವಿಲ್ಲ. ಇದನ್ನು ಕನ್ನಡಪರ ಸಂಘಟನೆಗಳು, ಹೋರಾಟಗಳು ನಿಖರವಾಗಿ ಅರಿಯಬೇಕಿದೆ. ಕೇವಲ ನವೆಂಬರ್ ತಿಂಗಳಿಗೆ ಸೀಮಿತವಾದ ಕನ್ನಡ ಪ್ರೀತಿಯು ನಮಗೆ ಅಸಂಗತ ಮತ್ತು ಅಸಂಬದ್ಧ ಪ್ರಲಾಪವಾಗಿ ಕಾಣುತ್ತದೆ. ಕನ್ನಡ ಭಾಷೆ ಮತ್ತು ಅದನ್ನಾಡುವ ಜನರ ಜೀವನವು ಬೇರೆ ಬೇರೆ ಅಲ್ಲ. ಅವುಗಳು ಒಂದಕ್ಕೊಂದು ಅಂತರ್ಗತ ಸಂಬಂಧವನ್ನು ಹೊಂದಿವೆ. ಜನರ ಜೀವನದಲ್ಲಿ ಸುಧಾರಣೆಗಳು ಕಂಡುಬಂದರೆ ಅವರ ಜೊತೆಜೊತೆಗೆ ಭಾಷೆಯೂ ಸುಧಾರಿಸುತ್ತದೆ ಮತ್ತು ಮುಂದಿನ ತಲೆಮಾರಿಗೂ ಸಾಗುತ್ತದೆ. ಮನುಷ್ಯ ಬದುಕಿನ ಅವನತಿ ಆ ಭಾಷೆಯ ಅವನತಿಗೂ ಕಾರಣವಾಗುತ್ತದೆ.

ಕನ್ನಡಪರ ಸಂಘಟನೆಗಳು ವಸೂಲಿಬಾಜಿಯನ್ನು ಬಿಟ್ಟು ಕನ್ನಡ ಮಾಧ್ಯಮದ ಶಾಲೆಗಳನ್ನು 'ದತ್ತು' ತೆಗೆದುಕೊಂಡು ಅವುಗಳನ್ನು ಯಾಕೆ ಮಾದರಿ ಶಾಲೆಗಳನ್ನಾಗಿ ಮಾಡಬಾರದು ? ಇಂತಹ ಒಂದೆರಡು ಕಾರ್ಯಕ್ರಮಗಳ ಮೂಲಕ ತಮ್ಮ ಹೋರಾಟಗಳ ಕಾಳಜಿಯನ್ನು ಖಚಿತವಾಗಿ ರವಾನಿಸುವ ಸಾಧ್ಯತೆ ಇದೆ. ಆದರೆ ಯಾವೊಂದು ಸಂಘಟನೆಗಳೂ ಇಂತಹ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಛಾತಿಯನ್ನು ತೋರಿಸುವುದಿಲ್ಲ ಎಂಬುದೇ ದುರಂತ ಸಂಗತಿಯಾಗಿದೆ.

ತುಮಕೂರು **ನಟರಾಜ ಶಾನ್‌ಭಾಗ್**

# ಚಿತ್ರ ಸುದ್ದಿ

ನವಕರ್ನಾಟಕ ಪ್ರಕಾಶನದ ಮಹತ್ವದ ಎರಡು ಕೃತಿಗಳ ಲೋಕಾರ್ಪಣೆಯು ದಿನಾಂಕ ೨೮.೮.೨೦೧೬ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ನಡೆಯಿತು. ಡಾ॥ ಬರಗೂರು ರಾಮಚಂದ್ರಪ್ಪ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ ಡಾ॥ ಚಿನ್ನಸ್ವಾಮಿ ಸೋಸಲೆಯವರು ಸಂಪಾದಿಸಿ ರಚಿಸಿರುವ 'ಕರ್ನಾಟಕದ ಸಮಗ್ರ ದಲಿತ ಚರಿತ್ರೆ' ಎಂಬ ಕೃತಿಯನ್ನು ಲೋಕಾರ್ಪಣೆ ಮಾಡಿದರು. ನಾಡಿನ ಖ್ಯಾತ ಚಿಂತಕ ಶ್ರೀ ದೇವನೂರು ಮಹಾದೇವ ಅವರು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಮರಾಠಿ ಲೇಖಕ ಡಾ॥ ಭಾಲಚಂದ್ರ ನೇಮಾಡೆ ಅವರ ಕನ್ನಡ ಅನುವಾದಿತ ಕೃತಿ 'ಹಿಂದೂ : ಬದುಕಿನ ಸಮೃದ್ಧ ಅಡಕಲು' ಕೃತಿಯನ್ನು ಲೋಕಾರ್ಪಣೆ ಮಾಡಿದರು. ವೇದಿಕೆಯಲ್ಲಿ ಡಾ॥ ಗೀತಾ ಶೆಣೈ, ಡಾ॥ ಎಚ್. ಎಸ್. ಗೋಪಾಲರಾವ್, ಡಾ॥ ಚಿನ್ನಸ್ವಾಮಿ ಸೋಸಲೆ, ಡಾ॥ ಸಿದ್ದನಗೌಡ ಪಾಟೀಲ, ಶ್ರೀ ಚಂದ್ರಕಾಂತ ಪೋಕಳೆ ಉಪಸ್ಥಿತರಿದ್ದರು.











## ಭಗವದ್ಗೀತೆ : ಒಂದು ಅವಲೋಕನ

# ೨. ಗೀತೆಯಿಂದ ಫಲಪ್ರಾಪ್ತಿ

**ಗೀತೆಯು ರಚನೆಗೊಂಡ ಕಾಲಕ್ಕೆ ಮುನ್ನ ಇದ್ದ ವಿಚಾರಗಳು ಗೀತೆಗೆ ಆಕರಗಳಾಗಿರುವುದು ಸಹಜವಾಗಿದೆ. ಆ ಹಿನ್ನೆಲೆಯನ್ನು ಗ್ರಹಿಸಿದಾಗ ಗೀತೆಯ ವ್ಯಾಪ್ತಿಯ ಅರಿವು ದೊರೆಯುತ್ತದೆ. ಪಠಣ ಮಾಡುವುದಷ್ಟೇ ಸಾಕು ಎಂಬುದು ಗೀತೆಯ ಬಗೆಗಿನ ತಾತ್ಸಾರದ ಚಿಹ್ನೆ. ಆದರೂ ಸ್ವತಃ ಗೀತೆಯೇ ಪಠಣ ಮತ್ತು ಶ್ರವಣಕ್ಕೆ ವಿನಾಕಾರಣ ಮಹತ್ವ ನೀಡಿದೆ.**

**ಜಿ. ರಾಮಕೃಷ್ಣ**

ಗೀತೆಯ ವಿಷಯ ವ್ಯಾಪ್ತಿ ಎಷ್ಟರಮಟ್ಟಿನದೆಂದು ಗುರುತಿಸುವಾಗ ಕೆಲವು ವಿದ್ವಾಂಸರು "ಅದು ಸಂಕೀರ್ಣ ತತ್ವಶಾಸ್ತ್ರ ಪ್ರಮೇಯಗಳ ಆಗರ" ಎಂದಿದ್ದಾರೆ. ಅದನ್ನೇ ಡಾ॥ ಬಿ. ಆರ್. ಅಂಬೇಡ್ಕರ್ ಗೀತೆಯ ಆಂತರಿಕ ವೈರುಧ್ಯಗಳೆಂದು ಹೆಸರಿಸಿದ್ದಾರೆ. ಅದಕ್ಕೆ ದೀರ್ಘವಾದ ಪಟ್ಟಿಯನ್ನವರು ಸಿದ್ಧಗೊಳಿಸಿ ನಿದರ್ಶನ ಒದಗಿಸಿದ್ದಾರೆ. ಉದಾಹರಣೆಗೆ, ಜ್ಞಾನವು ಭಕ್ತಿಗಿಂತಲೂ ದೊಡ್ಡದು, ಅದರ ಮೂಲಕ ವ್ಯಕ್ತಿಗೆ ಉನ್ನತ ಸ್ತರದ ಪ್ರಾಪ್ತಿ ಆಗುತ್ತದೆಂದು ನಾಲ್ಕನೆಯ ಅಧ್ಯಾಯದಲ್ಲಿದೆ (೪.೩೯ : ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ ಅಚಿರೇಣಾಧಿಗಚ್ಛತಿ॥). ಆದರೆ ಹನ್ನೆರಡನೆಯ ಅಧ್ಯಾಯದಲ್ಲಿ ಜ್ಞಾನಕ್ಕಿಂತಲೂ ಧ್ಯಾನ ಉತ್ತಮವೆನ್ನಲಾಗಿದೆ (೧೨.೧೨ : ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾತ್ ಧ್ಯಾನಂ ವಿಶಿಷ್ಯತೇ। ಧ್ಯಾನಾತ್ ಕರ್ಮಫಲತ್ಯಾಗಃ ತ್ಯಾಗಾತ್ ಶಾಂತಿರನಂತರಮ್ ॥). ತನಗೆ ಯಾರೂ ಪ್ರಿಯರಲ್ಲ, ಅಪ್ರಿಯರೂ ಅಲ್ಲ ಎಂದು ಭಗವಾನ್ ಹೇಳುತ್ತಾನೆ (೯.೨೯ : ಸಮೋऽಹಂ ಸರ್ವಭೂತೇಷು ನ ಮೇ ದ್ವೇಷ್ಯೋऽಸ್ತಿ ನ ಪ್ರಿಯಃ). ಮೂರು ಅಧ್ಯಾಯಗಳ ತರುವಾಯ ಅದೇ ಭಗವಾನನು ತನ್ನ ಭಕ್ತರು ತನಗೆ ಪ್ರಿಯರೆಂದು ಹೇಳುತ್ತಾನೆ (೧೨.೨೦ : ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇ ಅತೀವ ಮೇ ಪ್ರಿಯಾಃ). ಗುಣ–ಕರ್ಮ ವಿಭಾಗದ ಆಧಾರದ ಮೇಲೆ ತಾನು ವರ್ಣಗಳನ್ನು ಸೃಷ್ಟಿಸಿದ್ದಾಗಿ ಭಗವಾನ್ ಹೇಳಿದ್ದಾನೆ (೪.೧೩ : ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ). ಈ ಗುಣಗಳೆಂದರೆ ಸಾಂಖ್ಯರು ಹೇಳುವ ಸತ್ತ್ವ, ರಜಸ್ ಮತ್ತು ತಮಸ್. ಅವು ಪ್ರಕೃತಿಯಲ್ಲಿರುವ ಗುಣಗಳು. ಇಲ್ಲಿ ಸದ್ಗುಣ–ದುರ್ಗುಣವೆಂಬ ಆಧಾರದಿಂದ ನಡೆದ ವಿಭಜನೆಯೇನೂ ಇಲ್ಲ. ಮೂರು ಗುಣಗಳಿಂದ ನಾಲ್ಕು ವರ್ಣಗಳು ಹೇಗೆ ಬಂದವೆಂದು ಅಂಬೇಡ್ಕರ್ ಪ್ರಶ್ನಿಸಿದ್ದಾರೆ : ಮೂರರ ಪರಿವರ್ತನ ಮಾಡಿದರೆ ಲಬ್ಧವಾಗುವುವು ನಾಲ್ಕೇ ವರ್ಣಗಳಲ್ಲ; ಕನಿಷ್ಠ ಏಳಾದರೂ ಇರಬೇಕಲ್ಲ! ಮುಂದುವರಿದು ಅಂಬೇಡ್ಕರ್ ಹೇಳುತ್ತಾರೆ, ನಿಜಭಕ್ತನ ಲಕ್ಷಣಗಳೆನ್ನಲಾದ ಮೈತ್ರಿ, ಕರುಣಾ, ಮುದಿತಾ ಮತ್ತು ಉಪೇಕ್ಷೆ ಎಂಬುವನ್ನು ಗೀತೆಯು ಬೌದ್ಧರ ತೇವಿಜ್ಜ ಮತ್ತು ಮಹಾಪಾದ ಸುತ್ತಗಳಿಂದ ಎರವಲು ಪಡೆದಿದೆ ಎಂದು.

ಸಾಂಪ್ರದಾಯಿಕವಾಗಿ ಗೀತಾಮೃತವನ್ನು ಉಪನಿಷತ್ತುಗಳೆಂಬ ಗೋವುಗಳ ಉತ್ಪನ್ನವೆಂದು ಭಾವಿಸಲಾಗಿದೆ. ಹಾಲು ಕರೆಯುವವನು ಶ್ರೀಕೃಷ್ಣನಾದರೆ ಗೋವಿನ ಕರು ಅರ್ಜುನ. ಸ್ವಲ್ಪಮಟ್ಟಿಗೆ ಮಾತ್ರ ಇದು ಯಥಾರ್ಥ, ಏಕೆಂದರೆ ಉಪನಿಷತ್ತುಗಳ ಸಾರವನ್ನು ಮೀರಿನಿಲ್ಲುವ ಅನೇಕ ವಿಷಯಗಳು ಗೀತೆಯಲ್ಲಿ ಅಡಕಗೊಂಡಿವೆ. ಉದಾಹರಣೆಗೆ, ಭಕ್ತಿ ಮಾರ್ಗ ಮತ್ತು ವರ್ಣಗಳ ಜಡ್ಡುಗಟ್ಟಿದ ಶ್ರೇಣೀಕರಣ, ಮುಂತಾದವು ಉಪನಿಷತ್ತುಗಳಲ್ಲಿಲ್ಲ. ವರ್ಣಗಳ ಪ್ರಸ್ತಾಪಗಳಿವೆ, ಆದರೆ ಗೀತೆಯಷ್ಟು ಪ್ರಖರವಾಗಿ ವರ್ಣವಿಭಜನೆಯನ್ನು ಎತ್ತಿಹಿಡಿಯುವುದಿಲ್ಲ, ವರ್ಣಧರ್ಮಗಳನ್ನು ನಿಖರವಾಗಿ ಪ್ರತಿಪಾದಿಸುವುದಿಲ್ಲ. ಕಠೋಪನಿಷತ್ತಿನ ಕೆಲವು ಭಾಗಗಳನ್ನು ಯಥಾವತ್ತಾಗಿ ಎತ್ತಿಹಾಕಿಕೊಂಡಿರುವುದರಿಂದ ಗೀತೆಯು ಉಪನಿಷತ್ತುಗಳೆಂಬ ಗೋವಿನ ಶಿಶುವೆಂದು ಬೇಕಾದರೆ ಹೇಳಬಹುದು. ಕಠೋಪನಿಷತ್ತಿನ ಆರನೆಯ ವಲ್ಲಿಯ "ಊರ್ಧ್ವಮೂಲೋ ಅವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ" ಎಂಬುದು ಗೀತೆಯ ೧೫ನೆಯ ಅಧ್ಯಾಯದ ಮೊದಲನೆಯ ಶ್ಲೋಕಕ್ಕೆ ಆಕರ (ಊರ್ಧ್ವಮೂಲಂ ಅಧಃಶಾಖಃ ಏಷೋಽಶ್ವತ್ಥಃ ಸನಾತನಃ). ಇಂದ್ರಿಯ ನಿಗ್ರಹವನ್ನು ರಥದ ರೂಪಕದಿಂದ ನಿರೂಪಿಸುವಾಗ ಕಠೋಪನಿಷತ್ತು ಇಂದ್ರಿಯಗಳು ಕುದುರೆಗಳಂತೆ ಓಡುತ್ತವೆ, ಆದರೆ ಬುದ್ಧಿ ಎಂಬ ಸಾರಥಿಯು ಮನಸ್ಸೆಂಬ ಲಗಾಮಿನಿಂದ ಅವನ್ನು ನಿಯಂತ್ರಿಸಬೇಕು ಎನ್ನುತ್ತದೆ (೩.೩ : ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ। ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ॥). ಈ ಭಾವವನ್ನು ಗೀತೆಯು ವಿವಿಧ ಸಂದರ್ಭಗಳಲ್ಲಿ ಅಭಿವ್ಯಕ್ತಿಸುತ್ತದೆ.

ಉಪನಿಷತ್ತುಗಳು ಹಲವು ವಿಷಯಗಳನ್ನು ಬೇರೆ ಬೇರೆ ದೃಷ್ಟಿಗಳಿಂದ ನೋಡಿರುವುದು ಒಂದು ವೈಶಿಷ್ಟ್ಯ. ಉದಾಹರಣೆಗೆ, "ಆತ್ಮನ್" ಎಂಬುದನ್ನು ಒಂದೆಡೆ ಅಚ್ಚರಿಯೆಂಬಂತೆ "ಪೃಥ್ವಿ" ಎಂದು ವ್ಯಾಖ್ಯಾನಿಸಲಾಗಿದೆ. ಅಂದರೆ, ಅದು ಅಮೂರ್ತವಲ್ಲದ ಇಂದ್ರಿಯಗ್ರಾಹ್ಯ ಪದಾರ್ಥ. ಉದ್ದಾಲಕ ಆರುಣಿಯು ಈ ಮಾತನ್ನು ಹೇಳಿದ್ದಾನೆ (ಛಾಂದೋಗ್ಯ ಉಪನಿಷತ್ತು, ೫.೧೭.೧ : ಅಥ ಹ ಉವಾಚ ಉದ್ದಾಲಕಮಾರುಣಿಂ ಗೌತಮ ಕಂ ತ್ವಂ ಆತ್ಮಾನಮುಪಾಸ್ಸ ಇತಿ ಪೃಥಿವೀಮೇವ ಭಗವೋ ರಾಜನ್ ಇತಿ...). ಬಹುಮುಖೀ ಚಿಂತನೆ ಇರುವ ಉಪನಿಷತ್ತುಗಳ ಮೇಲೆ ನಮ್ಮ ಸಂಪ್ರದಾಯವು ಉತ್ತರೋತ್ತರ ಏಕಾರ್ಥತೆಯನ್ನು ಹೇರಿದೆ. ಆರಂಭದ ಉಪನಿಷತ್ತುಗಳು ಸಹ ಒಂದೆಡೆ, ಒಬ್ಬರಿಂದ, ಒಂದು ಪ್ರದೇಶದಲ್ಲಿ ರಚಿತವಾದುವಲ್ಲ. ಭಿನ್ನ ನಿಲುವುಗಳು ಸಹಜವಾಗಿಯೇ ಉಪನಿಷತ್ತುಗಳಲ್ಲಿ ವ್ಯಕ್ತವಾಗಿವೆ. ಆದರೆ ಹೇಗೋ ಅವನ್ನೆಲ್ಲಾ ಒಂದೇ ಅರ್ಥದವೆಂದು "ಸಮನ್ವಯ" ಮಾಡಿ ಉಪನಿಷತ್ತುಗಳ ವೈಶಾಲ್ಯವನ್ನು ಕುಬ್ಜಗೊಳಿಸಲಾಗಿದೆ. ಹೀಗಿರುವಾಗ, ಗೀತೆಯು ಉಪನಿಷತ್ತುಗಳ ಸಾರವೆಂದು ಕೇವಲ ಒಂದು ದೃಷ್ಟಿಯನ್ನು ಪ್ರತಿಪಾದಿಸಿದರೆ ಅದು ಅಚಾರಿತ್ರಿಕವಾಗುತ್ತದೆ. ಆದ್ದರಿಂದ ಗೀತೆಯಲ್ಲಿ ಅದರ ಸಮಕಾಲೀನ ಸನ್ನಿವೇಶಗಳ ಮತ್ತು ಅವು ಸೃಷ್ಟಿಸಿರುವ ಗೊಂದಲಗಳ ಹಿನ್ನೆಲೆ ದಟ್ಟವಾಗಿ ಕೆಲಸ ಮಾಡಿದೆ.

ಗೀತೆಯು ವಿಶ್ಲೇಷಿಸ ಹೊರಟಿರುವುದು ಮಾನವ ಸಮಾಜದ ತುಮುಲಗಳನ್ನು; ಆದರೆ ಪರಿಹಾರ ಸೂಚಿಸುವಾಗ ಶಿಷ್ಟ ಸಂಪ್ರದಾಯಕ್ಕೆ ಮಾತ್ರವೇ ಮಾನ್ಯತೆ ದೊರಕಿದೆ. ವಿಶ್ವರೂಪ ದರ್ಶನದ ಅಧ್ಯಾಯವನ್ನು ಒಂದು ಉದಾಹರಣೆಯಾಗಿ ನೋಡಬಹುದು. ತನ್ನನ್ನು ತಾನು ಅನಾವರಣಗೊಳಿಸಿಕೊಂಡಾಗ ಎಂತಹ ಅದ್ಭುತ ದೃಶ್ಯ ಅರ್ಜುನನಿಗೆ ಗೋಚರಿಸಿತು! ಆಕಾಶದಲ್ಲಿ ಒಟ್ಟಿಗೆ ಏಕಕಾಲಕ್ಕೆ ಒಂದು ಸಾವಿರ ಸೂರ್ಯರೇನಾದರೂ ಕಾಣಿಸಿಕೊಂಡುಬಿಟ್ಟರೆ ಉಂಟಾಗುವ ಪ್ರಕಾಶಕ್ಕೆ ಸಮನಾದ ಪ್ರಕಾಶವನ್ನು ಅರ್ಜುನ ಭಗವಾನನಲ್ಲಿ ಕಂಡ (೧೧.೧೨ : ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ। ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ॥). ಅಮೆರಿಕಾದ ಲೋಸಾಲಮೋಸ್‌ನಲ್ಲಿ "ಮ್ಯಾನ್‌ಹಟ್ಟಾನ್ ಪ್ರಾಜೆಕ್ಟ್" ಅಡಿಯಲ್ಲಿ ಪರಮಾಣು ಬಾಂಬನ್ನು ತಯಾರಿಸಿ ಪ್ರಯೋಗ ಮಾಡಲೆಂದು ಸಿಡಿಸಿದಾಗ ಯೋಜನೆಯ ನಿರ್ದೇಶಕ ಭೌತಶಾಸ್ತ್ರಜ್ಞ ರಾಬರ್ಟ್ ಓಪನ್‌ಹೈಮರ್ ತಕ್ಷಣವೇ ಈ ಶ್ಲೋಕವನ್ನು ಉದ್ಗರಿಸಿದ್ದ. ಪರಮಾಣು ಬಾಂಬಿನ ಸ್ಫೋಟವು ಅವನ ಕಣ್ಣನ್ನು ಕೋರೈಸಿದ್ದಿತು. ತನ್ನ ಸಂಸ್ಕೃತ ಉಪಾಧ್ಯಾಯ ಎಡ್ಗರ್ಟನ್‌ನಿಂದ ಕಲಿತಿದ್ದ ಗೀತೆಯ ಸಾಲುಗಳು ಅವನಿಗೆ ನೆನಪಿಗೆ ಬಂದವು. ಅವನಿಗೆ ತೋಚಿದ್ದು ಅದ್ಭುತ ಪ್ರಕಾಶವಲ್ಲ, ಬದಲಾಗಿ ಅದು ಭಯಾನಕ ಪ್ರಕಾಶವಾಗಿದ್ದಿತು. ಇರಲಿ, ಅರ್ಜುನನು ಭಗವಾನನಲ್ಲಿ ಅನೇಕ ದೇವತೆಗಳನ್ನು ಕಂಡ : ರುದ್ರ, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನಿಗಳು, ಮರುತ್ತುಗಳು ಇತ್ಯಾದಿ (೧೧.೨೨).

ಭಗವಾನನು ಆ ಬಗ್ಗೆ ಮೊದಲೇ ಸೂಚನೆಯನ್ನು ನೀಡಿದ್ದ (೧೧.೬) : "ವಸುಗಳು, ರುದ್ರರು, ಅಶ್ವಿನಿಗಳು, ಮರುತ್ತುಗಳು ಮುಂತಾದುವನ್ನೆಲ್ಲಾ ನೀನು ನೋಡಬಹುದು; ಈ ದೃಶ್ಯ ಯಾರಿಗೆ ತಾನೇ ಲಭ್ಯ, ಎಷ್ಟು ಅಚ್ಚರಿ ತರುವಂಥವು" ಎಂದು. ಎಲ್ಲಾ ವೈದಿಕ ಶಿಷ್ಟ ದೇವತೆಗಳೇ ! ಊರಿನ ಮಾರಮ್ಮ ಇಲ್ಲದಿದ್ದರೆ ಹೋಗಲಿ, ಕೃಷಿ ಸಂಬಂಧಿ ದೇವತೆಗಳಾದರೂ ಬೇಡವೇ ? ಗೌರಿ–ಗಣೇಶರೂ ಇಲ್ಲ. ಋಗ್ವೇದದ ಗಣಪತಿಯು ಜ್ಯೇಷ್ಠರಾಜ ಮತ್ತು ಬ್ರಹ್ಮಣಸ್ಪತಿ; ಈಗ ಪೂಜೆಗೆ ಅರ್ಹನಾಗಿರುವ ಗಣಪತಿ ಗೀತೆಯ ಕಾಲದಲ್ಲಿನ್ನೂ ಪ್ರವರ್ಧಮಾನಕ್ಕೆ ಬಂದಿರಲಿಲ್ಲವೇನೋ !

ಇದರ ಪ್ರಸ್ತಾಪವು ಏಕೆ ಪ್ರಸ್ತುತವೆಂದರೆ ಭಾರತದ ಧಾರ್ಮಿಕ ತತ್ತ್ವಶಾಸ್ತ್ರವು ಪ್ರಾಕೃತ ಆದಿಮ ಆಚರಣೆಗಳಿಂದ ವಿಕಾಸ ಹೊಂದಿದೆ. ಆದಿಮ ಆಚರಣೆಗಳಲ್ಲಿ ಜನಸಮುದಾಯವು ದೇವರಿಗೆ ಪ್ರಾರ್ಥನೆ ಸಲ್ಲಿಸುವುದಿಲ್ಲ; ಬದಲಾಗಿ, ತನ್ನ ಮಾಂತ್ರಿಕ ಕ್ರಿಯೆಯಿಂದ ಈಪ್ಸಿತಾರ್ಥ ದಕ್ಕಿಯೇ ತೀರುತ್ತದೆಂಬ ಖಾತ್ರಿ ಸಮುದಾಯಕ್ಕಿದೆ. ಈಗಲಾದರೋ ಎಲ್ಲವನ್ನೂ ಹೊಂದಿರುವ ದೇವತೆಗಳು ಸಹ ತಮ್ಮ ಇಷ್ಟಾರ್ಥ ಪ್ರಾಪ್ತಿಗೆ ಗಣೇಶನಲ್ಲಿ ಮೊರೆ ಇಡುತ್ತಾರೆ ! (ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ). ಪ್ರಾಚೀನರಿಗೆ ಪ್ರಕೃತಿಯ ಅನುಕರಣೆಯು ಒಂದು ರೀತಿ ಪ್ರಕೃತಿಗೆ ಆಜ್ಞೆ ನೀಡಿದಂತೆಯೇ. ಕೃಷಿ ಕ್ಷೇತ್ರದಲ್ಲಿ ಇಂದಿಗೂ ಅಂತಹ ಹಲವು ವಿಧಿಗಳು ಉಳಿದುಬಂದಿವೆ. ಆದಿಮ ಬುಡಕಟ್ಟು ಸಂಸ್ಕೃತಿಯ ಮಾಂತ್ರಿಕ ಆಚರಣೆಗಳ ಮುಂದುವರಿದ ಹಂತವೆಂದರೆ ವೈದಿಕ ಯಜ್ಞ. ಮಾಂತ್ರಿಕ ಆಚರಣೆಗಳ ಪ್ರತಿರೂಪ ಅದು ಎಂದು ಬೇಕಾದರೂ ಹೇಳಬಹುದು. ಯಜ್ಞದಲ್ಲಿ ಕ್ರಿಯೆಗೆ ಮತ್ತು ಮಂತ್ರಕ್ಕೆ ಪ್ರಾಧಾನ್ಯವಿದೆಯೇ ಹೊರತು ದೇವತೆಗಲ್ಲ. ದೇವತೆಗಳ ಹೆಸರುಗಳು ಕೇವಲ ಹೆಸರುಗಳು, ಅಷ್ಟೇ. ಅವನ್ನು ತುಷ್ಟಿಗೊಳಿಸುವ ಅವಶ್ಯಕತೆಯಿಲ್ಲ. ಮಂತ್ರದ ಶಕ್ತಿಯಿಂದ ಫಲವು ದಕ್ಕುತ್ತದೆ. ಹಾಗೆ ಸಂಚಯವಾಗುತ್ತಾ ಹೋಗುವ ಫಲವನ್ನು ಪೂರ್ವ ಮೀಮಾಂಸಕರು 'ಅಪೂರ್ವ' ಎಂದು ಕರೆದಿದ್ದಾರೆ. ಭಗವದ್ಗೀತೆಯು ಯಜ್ಞವನ್ನು ಕುರಿತಂತೆ ಅಸಡ್ಡೆಯ ಭಾವವನ್ನು ಹೊಂದಿಲ್ಲ, ಆದರೆ ಯಜ್ಞವನ್ನು ಪುರಸ್ಕರಿಸುವುದೂ ಇಲ್ಲ. ಅದು ಪೂರ್ವ ಮೀಮಾಂಸೆಯ ನಿರೂಪಣೆಗೆ ಭಿನ್ನವಾಗಿ, ದೇವತೆಗಳು ಯಜ್ಞದಿಂದಾಗಿ ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತಾರೆ ಎಂದು ಹೇಳುತ್ತದೆ (೩.೧೨ : ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ). ಯಜ್ಞದಿಂದ ಮಳೆ ಸುರಿಯುತ್ತದೆಂದು ಹೇಳುವ ಗೀತೆ (೩.೧೪ : ಯಜ್ಞಾದ್ಭವತಿ ಪರ್ಜನ್ಯಃ) ಬಹುಶಃ ಪ್ರಾಚೀನ ಆಚರಣೆಯೊಂದರ ಸ್ಮೃತಿಯನ್ನು ದಾಖಲಿಸಿದೆ. ಗೀತೆಯ ದೃಷ್ಟಿಯಲ್ಲಿ ಯಜ್ಞವೆಂದರೆ 'ಬ್ರಹ್ಮಯಜ್ಞ' ಮಾತ್ರ (೪.೨೪ : ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ । ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ – ಕರ್ಮಸಮಾಧಿನಾ ॥). ದೇವತೆ, ಹವಿಸ್ಸು, ಗಾರ್ಹಪತ್ಯಾಗ್ನಿ, ಉದ್ದೇಶಿತ ಗುರಿ ಎಲ್ಲವೂ ಬ್ರಹ್ಮವೇ.

ತಥಾಕಥಿತ 'ಆಸ್ತಿಕ' ದರ್ಶನಗಳ ಪೈಕಿ ನ್ಯಾಯ ಮತ್ತು ವೈಶೇಷಿಕಗಳನ್ನುಳಿದು ಬೇರೆ ನಾಲ್ಕನ್ನೂ (ಸಾಂಖ್ಯ, ಯೋಗ, ಪೂರ್ವ ಮೀಮಾಂಸೆ ಮತ್ತು ಉತ್ತರ ಮೀಮಾಂಸೆ ಅಥವಾ ವೇದಾಂತ) ಗೀತೆಯು ಪ್ರಸ್ತುತಪಡಿಸಿದೆ ಮತ್ತು ಅವೆಲ್ಲವನ್ನೂ ಸಹಾನುಭೂತಿಯಿಂದ ನೋಡಿದೆ. ನೈತಿಕತೆ, ಮೌಲ್ಯ, ಮೋಕ್ಷ, ಅಧ್ಯಾತ್ಮ, ಇವುಗಳನ್ನೆಲ್ಲಾ ಗೌಣವಾಗಿ ನೋಡಿ, ಜ್ಞಾನ ಸಾಧನಗಳಾದ ಪ್ರಮಾಣಗಳು ಮತ್ತು ಪ್ರಮೇಯವಾದ ಭೌತ ಪ್ರಪಂಚವನ್ನು ಕೇಂದ್ರೀಕರಿಸಿ ಚಿಂತನೆ ನಡೆಸಿದ ನ್ಯಾಯ ಮತ್ತು ವೈಶೇಷಿಕಗಳು ಗೀತೆಯ ಪರಿಧಿಗೆ ಹೊರತಾಗಿ ನಿಲ್ಲುತ್ತವೆ. ಅಂದರೆ, ನ್ಯಾಯ ಮತ್ತು ವೈಶೇಷಿಕ ದರ್ಶನಗಳು ನೈತಿಕತೆಗಾಗಲಿ ಬೇರೆ ಮೌಲ್ಯಗಳಿಗಾಗಲಿ ವಿಮುಖವಾಗಿ ನಿಲ್ಲುತ್ತವೆಂದು ಇದರರ್ಥವಲ್ಲ. ಅವುಗಳ ಪರಿಧಿಯು ವಿಶೇಷವಾಗಿ ಪ್ರಮಾಣ ಮತ್ತು ಪ್ರಮೇಯಗಳನ್ನು ಒಳಗೊಂಡಿದೆ. ನ್ಯಾಯದರ್ಶನವು ಜ್ಞಾನವನ್ನು ಪಡೆಯುವ ವಿಧಾನಗಳನ್ನು ವ್ಯಾಪಕವಾಗಿ ಚರ್ಚಿಸುತ್ತದೆ ಮತ್ತು ವೈಶೇಷಿಕವು ತಿಳಿವಿಗೆ ನಿಲುಕುವ ಭೌತ ಪ್ರಪಂಚವನ್ನು ವಿಂಗಡಿಸಿ ವ್ಯಾಖ್ಯಾನಿಸುತ್ತದೆ. ತತ್ತ್ವಶಾಸ್ತ್ರದಲ್ಲಿ ಇವೇ ಮೂಲಭೂತ ಅಂಶಗಳೆಂಬುದು ಅವುಗಳ ಗ್ರಹಿಕೆ. ಪದಾರ್ಥ ಚಿಂತನೆಯು ಆಯುರ್ವೇದಕ್ಕೆ ಮತ್ತು ವೈಶೇಷಿಕ ದರ್ಶನಕ್ಕೆ ಪ್ರಧಾನ ವಿಷಯವೇ ವಿನಾ ಗೀತೆಗಲ್ಲ. ಕ್ಷೇತ್ರ–ಕ್ಷೇತ್ರಜ್ಞ ಜಿಜ್ಞಾಸೆಗೆ ಮೀಸಲಾದ ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ "ಕ್ಷೇತ್ರ"ವು ಪದಾರ್ಥ ಜ್ಞಾನವನ್ನು ಕುರಿತು ಹೇಳಬಹುದಿತ್ತು. ಆದರೆ ತಿಳಿಯಬೇಕಾದ್ದು ಅಥವಾ 'ಜ್ಞೇಯ' ಎಂಬುದು ಆದಿರಹಿತ 'ಬ್ರಹ್ಮ' ಮತ್ತು ಅದು 'ಸತ್' ಆಗಲೀ 'ಅಸತ್' ಆಗಲೀ ಅಲ್ಲವೆಂದು ಗೀತೆ ಹೇಳುತ್ತದೆ (೧೩.೧೨ : ಅನಾದಿಮತ್ ಪರಂ ಬ್ರಹ್ಮ ನ ಸತ್ ತನ್ನಾಸದುಚ್ಯತೇ॥). ಅರ್ಜುನನ ಪ್ರಶ್ನೆಗಳು 'ಇಹ'ದ ಸಂಬಂಧದವು, ಆದರೆ ಭಗವಾನನ ಉತ್ತರ ಬಹುಮಟ್ಟಿಗೆ 'ಪರ'ದ ಪರವಾಗಿ ಬಿಟ್ಟಿದೆ. "ಅಲ್ಲಿರುವುದು ನಮ್ಮ ಮನೆ" ಎಂಬ ಭಾವಕ್ಕೆ ಆದ್ಯತೆ ನೀಡಿದರೆ "ಇಲ್ಲಿರುವುದು ಸುಮ್ಮನೆ" ಎಂದು ಸುಮ್ಮನಿರಬೇಕೆಂಬ ಕರೆ ಕೊಟ್ಟಂತೆಯೇ ಸರಿ. ಸಮಾಜದ ಮೂಲಭೂತ ಸಮಸ್ಯೆಗಳಿಗೆ ವಿಮುಖವಾಗುವುದು ಅದರ ಹಿಂದಿನ ಆಕಾಂಕ್ಷೆ. ನ್ಯಾಯ ದರ್ಶನದಲ್ಲಿ ಕ್ರಿಯೆಯ ಫಲಕಾರಿತ್ವವು ಆಚರಣೆ ಅಥವಾ ಪ್ರಯೋಗದಿಂದ ನಿಶ್ಚಯವಾಗುತ್ತದೆಂಬ ನಿಲುವಿದೆ. ನೀರು ಕುಡಿದರೆ ಬಾಯಾರಿಕೆ ಹಿಂಗುತ್ತದೆಯೇ ಎಂದರೆ 'ಕುಡಿದು ನೋಡು' ಎನ್ನುವುದು ನ್ಯಾಯಸೂತ್ರದ ನಿರ್ದೇಶನ. ಸರೋವರದ ನೀರು ಮತ್ತು ಮರೀಚಿಕೆಯ ನೀರು ಇವೆರಡರಲ್ಲಿ ಯಾವುದು ಫಲಕಾರಿ ಎಂಬುದು ಜಿಜ್ಞಾಸೆಯ ವಸ್ತುವಲ್ಲ, ಪ್ರಯೋಗದ ವಸ್ತು. ಅರ್ಜುನನ ಸಂದೇಹಗಳು ಪ್ರಾಯೋಗಿಕ ನೆಲೆಯವು; ಅಂದರೆ, ಗೀತೆಯ ಕಾಲದ ಸಮಾಜದಲ್ಲಿ ಅವನೆತ್ತುವ ಪ್ರಶ್ನೆಗಳನ್ನು ಎತ್ತುವವರಿದ್ದಾರೆ. ಅವು ಅಸ್ತಿತ್ವದಲ್ಲಿರುವ ವ್ಯವಸ್ಥೆಗೆ ಅರುಚಿಕರವಾದ್ದರಿಂದ ಆ ಪ್ರಶ್ನೆಗಳೇ ಅಪ್ರಸ್ತುತವೆನಿಸಿಬಿಡುವ ಬೌದ್ಧಿಕ ಹುನ್ನಾರವು ಆಳ್ವಿಕೆಯ ಹಿತಕ್ಕೆ ಅನುವಾಗುವಂಥದು. ಆದ್ದರಿಂದ ನ್ಯಾಯ ಮತ್ತು ವೈಶೇಷಿಕಗಳನ್ನು ಗಮನಕ್ಕೆ ತೆಗೆದುಕೊಳ್ಳದಿರುವುದು ಮತ್ತು ಮೂಲ ಸಾಂಖ್ಯ ತತ್ತ್ವದ ಬದಲಾದ ರೂಪದಲ್ಲಿ ಸಾಂಖ್ಯವನ್ನು ಗ್ರಹಿಸುವುದು ಉದ್ದೇಶರಹಿತವಲ್ಲ. ಗೀತೆಯು ಉಪದೇಶಿಸುವ 'ಭಕ್ತಿ'ಯು ಯೋಗ ಸೂತ್ರವು ನಿರ್ದೇಶಿಸುವ "ಈಶ್ವರ ಪ್ರಣಿಧಾನ"ಕ್ಕಿಂತಲೂ ಭಿನ್ನವಾದ್ದು, ವಿಶಿಷ್ಟವಾದ್ದು. ಅಭ್ಯಾಸ ಮತ್ತು ವೈರಾಗ್ಯಗಳಿಂದಲ್ಲದೆ ಈಶ್ವರ ಪ್ರಣಿಧಾನದಿಂದಲೂ ಮನಸ್ಸಿನ ಹುಚ್ಚು ಹರಿದಾಟವನ್ನು ನಿರೋಧಿಸಬಹುದೆಂಬುದು ಪತಂಜಲಿಯ ಹೇಳಿಕೆ; ಗೀತೆಯ 'ಭಕ್ತಿ' ಅಲ್ಲಿಂದ ಬಹುದೂರ ಸಾಗಿಹೋಗಿದೆ. ಭಾರತೀಯ ಸಾಹಿತ್ಯದಲ್ಲಿ ಮತ್ತು ಸಂಸ್ಕೃತಿಯ ಚರಿತ್ರೆಯಲ್ಲಿ ಗೀತೆಗೆ ಮುನ್ನ 'ಭಕ್ತಿ'ಗೆ ಅಷ್ಟು ಪ್ರಾಧಾನ್ಯ ದೊರಕಿದ್ದು ಇಲ್ಲವೇ ಇಲ್ಲ, ಅಥವಾ ಏನಾದರೂ ಇದ್ದರೆ ಅದು ಅತಿ ವಿರಳ. ಬುಡಕಟ್ಟು ವ್ಯವಸ್ಥೆಯಲ್ಲಿ ಯಜಮಾನ ಮತ್ತು ಆಳು ಎಂಬ ವಿಭಜನೆ ಇಲ್ಲದ್ದರಿಂದ ಬುದ್ಧನ ಚಿಂತನೆಯಲ್ಲಿ ಭಕ್ತಿಗೆ ಸ್ಥಾನವಿಲ್ಲ; ಅವನು ಒತ್ತು ಕೊಡುವುದು "ಪ್ರತೀತ್ಯ ಸಮುತ್ಪಾದ"ಕ್ಕೆ. ಅಂದರೆ ಕಾರ್ಯ–ಕಾರಣ ಭಾವಕ್ಕೆ. ದುಃಖವು ಕಾರ್ಯ; ಅದಕ್ಕೆ ಕಾರಣವಿದೆ. ಆ ಕಾರಣವನ್ನು ತೊಡೆದುಹಾಕದೆ ದುಃಖದ ನಿವಾರಣೆ ಸಾಧ್ಯವಿಲ್ಲ. ಇದು ಬುದ್ಧನ ಕ್ರಮ. ದುಃಖವನ್ನು ಗೌಣವಾಗಿಸಿ, ದುಃಖಿತನನ್ನು ಭಕ್ತಿಯಲ್ಲಿ ಮೈಮರೆ ಯುವಂತೆ ಪ್ರೇರೇಪಣೆ ನೀಡುವುದು ಗೀತೆಯ ಕ್ರಮ. ಭಕ್ತಿಯು ದುಃಖವನ್ನು ಇಲ್ಲವಾಗಿಸುತ್ತದೋ ಅಥವಾ ಮರೆಮಾಡುತ್ತದೋ ಎಂಬುದು ವಿಚಾರಾರ್ಹವಾಗಿದೆ. ಹೊಸದಾಗಿ ಆವಿರ್ಭಾವಗೊಳ್ಳುತ್ತಿದ್ದ ಊಳಿಗಮಾನ್ಯ ಪ್ರಭುತ್ವಕ್ಕೆ ಶ್ರೇಣೀಕೃತ ವ್ಯವಸ್ಥೆ ಅಗತ್ಯವಾಗಿತ್ತು ; ಆಗತಾನೆ ಬುಡಕಟ್ಟು ವ್ಯವಸ್ಥೆಯಿಂದ ಹೊರಬರುತ್ತಿದ್ದ ಋಗ್ವೇದದ ಕವಿಗಳಿಗೆ ಅದರ ಅಗತ್ಯವೇನೂ ಕಂಡುಬಂದಿರಲಿಲ್ಲ. ಅಗತ್ಯವೆಂದು ಕಂಡಾಗ ಅದನ್ನು ಪೋಷಿಸ ಹೊರಟಿದ್ದ ಯುಗದಲ್ಲಿ ಬುದ್ಧ ಅದರ ವಿರುದ್ಧದ ನೆಲೆಯಲ್ಲಿ ನಿಂತ. ಗೆಲಿಲಿಯೋ ಮಾಡಿದ್ದೂ ಅದನ್ನೇ. ಸ್ಥಿರವಾಗಿ ನೆಲೆಸಿದ್ದ, ಸಾಮಾನ್ಯವಾಗಿ ಅಂಗೀಕೃತವೆಂದು ಭಾವಿಸಲಾಗಿದ್ದ, ಸ್ವಾಮಿನಿಷ್ಠೆಯನ್ನು ಪ್ರಶ್ನಿಸುವ ಸಾಧ್ಯತೆಯನ್ನು ಅವನ ವೈಜ್ಞಾನಿಕ ವಿವರಣೆಯು ನಿರ್ಮಿಸಿತು. ಒಂದು




ಹೊಳೆಗೆ ಹಾಕ್ತೀರೊ ಅಥವಾ ಗುಂಡಿಗೆ ಹಾಕ್ತೀರೋ ನಂಗೊತ್ತಿಲ್ಲ, ಈ ವರ್ಷ ಕೋಟಿ ಗಿಡಗಳು ಖಾಲಿಯಾಗಿರಬೇಕು!

ನೆಲೆಯಲ್ಲಿ ದೈವಭಕ್ತಿ, ಇನ್ನೊಂದು ನೆಲೆಯಲ್ಲಿ ಸ್ವಾಮಿಭಕ್ತಿ : ಪ್ರಭುತ್ವಕ್ಕೆ ಇದು ಸೊಗಸಾದ ಊರುಗೋಲು.

ಈ ಸಂಬಂಧದಲ್ಲಿ ನಮಗೆ ನೂರಾರು ಕತೆಗಳು ಲಭ್ಯವಿವೆ. ಈಗಲೂ ಅಂಥವನ್ನು ಹೆಣೆದು ಜನರ ಮುಂದಿಡುವವರಿದ್ದಾರೆ. ೨೦೧೧ರ ಸೆಪ್ಟೆಂಬರ್–ಅಕ್ಟೋಬರ್‌ನ ಕನ್ನಡ ಮಾಸಪತ್ರಿಕೆ 'ಉತ್ಥಾನ' ಅಂಥದೊಂದು ಕತೆಯನ್ನು ಸಂಭ್ರಮದಿಂದ ನಮ್ಮ ಮುಂದಿಟ್ಟಿದ್ದಿತು : ಹೆಚ್ಚು ಕಡಿಮೆ ಶಂಕರಾಚಾರ್ಯರ ಸಮಕಾಲೀನನಾದ ಕುಮಾರಿಲ ಭಟ್ಟ ಮಹಾವಿಷ್ಣುವಿನ ಭಕ್ತನಾಗಿದ್ದನಂತೆ. ಏಳನೆಯ ಶತಮಾನದ ನವ ಪ್ರಹ್ಲಾದ ಇವನು ! ಬೌದ್ಧರು ಅವನ ನಂಬಿಕೆಯನ್ನು ಜರಿದು ಪ್ರಶ್ನಿಸಿದರು, ಸವಾಲೆಸೆದರು. ಅವರಿಗೆ ಉತ್ತರವಾಗಿ ಕುಮಾರಿಲ ಒಂದು ಬೆಟ್ಟದಿಂದ ಜಿಗಿದು ಕೆಳಕ್ಕುರುಳಿದ. ಆದರೆ ಅವನ ದೇಹಕ್ಕೆ ಯಾವ ಬಾಧೆಯೂ ತಗುಲಲಿಲ್ಲ. ಇದನ್ನು ಕಂಡ ಬೌದ್ಧರು ಬಾಯಿ ಮುಚ್ಚಿಕೊಂಡು ಜಾಗ ಖಾಲಿ ಮಾಡಿದರು !




ಇತಿಹಾಸದಲ್ಲಿ ನಮಗೆ ದೊರಕುವ ಕುಮಾರಿಲ ಅಂತಹ ಪರಮಭಕ್ತನಲ್ಲ, ಏಕೆಂದರೆ ಅವನ ಪೂರ್ವ ಮೀಮಾಂಸಾ ದರ್ಶನದಲ್ಲಿ ದೇವರಿಗೆ ಅಸ್ತಿತ್ವವೇ ಇಲ್ಲ. ತನ್ನ 'ಶ್ಲೋಕವಾರ್ತಿಕ'ದ ನಿರಾಲಂಬನವಾದವೆಂಬ ಪ್ರಕರಣದಲ್ಲಿ ಅವನು ಕೆಲವು ಅನುಭವಗಳನ್ನು ತೀರಾ ವೈಯಕ್ತಿಕವೆಂಬ ಕಾರಣಕ್ಕೆ ಅವುಗಳ ಪ್ರಾಮಾಣ್ಯವನ್ನು ನಿರಾಕರಿಸುತ್ತಾನೆ. ಅವನು ಬೌದ್ಧರನ್ನು ಟೀಕಿಸುವುದು ಉಂಟು, ಆದರೆ ತನ್ನ ಯಾವ ವಾದವನ್ನೂ ಬೆಟ್ಟದಿಂದ ಜಿಗಿಯುವ ಮುಖಾಂತರ ಸಾಬೀತುಪಡಿಸುವ ಅವಶ್ಯಕತೆ ಅವನಿಗಿರಲಿಲ್ಲ. ವೈಶೇಷಿಕ ಸೂತ್ರದಲ್ಲಿ ಕಣಾದನು ಎಲ್ಲೂ "ನನ್ನ ಈ ದಾರ್ಶನಿಕ ಗ್ರಂಥವನ್ನು ಓದಿದರೆ ಅಥವಾ ಕೇಳಿದರೆ ನಿಃಶ್ರೇಯಸ ದೊರೆಯುತ್ತದೆ" ಎಂದು ಹೇಳಲಿಲ್ಲ. ಆರಂಭದಲ್ಲಿ ಅವನು ಸೂಚಿಸುವ 'ಧರ್ಮ'ದ ಜ್ಞಾನ ದೊರೆಯುತ್ತದೆ ಎಂದು ಸಹ ಹೇಳಲಿಲ್ಲ. ದಾರ್ಶನಿಕ ಚಿಂತನೆಯ ಸೂಕ್ಷ್ಮಗಳನ್ನು ವಿಸ್ತರಿಸುವುದಷ್ಟೇ ಅವನ ಉದ್ದೇಶವಾಗಿತ್ತು. ಭಗವದ್ಗೀತೆಯು ನೀತಿಗ್ರಂಥವೇ ಆಗಿರಲಿ, ಮತಧರ್ಮ ಗ್ರಂಥವೇ ಆಗಿರಲಿ, ದಾರ್ಶನಿಕ ಗ್ರಂಥವೇ ಆಗಿರಲಿ, ಅದು ತನ್ನ ಮಹತ್ವವನ್ನು ಘೋಷಿಸಿ ಕೊಳ್ಳುವ ಪರಿಯೇ ವಿಚಿತ್ರವಾಗಿದೆ. ಯಾವ ಕಾವ್ಯಾಂಶವಾಗಲೀ ಭಕ್ತಿಲೇಪವಾಗಲೀ ಇಲ್ಲದ "ಬ್ರಹ್ಮ ಮುರಾರಿಸುರಾರ್ಚಿತ ಲಿಂಗಂ" ಎಂಬ ಲಿಂಗಾಷ್ಟಕವೊಂದಿದೆ. ಪಾಪ, ಅಂತಹ ನೀರಸ ಕೃತಿಯ ಕರ್ತೃತ್ವವನ್ನು ಶಂಕರಾಚಾರ್ಯರ ಹೆಸರಿನೊಂದಿಗೆ ಲಗತ್ತಿಸಲಾಗಿದೆ. ಅದನ್ನು ಪಠಿಸಿದವರು "ಶಿವಲೋಕವನ್ನು ಹೊಕ್ಕು ಶಿವನೊಂದಿಗೆ ಮುದದಿಂದ ಇರುತ್ತಾರೆ" ಎಂದು ಅಷ್ಟಕದ ಕೊನೆಯಲ್ಲಿ ಸೇರಿಸಲಾಗಿದೆ. ಭಗವದ್ಗೀತೆಯು ಲಿಂಗಾಷ್ಟಕದ ಮಟ್ಟದಿಂದ ಬಹು ಮೇಲಿನದಾದರೂ ಅದನ್ನು ಪಠಿಸುವುದಿರಲಿ, ಪಠಣ ಕೇಳಿದವರಿಗೂ ಎಂತಹ ಫಲ ಲಭಿಸುತ್ತದೆಂದು ಗೀತೆಯೇ ಹೇಳಿಕೊಂಡುಬಿಟ್ಟಿದೆ. ಕುರುಕ್ಷೇತ್ರ ಯುದ್ಧದ ಕೃಷ್ಣಾರ್ಜುನರಿಗೂ ಗೀತೆಗೂ ಸಂಬಂಧವಿಲ್ಲ ಎಂಬುದಕ್ಕೆ ಅದೊಂದು ಪುರಾವೆಯೇ ಸಾಕು. ಯಾರೋ ಅನಾಮಿಕ ತತ್ತ್ವಶಾಸ್ತ್ರ ಚಿಂತಕನು ಗೀತೆಯನ್ನು ರಚಿಸಿದ್ದಾನೆ ಎಂಬುದು ಸ್ಪಷ್ಟವಾಗಿದೆ. ಅವನು ಹೇಳಿದ್ದಾನೆ : ಗೀತೆಯ ಉಪದೇಶವನ್ನು ಅಸೂಯೆಯಿಲ್ಲದ ಶ್ರದ್ಧಾವಂತನು ಕೇಳಿದರೆ ಅವನು ಅಥವಾ ಅವಳು ಮುಕ್ತಿ ಪಡೆಯುವುದಲ್ಲದೆ ಪುಣ್ಯಕರ್ಮ ಮಾಡಿದವರು ಪಡೆಯುವ ಶುಭಲೋಕಗಳ ಪ್ರಾಪ್ತಿಗೆ ಅರ್ಹರಾಗುತ್ತಾರೆ, ಎಂದು (೧೮.೭೧ : ಶ್ರದ್ಧಾವಾನ್ ಅನಸೂಯಶ್ಚ ಶೃಣುಯಾದಪಿ ಯೋ ನರಃ । ಸೋऽಪಿ ಮುಕ್ತಃ ಶುಭಾನ್ ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಂ ॥). ನಮ್ಮ ದೇಶದಲ್ಲಿ ಅಂತಹ ಅರ್ಹತೆ ಪಡೆಯುತ್ತಿರುವ ಜನಗಳ ಸಂಖ್ಯೆ ಅಪಾರವಾಗಿದೆ ! ಕೇವಲ ಗೀತಾ ಜ್ಞಾನಯಜ್ಞದ ಮಾತು ಕೇಳಿ ಪುನೀತರಾಗುವುದು ನಮ್ಮ ಸಮಾಜದ ವಿಪರ್ಯಾಸ. ಸತ್ಯನಾರಾಯಣ ವ್ರತದ ಕತೆಯನ್ನು ಕೇಳುವಾಗ ಮಧ್ಯೆ ಎದ್ದು ಹೊರಟ ಪ್ರೊ॥ ಮೂರ್ತಿರಾಯರಿಗೆ ಯಾರೋ ಹೇಳಿದ್ದರಂತೆ, "ಹೀಗೆ ಎದ್ದುಹೋಗಿ ಏಕೆ ಅನವಶ್ಯಕವಾದ ಗಂಡಾಂತರಕ್ಕೆ ಸಿಲುಕಿಕೊಳ್ಳುತ್ತೀರಿ" ಎಂದು. ಗೀತೆ, ಗಂಗೆ, ಗಾಯತ್ರಿ ಮತ್ತು ಗೋವಿಂದ ಎಂಬ ನಾಲ್ಕು 'ಗಕಾರ'ಗಳು ಪುನರ್ಜನ್ಮದಿಂದ ಜನರನ್ನು ಪಾರು ಮಾಡುತ್ತವಂತೆ (ಗೀತಾ ಗಂಗಾ ಚ ಗಾಯತ್ರೀ ಗೋವಿಂದೋ ಹೃದಿ ಸಂಸ್ಥಿತಃ । ಚತುರ್ಗಕಾರ ಸಂಯೋಗಾತ್ ಪುನರ್ಜನ್ಮ ನ ವಿದ್ಯತೇ ॥). ಪುನರ್ಜನ್ಮವಿಲ್ಲವೆಂದರೆ ಮುಕ್ತಿ ಪ್ರಾಪ್ತಿಯಾಯಿತೆಂದೋ ಏನೋ ತಿಳಿಯದು. ಗೀತೆಯನ್ನು ಲೇವಡಿ ಮಾಡಲು ಹೇಳುವ ಮಾತಲ್ಲ ಇದು; ಗೀತೆಯು ಗಂಭೀರವಾದ ಗ್ರಂಥ, ಅದರಲ್ಲಿ ಲೇವಡಿಗೆ ಯೋಗ್ಯವಾದುದೇನೂ ಇಲ್ಲ. ಆದರೆ ಎರಡು ಪ್ರಶ್ನೆಗಳು ಅನಿವಾರ್ಯ : (ಅ) ಉಪದೇಶ ಕೇಳುವುದಷ್ಟೇ ಸಾಕೋ, ಅಥವಾ ಕೇಳಿದ್ದರ ಪರಿಣಾಮವಾಗಿ ಯಾವುದಾದರೂ ಕ್ರಿಯೆಯಲ್ಲಿ ತೊಡಗಿ ವ್ಯಕ್ತಿತ್ವದ ಬದಲಾವಣೆ ಮಾಡಿ ಕೊಳ್ಳಬೇಕೋ ? (ಆ) ಕೇಳಿದ್ದರಿಂದ ದೊರೆಯುತ್ತದೆ ಎನ್ನಲಾದ ಮುಕ್ತಿಯ ಲಕ್ಷಣಗಳೇನು ? ಮೊದಲ ಪ್ರಶ್ನೆಗೆ ಉತ್ತರ ಕಣ್ಣ ಮುಂದಿದೆ. ಉಪದೇಶ ಆಲಿಸಿದ ನಂತರ ಅಮೋಘ ಬದಲಾವಣೆ ತಂದುಕೊಂಡ ವ್ಯಕ್ತಿಗಳು ದುರ್ಲಭ; ಹಾಗೇನಾದರೂ ಬದಲಾಗಿದ್ದರೆ ಈ ಉಪದೇಶ ಕೇಳಿದ್ದರಿಂದ ಆಯಿತೆಂಬುದಕ್ಕೇನೂ ಪುರಾವೆಯಿಲ್ಲ. ಗೀತೆಯ ಹೆಸರೇ ಗೊತ್ತಿಲ್ಲದ ಗುಡ್ಡಗಾಡು ಜನರೆಲ್ಲಾ ಅಸಭ್ಯರೇನಲ್ಲ. ಎರಡನೆಯ ಪ್ರಶ್ನೆಗೆ ಉತ್ತರ ಸಂಕೀರ್ಣವಾಗಿದೆ. ಮಾನವನ ನಿಜವಾದ ಮುಕ್ತಿಗೆ ಮನುಕುಲದ ಎಲ್ಲ ಬಂಧನಗಳಿಂದ ಬಿಡುಗಡೆ ಹೊಂದುವುದು ಅವಶ್ಯಕ. ಅದು ಸಾಂಸ್ಕೃತಿಕ ಮತ್ತು ಆರ್ಥಿಕ ಬಂಧನಗಳಿಂದ ಬಿಡುಗಡೆಯನ್ನೂ ಒಳಗೊಂಡಿರುತ್ತದೆ. ಒಂದೊಂದು ಸಾಮಾಜಿಕ ಸಂರಚನೆಯಲ್ಲೂ ಒಂದೊಂದು ಬಗೆಯ ಬಂಧನ ಉಂಟು. ಗುಲಾಮಗಿರಿ ಪದ್ಧತಿಯ ವ್ಯವಸ್ಥೆಯಲ್ಲಿ ಒಂದು ರೀತಿಯ ಬಂಧನ, ಊಳಿಗಮಾನ್ಯ ಪ್ರಭುತ್ವದ ವ್ಯವಸ್ಥೆಯಲ್ಲಿ ಬೇರೊಂದು ತೆರನ ಬಂಧನ. ಮಾನವ ಸಮಾಜಕ್ಕೆ ಶತಮಾನಗಳ ಇತಿಹಾಸ ಇದೆ. ಇತಿಹಾಸ ದುದ್ದಕ್ಕೂ ಅದು ಬದಲಾಗುತ್ತಾ ಸಾಗಿಬಂದಿದೆ. ವಿವಿಧ ಘಟ್ಟಗಳ ಸಂರಚನೆಗಳು ಭಿನ್ನ. ಸನ್ನಿವೇಶ ಹೇಗಿದ್ದರೂ ಸರಿಯೆ, ಅದನ್ನು ಸಹಿಸುವುದು ಮುಕ್ತಿ ಎಂಬ ಮಾತನ್ನೇನಾದರೂ ಹೇಳಿದರೆ ಕ್ರಿಯೆಗಿಂತಲೂ ನಿಷ್ಕ್ರಿಯೆಗೆ ಒತ್ತುಕೊಟ್ಟಂತಾಗುತ್ತದೆ. ಗುಲಾಮನ ಕರ್ಮವು ಗುಲಾಮನಾಗಿರುವುದು, ಒಡೆಯನ ಕರ್ಮ ಒಡೆಯ ನಾಗಿರುವುದು ಎಂದು ಅದರರ್ಥ. ಇಬ್ಬರಿಗೂ ಮುಕ್ತಿ ಬೇಕು, ಆದರೆ ಮುಕ್ತಿಯ ಸ್ವರೂಪ ಒಂದೇ ಅಲ್ಲ. ಒಂದು ಗ್ರಂಥದ ಪಠಣದಿಂದ ಅಥವಾ ಒಂದು ತತ್ತ್ವದ ಅರಿವಿನಿಂದ ಗಳಿಸಬಹುದಾದ ಮುಕ್ತಿ ಅದಲ್ಲ. ಮತಧರ್ಮವೇ ಆಗಲಿ, ತತ್ತ್ವಶಾಸ್ತ್ರವೇ ಆಗಲಿ, ಅದರ ಬೇರಿರುವುದು ಇಲ್ಲಿ; ಇಹಲೋಕದಲ್ಲಿ. ಆದ್ದರಿಂದ ಮೋಡದ ಮೇಲೆ ಕುಳಿತು ಸ್ವರ್ಗಾರೋಹಣ ಸಾಧ್ಯವಾಗದು; ಭೂಮಿಯಲ್ಲಿ ಉಳಿದೇ ಅದನ್ನು ಗಳಿಸಿಕೊಳ್ಳಬೇಕು. ಅಂದರೆ, ವಾಸ್ತವ ಜಗತ್ತಿನ ಪರಿವೆ, ಮಧ್ಯಪ್ರವೇಶ, ಸಂರಚನೆಯ ಬದಲಾವಣೆ, ಎಲ್ಲಾ ಅಗತ್ಯ. ಅದನ್ನೇನೂ ಸಾಧಿಸದೆ ವೈಯಕ್ತಿಕ ನೆಲೆಯಲ್ಲಿ ಮುಕ್ತಿ ಗಳಿಸಿಕೊಳ್ಳುವುದೆಂದರೆ ಸಹನೆಯ ಭವ್ಯ ಮೂರ್ತಿಗಳಾಗಿರುವುದು. ಅದಕ್ಕೆ ಯಾವ ಹೆಸರು ಕೊಟ್ಟರೂ ಸರಿಯೇ, ವಾಸ್ತವ ಸ್ಥಿತಿಯಲ್ಲಿ ಬದಲಾವಣೆ ಇಲ್ಲ, ಏರುಪೇರುಗಳು ಮುಂದುವರಿಯುತ್ತವೆ. ಶ್ರೇಷ್ಠ–ಕನಿಷ್ಠ ಎಂಬ ತಾರತಮ್ಯಕ್ಕೆ ತಾತ್ವಿಕ ಸಮರ್ಥನೆ ದೊರೆಯುತ್ತದೆ. ಆದ್ದರಿಂದ, ಭಗವದ್ಗೀತೆಯ ಅಧ್ಯಯನವು ಎರಡು ತೆರನಾದದ್ದು : ಒಂದು, ಸಾಮಾಜಿಕ ಬದಲಾವಣೆಯನ್ನು ಬದಿಗೊತ್ತಿದಾಗಿನ ವಿಧಾನ; ಇನ್ನೊಂದು ಅಂತಹ ಬದಲಾವಣೆಯನ್ನು ಪ್ರಜ್ಞೆಯಲ್ಲಿರಿಸಿಕೊಂಡಾಗಿನ ವಿಧಾನ. ಇವು ಗೀತೆಗೆ ಮಾತ್ರ ಅನ್ವಯವಾಗುವ ವಿಧಾನಗಳಲ್ಲ; ಯಾವುದೇ ತತ್ತ್ವಶಾಸ್ತ್ರ ಜಿಜ್ಞಾಸೆಗೂ ಅವು ಅನ್ವಯವಾಗುತ್ತವೆ. ಸಾಕ್ರಟೀಸ್, ಕಾಂಟ್, ಬುದ್ಧ, ಮಧ್ವ, ಮಾರ್ಕ್ಸ್, ರಸೆಲ್ ಯಾರಾದರೂ ಸರಿಯೇ, ಈ ವಿಧಾನಕ್ಕೆ ಯಾರೂ ಹೊರತಲ್ಲ.

ಸೋಜಿಗದ ಸಂಗತಿಯೆಂದರೆ, ನಿಷ್ಕಾಮಕರ್ಮ ಅಥವಾ ಕರ್ಮಫಲ ತ್ಯಾಗವನ್ನು ಶ್ರೇಷ್ಠ ಮೌಲ್ಯವೆಂದು ವ್ಯಾಖ್ಯಾನಿಸುತ್ತದೆಂದು ಹೇಳಲಾದ ಶ್ರೀಮದ್ಭಗವದ್ಗೀತೆಯು ಗೀತಾಪಠಣದಿಂದ ದೊರೆಯುತ್ತದೆನ್ನಲಾದ ಫಲವನ್ನು ವಿಜೃಂಭಿಸಿ ಹೇಳಿದೆ.

(ಮುಂದುವರಿಯುವುದು)

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಕ್ಷ - ಕಿರಣ

- ಸಾನ್ವಿ ಪಿ.


ಜನಾರ್ಧನ ಪೂಜಾರಿ ಉರುಳು ಸೇವೆ
ಇದು ಸರ್ಕಾರ ಉರುಳಿಸುವ ಸೇವೆ


ಈಗ ಸರ್ಕಾರ ಏನ್ ಮಾಡ್ಬೇಕು ಅಂದ್ರೆ.....
FIR TV


ನೀರು ಬಿಡೂ...

ಜ. ಹೊ. ನಾರಾಯಣಸ್ವಾಮಿ



# ಮಹಾತ್ಮ ಗಾಂಧೀಜಿ

## ಮರೆಯಲಾಗದ ಮರೆಯಬಾರದ ಮನುಕುಲದ ಮಂಗಳಮೂರ್ತಿ

**ಮೋ**ಹನದಾಸ ಕರಮಚಂದ್ ಗಾಂಧಿ ಅಕ್ಟೋಬರ್ ೨, ೧೮೬೯ರಂದು ಗುಜರಾತು ಪ್ರಾಂತದ ಕಾಥೆವಾಡ ಸಂಸ್ಥಾನಗಳಲ್ಲಿ ಒಂದಾಗಿದ್ದ ಪೋರಬಂದರ್ ಸಂಸ್ಥಾನದ ದಿವಾನರ ಮಗನಾಗಿ ಜನಿಸಿದರು. ಅವರು ಜನ್ಮ ತಾಳಿದ್ದು ಸಾಮಾನ್ಯ ರೀತಿಯಲ್ಲಿ ಸಾಮಾನ್ಯರಂತೆ. ಗಾಂಧೀಜಿ ಗುಜರಾತಿನಲ್ಲಿ ಶಿಕ್ಷಣ ಪಡೆದು ಇಂಗ್ಲೆಂಡಿನಲ್ಲಿ 'ಬಾರ್–ಅಟ್–ಲಾ' ಮುಗಿಸಿ ಕೈಗೊಂಡ ವೃತ್ತಿ ಎಂದರೆ ವಕೀಲರಾದುದು. ಆದರೆ ಅವರಲ್ಲಿ ಮಹಾತ್ಮ ಜಾಗೃತನಾದ ಘಟನೆ ವಿಶಿಷ್ಟವಾದುದು. ಅವರು ಶಾಲಾ ಕಾಲೇಜುಗಳಲ್ಲಿ ಪಡೆದುಕೊಂಡ ಶಿಕ್ಷಣಕ್ಕಿಂತ ಗುರುತರವಾದ ಶಿಕ್ಷಣವನ್ನು, ಅದು ಅವರ ಅಂತರಂಗಕ್ಕೆ ಬೋಧಿಸಿದೆ. ಆ ಘಟನೆ ನಡೆದುದು ದಕ್ಷಿಣ ಆಫ್ರಿಕಾದ ನೆಟಾಲಿನ ರಾಜಧಾನಿಯಾದ ಮೆರಿಟ್ಸ್‌ಬರ್ಗ್‌ನಲ್ಲಿ. ಮೊದಲನೇ ದರ್ಜೆಯ ಟಿಕೆಟ್ ಹೊಂದಿದ್ದರೂ ಅಲ್ಲಿ ಬಿಳಿಯರು ಗಾಂಧಿಯನ್ನು ಮೂರನೇ ದರ್ಜೆಯ ಬೋಗಿಗೆ ಹೋಗಲು ಹೇಳುತ್ತಾರೆ. ಕಾರಣ ಇವರು ಕರಿಯರು ಎಂದು. ಗಾಂಧಿ ನಿರಾಕರಿಸುತ್ತಾರೆ. ಆಗ ಬಿಳಿಯರು ಗಾಂಧಿಯನ್ನು ಸಾಮಾನುಗಳ ಸಮೇತ ಪ್ಲಾಟ್‌ಫಾರಂಗೆ ತಳ್ಳುತ್ತಾರೆ. ಆ ಘಟನೆ ಗಾಂಧೀಜಿ ಅವರಲ್ಲಿ ಸುಪ್ತವಾಗಿದ್ದ ಮಹಾತ್ಮನ ಜಾಗೃತಿಗೆ ಕಾರಣವಾಗುತ್ತದೆ. ಆ ಘಟನೆ ಕುರಿತು ಗಾಂಧೀಜಿ ತನ್ನ ಅಂತರಂಗದಲ್ಲಿ ಉಂಟಾದ ಕಂಪನವನ್ನು ಕುರಿತು ತನ್ನ 'ಆತ್ಮಕಥೆ'ಯಲ್ಲಿ ಹೀಗೆ ಬರೆದುಕೊಂಡಿದ್ದಾರೆ :

'ನನ್ನ ಕರ್ತವ್ಯವೇನೆಂದು ನಾನು ಯೋಚಿಸ ತೊಡಗಿದೆನು. ನನ್ನ ಹಕ್ಕುಗಳಿಗಾಗಿ ನಾನು ಹೋರಾಡಲೆ ? ಅಥವಾ ಭಾರತಕ್ಕೆ ಹಿಂದಿರುಗಿ ಹೋಗಲೆ ? ಅಥವಾ ನನಗಾದ ಅವಮಾನವನ್ನು ಮರೆತು, ಪ್ರಿಟೋರಿಯಾಕ್ಕೆ ಹೋಗಿ, ಮೊಕದ್ದಮೆ ಮುಗಿದ ನಂತರ ಭಾರತಕ್ಕೆ ಹಿಂದಿರುಗಲೆ ? ನನ್ನ ಹೊಣೆಗಾರಿಕೆಯನ್ನು ನಿರ್ವಹಿಸದೆ ಭಾರತಕ್ಕೆ ಹಿಂದಿರುಗುವುದು ಹೇಡಿತನ. ನನಗೆ ಸಂಭವಿಸಿದ ಕಷ್ಟಗಳೆಲ್ಲ ಬರಿ ಮೇಲಿನ ಹುಣ್ಣು; ಆಳವಾಗಿರುವ ವರ್ಣದ್ವೇಷವೆಂಬ ರೋಗದ ಬಾಹ್ಯ ಸಂಕೇತ. ನಾನು, ಸಾಧ್ಯವಾದರೆ ಈ ರೋಗವನ್ನು ಬುಡಸಹಿತ ಕಿತ್ತು ಒಗೆಯಬೇಕು. ಆ ಪ್ರಯತ್ನದಲ್ಲಿ ಒದಗುವ ಕಷ್ಟಗಳನ್ನೆಲ್ಲಾ ಸಹಿಸಬೇಕು. ಈ ವರ್ಣದ್ವೇಷವನ್ನು ಹೋಗಲಾಡಿಸಲು ಎಷ್ಟರಮಟ್ಟಿಗೆ ಅವಶ್ಯಕವೋ ಅಷ್ಟರಮಟ್ಟಿಗೆ ಮಾತ್ರ ನಾನು ಅನ್ಯಾಯಗಳಿಗೆ ಪರಿಹಾರ ಗಳನ್ನು ಹೊಂದಲು ಯತ್ನಿಸಬೇಕು' (ಪುಟ ೧೧೯).

ಗಾಂಧೀಜಿಯವರ ದೃಢಸಂಕಲ್ಪ ಬೇರೂರಿತು, ಯಶಸ್ವಿಯೂ ಆಯಿತು. ಆ ಅನುಭವದ ಜೋಗನ್ನು ಹೃದಯದಲ್ಲಿ ಹೊತ್ತು ಭಾರತಕ್ಕೆ ಹಿಂದಿರುಗಿದರು. ಗಾಂಧಿ ಭಾರತಕ್ಕೆ ಬರುವ ವೇಳೆಗೆ ಸ್ವಾತಂತ್ರ್ಯ ಹೋರಾಟ ಹದಗೊಳ್ಳುತ್ತಿತ್ತು. ಗೋಪಾಲಕೃಷ್ಣ ಗೋಖಲೆ ಗಾಂಧಿಯವರಿಗೆ ಮಾರ್ಗದರ್ಶನ ಮಾಡಿ, 'ಕಣ್ಣು ಕಿವಿ ತೆರೆದು ಬಾಯಿ ಮುಚ್ಚಿಕೊಂಡು ಒಂದು ವರ್ಷಕಾಲ ಭಾರತವನ್ನು ಸುತ್ತು. ಆಡುವ ಅದರ ನಾಡಿಯನ್ನು ಗಮನಿಸು' ಎಂದರು. ವಿವೇಕಾನಂದರ ಪರಿವ್ರಾಜಕ ಯಾತ್ರೆಯಂತೆ ಗಾಂಧಿ ಭಾರತವನ್ನು ಸುತ್ತಿ ತಾಂಡವವಾಡುತ್ತಿದ್ದ ಬಡತನ, ಪೀಡಿಸುತ್ತಿದ್ದ ರೋಗ–ರುಜಿನಗಳು, ಮೈಮನಗಳನ್ನು ಮುತ್ತಿಕೊಂಡಿದ್ದ ಮೌಢ್ಯ, ಅನಕ್ಷರತೆಯ ಅಂಧಕಾರ, ಜೀವನ್ಮೃತ ರಂತಿದ್ದ ಬಹುಸಂಖ್ಯಾತ ಗ್ರಾಮೀಣ ಜನರನ್ನು ನೋಡಿ ಭಾರತದ ಹೀನ ದೀನ ಸ್ಥಿತಿಯನ್ನು ಕಣ್ಣಾರೆ ಕಂಡು ಕಂಬನಿಗರೆದರು. ಹೃದಯದಲ್ಲಿ ವಜ್ರಕಠೋರ ನಿಶ್ಚೆಯನ್ನು ತಾಳಿ ಭಾರತದ ಸ್ವಾತಂತ್ರ್ಯಕ್ಕಾಗಿ ಅಂತರಂಗದಲ್ಲಿ ದೃಢಸಂಕಲ್ಪ ಮಾಡಿದರು. ಸ್ವಾತಂತ್ರ್ಯ ಹೋರಾಟದ ನೇತೃತ್ವ ವಹಿಸಿ ಯಾವುದಕ್ಕೂ ಜಗ್ಗದೆ ಕುಗ್ಗದೆ ಹಿಗ್ಗಿ ಮುನ್ನುಗ್ಗಿ ನಡೆದು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಡುವಲ್ಲಿ ಯಶಸ್ವಿಯೂ ಆದರು.

ಮಹಾತ್ಮ ಗಾಂಧೀಜಿಯವರು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟದ್ದು ಒಂದಾದರೆ, ಅವರು ಮಾನವನ ಭೂಮಿಯ ಮೇಲಿನ ಸಾರ್ಥಕ ಬದುಕಿಗೆ ಹಾಕಿಕೊಟ್ಟ ಮಾರ್ಗ ಅತ್ಯಂತ ಮಹತ್ವದ್ದು. ಸುಂದರ ಹಾಗೂ ಸಂತೋಷದಾಯಕ ಬದುಕಿನ ಸೂತ್ರ ಸರಳತೆ ಎಂಬ ಪ್ರಾಕೃತಿಕ ಸತ್ಯವನ್ನು ತಮ್ಮ ಜೀವಿತದಲ್ಲಿ ಸಾಕ್ಷಾತ್ಕರಿಸಿಕೊಂಡು ವಿಶ್ವದ ಆದರ್ಶ ಆದವರು ಮಹಾತ್ಮ ಗಾಂಧೀಜಿ. ಅವರು ತೋರಿದ ಬದುಕಿನ ದಾರಿಯಿಂದ ಹೊರಳಿದ ಮನುಕುಲ ಅಭಿವೃದ್ಧಿ ಎಂಬ ಮರೀಚಿಕೆಯಿಂದ ನರಳಿವೆ, ನರಳುತ್ತಿದೆ. ಅಲ್ಲದೇ ದಿನಗಳೆದಂತೆ ನರಳುತ್ತಲೇ ನಂದಿಹೋಗುವುದು ಅನಿವಾರ್ಯವೆನ್ನುವ ಪರಿಸ್ಥಿತಿಯನ್ನು ತಂದುಕೊಳ್ಳುತ್ತಿದೆ.

ಭೂಮಿಯ ಮೇಲಿನ ಮನುಷ್ಯನ ಸಂಕಷ್ಟಗಳಿಗೆ ಗಾಂಧೀಜಿ ಕೊಟ್ಟ ಸಂಜೀವಿನಿ ಮಂತ್ರ ಎಂದರೆ 'ಚರಕ'. ಅದು ಸುಂದರ ಹಾಗೂ ಸಂತಸ ಬದುಕಿನ ಸಂಕೇತ. ನಿತ್ಯನಿರಂತರ ಕ್ರಿಯಾಶೀಲತೆಯ ದ್ಯೋತಕ. ನಿಸರ್ಗ ಮನುಷ್ಯನಿಗೆ ಕರುಣಿಸಿರುವ ದೇಹಬಲ ಸದ್ವಿನಿಯೋಗವಾಗಿ ಸಾರ್ಥಕ ಬದುಕಿಗೆ ಪೂರಕವಾಗ ಬೇಕಾದುದರ ಪ್ರತೀಕ. ಯಾಂತ್ರೀಕೃತ ಅಭಿವೃದ್ಧಿ ಅನಿವಾರ್ಯ ಎನ್ನುವಂತೆ ಮೇಲ್ನೋಟಕ್ಕೆ ಕಂಡರೂ ಅದು ಅವನನ್ನು ಅವನ ಅರಿವಿಗೆ ಬಾರದಂತೆಯೇ ಅವನತಿಯತ್ತ ಕೊಂಡೊಯ್ಯುತ್ತದೆ ಎನ್ನುವ ಸತ್ಯವನ್ನು ಸಾರುವುದರ ಪ್ರತೀಕವಾಗಿದೆ ಗಾಂಧೀಜಿಯವರ ಚರಕ. ಚರಕ ಕೇವಲ ಚರಕವಲ್ಲ. ಅದು ಚಲಿಸುವುದರ, ಚಲಿಸುತ್ತಲೇ ವಿಕಾಸಪಥದತ್ತ ಸಾಗಬೇಕು ಎನ್ನುವ ಪ್ರಾಕೃತಿಕ ಸತ್ಯದ ಸಂಕೇತ. ಅದರ ಅಂತರಂಗದ ಆಶಯ ಸಂಯಮಶೀಲತೆಯಿಂದ ಕೂಡಿದ ಸಮಷ್ಟಿಯ ಅಭಿವೃದ್ಧಿ.

ನಿಮ್ಮ 'ಸಂದೇಶ'ವೇನೆಂದು ಕೇಳಿದ ಪ್ರಶ್ನೆಗೆ ಗಾಂಧೀಜಿ ಕೊಟ್ಟ ಉತ್ತರ ಮಹತ್ವದ್ದು. 'ನನ್ನ ಜೀವನವೇ ನನ್ನ ಸಂದೇಶ' ಎಂಬ ಗಾಂಧೀಜಿಯವರ ಮಾತು ಬದ್ಧತೆಯಿಂದ ಸತ್ಯನಿಷ್ಠವಾಗಿ ತೊಡಗಿಸಿಕೊಂಡ ಅವರ ಬದುಕಿನ ಆದರ್ಶದ ಮಾತಾಗಿದೆ. ನಡೆನುಡಿಯಲ್ಲಿ ಹಿಮಾಲಯ ಸದೃಶ ಬದ್ಧತೆ ಇದ್ದವರು ಗಾಂಧೀಜಿ. ಆದರೆ ಅವರ ಸುತ್ತ ಇದ್ದವರಲ್ಲಿ ಅದು ಆ ಪ್ರಮಾಣದಲ್ಲಿ ಕಂಡುಬರುವುದಿಲ್ಲ, ಡಾ॥ ಬಿ. ಆರ್. ಅಂಬೇಡ್ಕರ್ ಅವರನ್ನುಳಿದು. ಗಾಂಧೀಜಿಯವರ ಸುತ್ತ ಇದ್ದವರಲ್ಲಿ ಹೆಚ್ಚಿನವರು ಮೇಲ್ನೋಟಕ್ಕೆ 'ಚರಕ'ವನ್ನು

ಬೆಂಬಲಿಸುತ್ತಿದ್ದವರು. ಆದರೆ ಅವರ ಅಂತರಂಗದಲ್ಲಿ ಇದ್ದದ್ದು ಬೃಹತ್ ಗಿರಣಿಗಳು. ಗಾಂಧೀಜಿಯವರ 'ಚರಕ'ದ ಮಹತ್ವವನ್ನು ಈ ಧನದಾಹಿಗಳು ತಮ್ಮ ಸ್ವಾರ್ಥ ಸಾಧನೆಗಾಗಿ ಬೇಕೆಂದೇ ಮೂಲೆಗುಂಪು ಮಾಡಿದರು. ಅಧಿಕಾರದ ಸೂತ್ರ ಹಿಡಿದವರೆಲ್ಲ ಆ ಪಕ್ಷ ಈ ಪಕ್ಷ ಎನ್ನುವ ಭೇದಭಾವವಿಲ್ಲದೆ 'ಚರಕ'ವನ್ನು ಅದರ ಕ್ರಿಯಾಶೀಲತೆಯ ಸೊಂಟ ಮುರಿದು ಪ್ರದರ್ಶನ ವಸ್ತುವನ್ನಾಗಿಸಿ ದೇಶದ ಸುಂದರ ಬದುಕಿಗೆ ಬೆಂಕಿ ಹಚ್ಚಿದರು. ಇದನ್ನು ಸ್ವಾತಂತ್ರ್ಯ ಪೂರ್ವದಲ್ಲಿಯೆ ತಮ್ಮ ಅಂತರ್‌ದೃಷ್ಟಿಯಿಂದ ಕಂಡುಕೊಂಡಿದ್ದ ಗಾಂಧೀಜಿ ತಮ್ಮ ಆತ್ಮಕಥೆಯ ಒಂದು ದುರಂತಕಾರಿ ವಿದ್ಯಮಾನ ಎಂಬ ಟಿಪ್ಪಣಿಯಲ್ಲಿ (೧೯೪೬) ಹೀಗೆ ಬರೆಯುತ್ತಾರೆ :



'ಸಂವಿಧಾನ ಸಭೆಯಲ್ಲಿ ಇರಬಯಸುವ ವ್ಯಕ್ತಿಗಳ ಎಷ್ಟೊಂದು ಪತ್ರಗಳು ನನ್ನ ಟಪಾಲಿನಲ್ಲಿರುತ್ತವೆಂದರೆ ನನಗೆ ಹೆದರಿಕೆಯಾಗುತ್ತದೆ. ಬುದ್ಧಿಜೀವಿ ವರ್ಗ ಭಾರತದ ಸ್ವಾತಂತ್ರ್ಯಕ್ಕಿಂತ ವೈಯಕ್ತಿಕ ಸುಖಲೋಲುಪತೆಯ ಬಗ್ಗೆ ಹೆಚ್ಚು ಆತುರದಲ್ಲಿದೆ ಎಂಬ ಸಾರ್ವತ್ರಿಕ ಭಾವನೆಯ ಸೂಚಕವೇ ಇದು ಎಂದು ಸಂಶಯ ಬರುತ್ತಿದೆ' ಎಂದು ನೊಂದು ನುಡಿದಿದ್ದಾರೆ. ಅವರ ಈ ನುಡಿಗಳು ಸ್ವಾತಂತ್ರ್ಯಾನಂತರದ ಭಾರತದಲ್ಲಿ ನಾಯಕರು ನಡೆದುಕೊಂಡ, ನಡೆದುಕೊಳ್ಳುತ್ತಿರುವ ರೀತಿಯಲ್ಲಿ ಸ್ಫಟಿಕ ಸ್ಪಷ್ಟವಾಗಿ ಗೋಚರಿಸುತ್ತಿದೆ.

ಸ್ವಾಮಿ ವಿವೇಕಾನಂದರ ಸಮಗ್ರ ಕೃತಿಗಳನ್ನು ಓದಿ ಪ್ರಭಾವಿತರಾದ ಗಾಂಧೀಜಿ ಹೇಳುತ್ತಾರೆ : "ನಾನು ವಿವೇಕಾನಂದರ ಕೃತಿಗಳನ್ನು ಸಮಗ್ರವಾಗಿ ಓದಿದ್ದೇನೆ. ಓದಿದ ನಂತರ ನನಗೆ ನನ್ನ ದೇಶದ ಮೇಲಿದ್ದ ಪ್ರೀತಿ ಸಾವಿರಪಟ್ಟು ಹೆಚ್ಚಾಯಿತು" ಎಂದು. ಗಾಂಧೀಜಿ ತಮ್ಮ ಬದುಕನ್ನು ಮುಡಿಪಿಟ್ಟು ಅರೆಬೆತ್ತಲಾಗಿ ಬ್ರಿಟಿಷ್ ಸಾಮ್ರಾಜ್ಯವೂ ತಲೆಬಾಗುವಂತೆ ಹೋರಾಡಿದುದು ಅಧಿಕಾರಕ್ಕಲ್ಲ; ಜೀವಿಗಳ ನಡುವೆ ಮಧುರ ಬಾಂಧವ್ಯದ ಸಂತಸದ ಸುಳಿಗಾಳಿ ಸುಳಿಯುವಂತೆ ಮಾಡಲು. 'ನಮ್ಮ ಮಾತೃಭೂಮಿಯಲ್ಲಿ ಹಿಂದೂ ಮತ್ತು ಮುಸಲ್ಮಾನ ಧರ್ಮಗಳೆರಡೂ ಮಿಲನವಾಗಬೇಕು. ವೇದಾಂತದ ಮಿದುಳು, ಇಸ್ಲಾಮಿನ ದೇಹ ಇದೊಂದೇ ನಮ್ಮ ಪುರೋಗಮನಕ್ಕೆ ಹಾದಿ' ಎಂದ ವಿವೇಕಾನಂದರ ಮಾತಿನಲ್ಲಿ ಭಾರತದ ಆತ್ಮಶಕ್ತಿ ಹುದುಗಿದೆ ಎಂಬ ಸತ್ಯವನ್ನು ಕಂಡುಕೊಂಡಿದ್ದರು. ಹಿಂದೂ–ಮುಸ್ಲಿಮರ ಸಾಮರಸ್ಯಕ್ಕಾಗಿ ಅನವರತ ಹಂಬಲದುಂಬಿ ಹೋರಾಡಿದರು. ಆದರೂ ಸ್ವಾತಂತ್ರ್ಯ ಪ್ರಾಪ್ತಿಯ ಸಂದರ್ಭದಲ್ಲಿ ತಾಯಿ ಭಾರತಿಯ ದೇಹವನ್ನು ಇಬ್ಭಾಗ ಮಾಡಿದ್ದು ಗಾಂಧೀಜಿಯವರ ಹೃದಯವನ್ನು ಹಿಂಡಿತು. ಯಾವ ದೇಶ ಇಡೀ ವಿಶ್ವಕ್ಕೆ 'ಅಧ್ಯಾತ್ಮ' ಶಕ್ತಿಯನ್ನು ಕರುಣಿಸುವ ಅಂತಃಸತ್ವವನ್ನು ಒಳಗೊಂಡಿದೆಯೋ ಅದರ ಹೃದಯವೇ ಇಬ್ಭಾಗವಾದುದನ್ನು ಕಂಡು ಕನಲಿದರು. 'ಭಾರತ ಅಳಿದರೆ ವಿಶ್ವದಲ್ಲಿ 'ಅಧ್ಯಾತ್ಮ' ಅಳಿದಂತೆ' ಎನ್ನುವ ವಿವೇಕಾನಂದರ ಮಾತಿನಲ್ಲಿ ಭಾರತದ ಶಕ್ತಿಯ ಔನ್ನತ್ಯದ ಅರಿವಾಗುತ್ತದೆ. ಮತೀಯ ಶಕ್ತಿಗಳು ಇದನ್ನು ಅರಿಯುವ ಸಾಮರ್ಥ್ಯವಿಲ್ಲದೆ ಧರ್ಮದ ಅಮಲಿನಲ್ಲಿ ಕುರುಡಾಗಿವೆ. ಅರಿವಿರದ ತಮ್ಮ ಅಂಧಕಾರದಿಂದಾಗಿ ಭವ್ಯ ಭಾರತವನ್ನು ಮತ್ತಷ್ಟು ಅಂಧಕಾರಕ್ಕೆ ತಳ್ಳುತ್ತಿವೆ. ಭಾರತ ಇಬ್ಭಾಗವಾದ ಘಟನೆಯನ್ನೂ ಕುರಿತು ಡಾ॥ ರಾಮಮನೋಹರ ಲೋಹಿಯಾ, "ಒಳಗೇ ಹುದುಗಿದ್ದ ಅಸಮಾಧಾನ ಈಗ ಎರಡು ರಾಷ್ಟ್ರಗಳ ರೂಪದಲ್ಲಿ ಹೊರಚಿಮ್ಮಿ ಬಂದಿದೆ" ಎಂದು ಅಂತರಂಗದಲ್ಲಿ ಕುದಿಯುತ್ತಿರುವ ಜನಾಂಗೀಯ ದ್ವೇಷದ ವಾಸ್ತವತೆಯನ್ನು ರೂಪಕವಾಗಿ ಹೇಳಿದ್ದಾರೆ.

ಸ್ವತಂತ್ರಗೊಂಡ ಭಾರತದ ಜನಮನದ ಸಂಕುಚಿತ ಭಾವನೆಯನ್ನು ಗ್ರಹಿಸಿದ ಡಾ॥ ಲೋಹಿಯಾ "ಸ್ವಾತಂತ್ರ್ಯದ ಬೆಳಕು ರಾಷ್ಟ್ರವನ್ನೇನೋ ಬೆಳಗಿತು. ಆದರೆ ಕತ್ತಲೆ ಹೃದಯವನ್ನಾವರಿಸಿತು" ಎಂದು ಸ್ವತಂತ್ರ ಭಾರತದ ಅಂಧಕಾರ ನಡೆಯನ್ನು ಗುರುತಿಸಿದ್ದಾರೆ. ಕೇವಲ ಕತ್ತಲೆಯಲ್ಲಿ ದಶಕಗಳು ಕಳೆದಂತೆ ಭಾರತದ ವಿದ್ಯಮಾನಗಳನ್ನು ಗಮನಿಸಿದರೆ ಕಗ್ಗತ್ತಲು ಕವಿಯುವ ಎಲ್ಲ ಸೂಚನೆಗಳೂ ಕಣ್ಮುಂದೆ ರಾಚುತ್ತಿವೆ. ಹಣ ಪ್ರಧಾನವಾಗಿ ಗುಣ ಗೌಣವಾಗುತ್ತಿರುವುದನ್ನು ನೋಡಿದರೆ ಮಾನವೀಯತೆ ಉಸಿರುಗಟ್ಟುತ್ತಿದೆ.

ಬ್ರಿಟನ್ನಿನ ಪ್ರಧಾನಿಯಾಗಿದ್ದ ವಿನ್‌ಸ್ಟನ್ ಚರ್ಚಿಲ್ ಗಾಂಧೀಜಿಯವರನ್ನು ಕುರಿತು 'ಭಾರತದ ಅರೆಬೆತ್ತಲ ಫಕೀರ' ಎಂದು ಕರೆಯುತ್ತಿದ್ದ. ಆತನಿಗೆ ಗಾಂಧಿಯ ಅಧ್ಯಾತ್ಮ ಶಕ್ತಿಯ ಅಂತರಂಗದ ಅರಿವು ಆಗಿರಲಿಲ್ಲ. ಸರ್ವರಿಗೂ ಸಮರ್ಪಕ ಉಡುವ ವಸ್ತ್ರ ದೊರಕುವವರೆಗೆ ನಾನು ಅರೆಬೆತ್ತಲಾಗಿಯೆ ಇರುತ್ತೇನೆ ಎನ್ನುವ ನೈತಿಕ ದೃಢತೆ ಗಾಂಧಿಯವರದಾಗಿತ್ತು. ಭಾರತವನ್ನಷ್ಟೇ ಅಲ್ಲ ಇಡೀ ವಿಶ್ವವನ್ನು ತಮ್ಮ ಆದರ್ಶದ ಅಕ್ಷೆಯಲ್ಲಿ ಅಳವಡಿಸಿಕೊಂಡಿದ್ದರು. ಗಾಂಧೀಜಿಯವರು ಅಳವಡಿಸಿಕೊಂಡು ಅನುಸರಿಸುತ್ತಿದ್ದ ವ್ರತನಿಷ್ಠ ನಿಯಮಗಳು ಅವರ ದಾರಿದೀಪಗಳಾಗಿದ್ದುವು. ವಿವೇಕಾನಂದರು, "ಪವಿತ್ರತೆ, ಜೀವನದಲ್ಲಿ ಅದರಂತೆ ನಡೆಯುವುದು. ಒಂದೇ ಮಾತಿನಲ್ಲಿ ಹೇಳುವುದಾದರೆ ಅನುಭೂತಿ, ಸಾಕ್ಷಾತ್ಕಾರವೊಂದೇ ಜಯಶೀಲವಾಗುವುದು. ಯಾರು ಈ ಅನಂತವನ್ನು ಸ್ಪರ್ಶಿಸಿರುವರೋ, ಯಾರ ಇಡೀ ಆತ್ಮ ಬ್ರಹ್ಮನಲ್ಲಿ ಐಕ್ಯವಾಗಿರುವುದೋ, ಯಾರು ಹಣಕ್ಕಾಗಲೀ, ಅಧಿಕಾರಕ್ಕಾಗಲೀ, ಕೀರ್ತಿಗಾಗಲೀ ಗಮನ ಕೊಡುವುದಿಲ್ಲವೋ ಅಂಥವರು ಇಡೀ ಜಗತ್ತನ್ನೇ ಅಲ್ಲಾಡಿಸಬಲ್ಲರು" ಎಂದಿದ್ದಾರೆ. ಮಹಾತ್ಮ ಗಾಂಧೀಜಿ ಆ ಶಕ್ತಿಯನ್ನು ಪ್ರಾಪ್ತಿ ಮಾಡಿಕೊಂಡಿದ್ದರು, ತಮ್ಮ ಅಚಲವಾದ ನಿಷ್ಠೆಯಿಂದ. ಯಾವ ವಿಧದಿಂದಲೂ ಗಾಂಧಿಯನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳಲು ಸಾಧ್ಯವಾಗದ ಬ್ರಿಟಿಷ್ ಸರ್ಕಾರ ಒಂದು ಸಲಹಾ ಸಮಿತಿಯನ್ನು ರಚಿಸಿ ಕೇಳಿಕೊಂಡಿತು. ಆ ಸಮಿತಿಯ ಅಧ್ಯಕ್ಷರಾಗಿದ್ದ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಪ್ರೊ॥ ಗಿಲ್ಬರ್ಟ್ ಮುರ್ರೆ ತಮ್ಮ ವರದಿಯಲ್ಲಿ ಹೀಗೆ ಹೇಳಿದ್ದಾರೆ :

'ಯಾವ ವ್ಯಕ್ತಿ ಪ್ರಾಪಂಚಿಕ ಸುಖಗಳಿಗೆ, ವೈಭೋಗಕ್ಕೆ, ಹೊಗಳಿಕೆಗೆ ಅಥವಾ ಸ್ಥಾನಮಾನಗಳಿಗೆ ಬೆಲೆ ಕೊಡುವುದಿಲ್ಲವೋ ಹಾಗೂ ತನಗೆ ಸರಿ ಎಂದು ಕಂಡದ್ದನ್ನು ಮಾಡಲು ದೃಢನಿಶ್ಚಯ ಹೊಂದಿರುವನೋ ಆತನ ಬಗ್ಗೆ ಎಚ್ಚರದಿಂದಿರಿ. ಆತ ಅತ್ಯಂತ ಅಪಾಯಕಾರಿ ಹಾಗೂ ಅಹಿತಕರ ಶತ್ರು. ಏಕೆಂದರೆ ನೀವು ಯಾವಾಗ ಬೇಕಾದರೂ ವಶಪಡಿಸಿಕೊಳ್ಳಬಹುದಾದ ಆತನ ಶರೀರ ಆತನ ಆತ್ಮಶಕ್ತಿಯ ಎದುರು ನಗಣ್ಯವಾಗಿಬಿಡುತ್ತದೆ.'

ಗಾಂಧೀಜಿಯವರಿಗೆ ಆ ಆತ್ಮಶಕ್ತಿ ಎಲ್ಲಿಂದ ಬಂತು ? ಸ್ವಾಮಿ ವಿವೇಕಾನಂದರ ಸಮಗ್ರ ಸಾಹಿತ್ಯವನ್ನು ಹಸಿದ ಹಂಬಲದಿಂದ ಅಧ್ಯಯನ ಮಾಡಿ ಅರಿತುಕೊಂಡಿದ್ದ ಗಾಂಧೀಜಿ ವಿವೇಕಾನಂದರ ಮೂರು ಸೂತ್ರಗಳನ್ನು ಮೂರು ಕಣ್ಣಾಗಿಸಿಕೊಂಡಿದ್ದರು. ಪ್ರತಿಯೊಂದು ವ್ಯಕ್ತಿಯನ್ನು ಮತ್ತು ಪ್ರತಿಯೊಂದು ಜನಾಂಗವನ್ನು ಏಳಿಗೆಗೆ ತರುವುದಕ್ಕೆ ಮೂರು ವಿಷಯಗಳು ಅತ್ಯವಶ್ಯಕ ಎನ್ನುತ್ತಾರೆ ವಿವೇಕಾನಂದರು. ಅವುಗಳೆಂದರೆ :

೧. ಸತ್ಯದ ಶಕ್ತಿಯಲ್ಲಿ ದೃಢವಾದ ನಂಬಿಕೆ.

೨. ಅಸೂಯೆ ಅನುಮಾನಗಳು ಇಲ್ಲದೆ ಇರುವುದು.

೩. ಯಾರು ಒಳ್ಳೆಯವರಾಗುವುದಕ್ಕೆ ಮತ್ತು ಒಳ್ಳೆಯದನ್ನು ಮಾಡುವುದಕ್ಕೆ ಪ್ರಯತ್ನಪಡುವರೋ ಅವರಿಗೆಲ್ಲಾ ಸಹಾಯ ಮಾಡುವುದು.

ವಿವೇಕಾನಂದರು ಹೇಳುವಂತೆ ಗಾಂಧೀಜಿಯವರಲ್ಲಿ ಸತ್ಯದ ಶಕ್ತಿಯಲ್ಲಿ ದೃಢವಾದ ನಂಬಿಕೆ ಇದ್ದುದರಿಂದಲೇ ಅವರು ಅವರ ಆತ್ಮಕಥೆಗೆ ಹೆಸರಿಟ್ಟಿರುವುದು 'ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ' ಎಂದು. ಅವರು ಸತ್ಯಾನ್ವೇಷಣೆಯ ಪಥದಲ್ಲಿ ತಮ್ಮ ಬದುಕನ್ನು ಬೆಳಕಾಗಿಸಿಕೊಂಡವರು. ವಿಶ್ವಮಾನವ ದೃಷ್ಟಿ ಪ್ರಾಪ್ತವಾಗಲು ಕಾರಣ ಗಾಂಧೀಜಿ ಅಸೂಯೆ ಅನುಮಾನಗಳನ್ನು ಹತ್ತಿರ ಬರಗೊಡದೆ ಇದ್ದುದು. ಕಡೆಯದಾಗಿ, ಗಾಂಧೀಜಿ ಇಡೀ ವಿಶ್ವವನ್ನೇ ಕುಟುಂಬವಾಗಿ ಕಂಡು ಪ್ರತಿಯೊಬ್ಬರ ಒಳಿತಿಗೆ, ಏಳಿಗೆಗಾಗಿ ತಮ್ಮ ಕೈಯಿಂದ ಪ್ರಗತಿಯ ಸಂಕೇತವಾದ ಚರಕವನ್ನು ಸುತ್ತಿಸುತ್ತಲೇ ತುಡಿದು ಮಿಡಿದ ಹಿರಿಯ ಜೀವ. ವಿಶ್ವಕ್ಕೆ ಬೇಕಾದುದು 'ಯುದ್ಧವಲ್ಲ, ಶುದ್ಧ ಹೃದಯ' ಎಂದು 'ಶಾಂತಿ'ಯ ಬೀಜವನ್ನು ಮನುಕುಲಕ್ಕೆ ಬಿತ್ತಿದ ಕೀರ್ತಿ ಮಹಾತ್ಮ ಗಾಂಧೀಜಿಯವರದು.

ಇನ್ನಾದರೂ ಮತೀಯ ಸಂಕುಚಿತ ಭಾವನೆಗಳಿಂದ ಹಾಗೂ ಅತಿಯಾದ ಯಾಂತ್ರಿಕತೆಯಿಂದ ದೂರ ಉಳಿದು ಜಾತಿ ಮತ ಕುಲ ಗೋತ್ರಗಳೆಲ್ಲವನ್ನೂ ಮೀರಿ ಸರ್ವಸಮಾನವಾದ, ಮಾನವೀಯವಾದ, ಸರ್ವೋತ್ಕೃಷ್ಟವಾದ ಮಾರ್ಗ ತೋರಿದ ಮಹಾತ್ಮ ಗಾಂಧೀಜಿಯವರ ಮೌಲ್ಯಯುತ ಬದುಕಿನತ್ತ ಭಾರತೀಯರ ಚಿತ್ತ ಎಚ್ಚೆತ್ತುಕೊಳ್ಳುವಂತಾಗಲಿ, ಭೂಮಿಯ ಮೇಲಿನ ಮಾನವನ ಬದುಕು ಸಹನೀಯವಾಗಲಿ.

**ಜ. ಹೊ. ನಾರಾಯಣಸ್ವಾಮಿ**
ವಕೀಲ, ಸಾಹಿತಿ, ನಂ. ೨೦೬೪/ಎ, 'ಮಾನವ', ಉತ್ತರ ಬಡಾವಣೆ, ಹಾಸನ – ೫೭೩ ೨೦೧

# ಯಾಕಳುವೆ ಎಲೆ ರಂಗ...

ಆರು ವರ್ಷದ ಹುಡುಗನಾಗಿದ್ದಾಗಲೇ "ನನಗೆ ಇಟ್ಟಿದ್ದ ಹೆಸರು ಒಂಚೂರೂ ಚೆನ್ನಾಗಿಲ್ಲ, ಯಾವುದಾದರು ದೇವರ ಹೆಸರು ಇಡಬಾರದಾಗಿತ್ತಾ" ಎಂದು ರಂಪ ಮಾಡಿದ್ದೆನಂತೆ. ಏಕೆಂದರೆ ನಮ್ಮ ಅಕ್ಕಪಕ್ಕದ ಮನೆಯ ಹುಡುಗರಿಗೆಲ್ಲ ರಂಗನಾಥ, ಶೇಷಾದ್ರಿ, ಕೃಷ್ಣ, ರಾಮಪ್ರಸಾದ, ಬಿಳಿಗಿರಿ (ಬಿಳಿಗಿರಿ ಎಂದು ಹೆಸರಿಡಲು ಬಿಳಿಗಿರಿರಂಗನ ಬೆಟ್ಟ ನಮ್ಮೂರ ಹತ್ತಿರವೇ ಇತ್ತಲ್ಲ. ಬಹುಶಃ ಇದೇ ಕಾರಣವಿರಬಹುದು) ಎಂದು ಹೆಸರಿಟ್ಟಿದ್ದು, ನನ್ನ ಹೆಸರಿನಲ್ಲಿ ಯಾವ ಆಕರ್ಷಣೆಯೂ ಇರದಿದ್ದುದೇ ನನ್ನ ಕೋಪಕ್ಕೆ ಮೂಲವಾಗಿತ್ತಂತೆ. ಆದರೆ ಇದಕ್ಕೆ ನಮ್ಮಮ್ಮನ ಸಮಜಾಯಿಷಿ ಬೇರೆಯೇ ಆಗಿತ್ತು.

"ನೀನು ಹುಟ್ಟಿದ ನಾಲ್ಕು ತಿಂಗಳಲ್ಲಿ ಅದೆಂಥಾದ್ದೊ ಜ್ವರ ಬಂದು, ಬಿಡದೆ ಅಲ್ಲಾಡಿಸಿಬಿಟ್ಟಿತು. ಪಾಪ ಕೆಲಸದ ರಂಗಿ ಮನೆಗೂ ಹೋಗದೆ ಬಾಣಂತಿಯಾದ ನನ್ನನ್ನು ನೋಡಿಕೊಳ್ಳುವುದರ ಜೊತೆಗೆ ನಿನ್ನನ್ನೂ ಹಗಲು ರಾತ್ರಿ ಎತ್ತಿಕೊಂಡು ತೊಡೆಯ ಮೇಲೆ ಹಾಕಿಕೊಂಡೇ ವರ್ಷ ತುಂಬುವವರೆವಿಗೂ ಸಾಕಿದಳು. ಅವಳ ಋಣವನ್ನು ನೀನು ಈ ಜನ್ಮದಲ್ಲಿ ತೀರಿಸಲಾರೆ" ಎಂದು ಅಮ್ಮ ಹೇಳುತ್ತಿದ್ದಾಗ ನನಗೆ ಏನೊಂದೂ ತಿಳಿಯದೆ ಕಣ್ಣು ಕಣ್ಣು ಬಿಟ್ಟು ಸುಮ್ಮನೆ ಕೇಳುತ್ತಿದ್ದೆ. "ನೀನು ಚೆನ್ನಾಗಿ ಪೂರ್ಣಾಯುಸ್ಸು ಬಾಳಿ ಗುಂಡುಕಲ್ಲಿನ ಹಾಗಿರು. ಮತ್ತೆ ಯಾವುದೇ ರೋಗ–ರುಜಿನ ಕಾಡದಿರಲಿ ಎಂದೇ ನಿನಗೆ ಈ ಹೆಸರಿಟ್ಟಿದ್ದು" ಎನ್ನುತ್ತಿದ್ದಳು. ಆದರೆ ನನಗೆ ಅಮ್ಮನ ಈ ವಿವರಣೆಯನ್ನೆಲ್ಲಾ ಅರ್ಥ ಮಾಡಿಕೊಳ್ಳುವ ವಯಸ್ಸಾಗಿರಲಿಲ್ಲ ಆಗ. ಆದರೆ ಕೆಂಪಗೆ,

**ವೈ. ಎನ್. ಗುಂಡೂರಾವ್**



ಕುಳ್ಳಗೆ, ದುಂಡು ದುಂಡಗೆ ಮೈಕೈ ತುಂಬಿಕೊಂಡಿದ್ದ ರಂಗಿಯ ಬೆಚ್ಚನೆಯ ತೊಡೆಯ ಮೇಲೆ ಮಲಗಿ ಬೆಳೆದಿದ್ದಂತು ನಿಜ.

ಸದಾ ರಂಗಿಯ ತೊಡೆಯ ಮೇಲೆ ಮಲಗಿರಬೇಕೆಂದು ಹಠ ಹಿಡಿಯುತ್ತಿದ್ದೆನಂತೆ. ಸ್ವಲ್ಪ ಹೊತ್ತು ತೊಟ್ಟಿಲಿಗೊ, ಜೋಳಿಗೆಗೊ ಹಾಕಿದರೆ ಐದು ನಿಮಿಷಕ್ಕೆ ಎದ್ದು ಪುನಃ ರಚ್ಚೆ ಹಿಡಿದರೆ ರಂಗಿ ಎತ್ತಿಕೊಂಡು ಸಮಾಧಾನಪಡಿಸುತ್ತಿದ್ದಳಂತೆ.

ಒಂದು ಸಾರಿ ಪಟೇಲರ ಹೆಂಡತಿ ನಂಜಮ್ಮ ಎತ್ತಿಕೊಂಡು ಹೋಗಿ ಅವರ ಉಯ್ಯಾಲೆಯ ಮೇಲೆ ಕುಳಿತು ತೊಡೆಯ ಮೇಲೆ ಮಲಗಿಸಿಕೊಂಡರಂತೆ. ಆ ಉಯ್ಯಾಲೆಯ ಎರಡು ಸರಪಳಿಗೂ ಬಿದಿರಿನಿಂದ ಮಾಡಿದ್ದ ಎರಡು ಬಣ್ಣದ ಗಿಳಿಗಳನ್ನು ಕಟ್ಟಿದ್ದು, ಉಯ್ಯಾಲೆ ಹಿಂದೆ–ಮುಂದೆ ಜೀಕಿದಾಗಲೆಲ್ಲಾ ಬೀಸುತ್ತಿದ್ದ ಗಾಳಿಗೆ ಗಿಣಿಗಳು ಬಾಯಿ ತೆರೆದರೆ ಒಂದು ರೀತಿ ಪಕ್ಷಿಯ ಕೂಗಿನಂತಹ ಶಬ್ದ ಬರುತ್ತಿದ್ದು, ಈ ಶಬ್ದದಿಂದ ಆಕರ್ಷಿತನಾದ ನಾನು ಅಲ್ಲೇ ಮಲಗಬೇಕೆಂದು ಹಠ ಹಿಡಿಯುತ್ತಿದ್ದೆನಂತೆ. ಕಡೆಗೆ ರಂಗಿ ಜೋಳಿಗೆಗೆ ಹಾಕಿ ಹಾಡತೊಡಗಿದರೆ ಸುಮ್ಮನಾಗುತ್ತಿದ್ದೆನಂತೆ. ಹೀಗೆ ಜೋಳಿಗೆಗೆ ಹಾಕಿ ತೂಗತೊಡಗಿದರೆ ಎಂತಹ ಸುಖ ನಿದ್ರೆ ಅದು ! ಅಂತಹ ನಿದ್ರೆಗೆ ಬಹುಶಃ ಜೋಳಿಗೆಯ ಪ್ರಭಾವಕ್ಕಿಂತ ರಂಗಿ ಹಾಡುತ್ತಿದ್ದ ಜೋಗುಳದ ಹಾಡೇ ಕಾರಣ ವಿರಬೇಕು ಎಂದು ಈಗ ಅನ್ನಿಸುತ್ತಿದೆ. ರಾಗವಾಗಿ ಹಾಡುತ್ತಿದ್ದ ಅವಳ ಒಂದೊಂದು ಹಾಡಿನಲ್ಲೂ ಎಂತಹ ಮಧುರತೆ ಇತ್ತೆಂದರೆ ಕಿವಿಗೆ ಇಂಪಾಗಿ ಬೆರಗುಗಣ್ಣಿನಿಂದ ಕೇಳುತ್ತಿದ್ದೆ.

*ಯಾಕಳುವೆ ಎಲೆ ರಂಗ ಬೇಕಾದ್ದು ನಿನಗೀವೆ*
*ನಾಕೆಮ್ಮೆ ಕರೆದ ನೊರೆ ಹಾಲು,*
*ನಾಕೆಮ್ಮೆ ಕರೆದ ನೊರೆ ಹಾಲು ಸಕ್ಕರೆ*
*ನೀ ಕೇಳಿದಾಗ ಕೊಡಲೇನು ?*

– ಹೀಗೆ ರಂಗಿ ಹಾಡುತ್ತಿದ್ದ ಹಾಡುಗಳಿಗೇನು ಬರವಿರಲಿಲ್ಲ. ಅವಳ ಭಂಡಾರದಲ್ಲಿ ಅದೆಷ್ಟೋ ಹಾಡುಗಳು ತುಂಬಿರುತ್ತಿದ್ದವು.

*ಆಡಿ ಬಾ ನನಕಂದ ಅಂಗಾಲ ತೊಳೆದೇನು*
*ತೆಂಗಿನ ಕಾಯಿ ತಿಳಿನೀರು,*
*ತೆಂಗಿನ ಕಾಯಿ ತಿಳಿನೀರು ತಕ್ಕೊಂಡು*
*ನಿನ್ನ ಬಂಗಾರದ ಪಾದ ತೊಳೆದೇನು !*

ನನ್ನನ್ನು ತೊಟ್ಟಿಲಲ್ಲೋ, ಜೋಳಿಗೆಯಲ್ಲೋ ಮಲಗಿಸಿ ಅದೆಷ್ಟೋ ಹಾಡುಗಳನ್ನು ಹಾಡಿರಬಹುದು. ಆದರೆ ಅವಳು ಹಾಡುತ್ತಿದ್ದುದರಲ್ಲಿ ಈ ಎರಡು ಹಾಡುಗಳು ಮಾತ್ರ ನನ್ನ ನೆನಪಿನ ಕೋಶದಲ್ಲಿ ಭದ್ರವಾಗಿ ಕುಳಿತಿದ್ದು, ಪುನಃ ನನ್ನ ನೆನಪಿಗೆ ಬಂದುದು ನಾನು ಪಿ.ಯು. ಓದುತ್ತಿದ್ದಾಗಲೇ. ಕನ್ನಡವನ್ನು ಬೋಧಿಸಲು ಬರುತ್ತಿದ್ದ ರಾಮಚಂದ್ರ ಶಾಸ್ತ್ರಿ ಎನ್ನುವವರು ತರಗತಿಯಲ್ಲಿ ಯಾವುದೋ ಒಂದು ಸಂದರ್ಭದಲ್ಲಿ ಹಾಡಿದಾಗಲೇ. ನಂತರ ಅದೆಷ್ಟೋ ವರುಷಗಳು ಈ ಹಾಡುಗಳನ್ನು ಕೇಳಲಾಗಲೇ ಇಲ್ಲ.

✴ ✴ ✴

ಹೀಗೆ ಹಳ್ಳಿಯ ವಾತಾವರಣದಲ್ಲಿ ಜನಪದ ಹಾಡುಗಳನ್ನು ಕೇಳಿ ಬೆಳೆದಿದ್ದ ನನಗೆ, ಮದುವೆಯಾಗಿ ಮಕ್ಕಳಾದ ಮೇಲೂ ಇಂತಹ ಹಾಡುಗಳು ಜ್ಞಾಪಕಕ್ಕೆ ಬಾರದೇ ಹೋದದ್ದು ಆಶ್ಚರ್ಯವೇ ! ಪಾಪ, ನಮ್ಮ ಮಕ್ಕಳು ರಂಗಿಯ

ಬಾಯಲ್ಲಿ ಹಾಡು ಕೇಳಿದ್ದರೆ ಏನನ್ನುತಿದ್ದವೋ ? ಆದರೆ ಕೆಲಸಕ್ಕಾಗಿ ಪಟ್ಟಣ ಸೇರಿದ ನಂತರ ರಂಗಿಯನ್ನು ನೋಡುತ್ತಿದ್ದುದು ಅಪರೂಪವಾಗತೊಡಗಿತು.

ಒಮ್ಮೆ ಅಮ್ಮನೊಡನೆ ಹಳ್ಳಿಯ ವಿಷಯದ ಬಗ್ಗೆ ಮಾತನಾಡುತ್ತಾ ಕುಳಿತಿದ್ದಾಗ ಪಾಪ, ರಂಗಿ ಹೇಗಿದ್ದಾಳೊ ಏನೋ ಎಂದಾಗ, "ಒಂದು ಸಾರಿ ಅಡ್ರೆಸ್ ಹಿಡಕೊಂಡು ಮನೆ ಹುಡುಕ್ಕೊಂಡು ಬಂದಿದ್ಲು ಕಣೊ. ಆದರೆ ನೀನು ಕೆಲ್ಸಕ್ಕೆ ಹೋಗಿದ್ದಿ. ಅದೇನೋ ಅರ್ಜೆಂಟ್ ಕೆಲ್ಸಾಂತ ಬೆಳಗ್ಗೆ ಬಂದೋಳು ಸಂಜೆ ಊರಿಗೆ ಹೊರಟೇ ಬಿಟ್ಲು" ಎಂದು ಅಮ್ಮ ಹೇಳಿದಾಗ ರಂಗಿಯನ್ನು ನೋಡಲಾಗಲಿಲ್ಲವಲ್ಲ ಎಂದು ಮನಸ್ಸಿಗೆ ತುಂಬ ಬೇಸರವಾಯಿತು.

ಈ ಸಾರಿ ಊರ ಕಡೆ ಹೋದಾಗ ಹೇಗಾದರೂ ಮಾಡಿ, ನನ್ನನ್ನು ಎತ್ತಿ ಆಡಿಸಿದ ರಂಗಿಯನ್ನು ನೋಡಿ ಅವಳ ಋಣ ತೀರಿಸಬೇಕೆಂದು ನಿರ್ಧರಿಸಿದೆ. ಹೀಗೊಮ್ಮೆ ಹೋಗಿ ನೋಡಿದಾಗ ರಂಗಿ ವಯಸ್ಸಾದಂತೆ ಕಂಡಳು. ಅನಾರೋಗ್ಯದಿಂದ ಓಡಾಡಲಾಗದೆ ಒಂದೆಡೆ ಕುಳಿತಿದ್ದರೂ ಗುರುತು ಹಿಡಿದು ಮಾತನಾಡಿಸಿದಳು. ನನ್ನ ಮನಸ್ಸಿಗೂ ಕೊಂಚ ನಿರಾಳವೆನಿಸಿತು. ಅವಳು ಹಾಡುತ್ತಿದ್ದ ಹಾಡುಗಳು ಥಕ್ಕನೆ ಸ್ಮೃತಿಪಟಲದ ಮೇಲೆ ಹಾದು ಬಂತು. 'ಬಂಗಾರದ ಪಾದ ತೊಳೆದೇನು' ಎಂದು ಹಾಡುತ್ತಿದ್ದುದು ಜ್ಞಾಪಕಕ್ಕೆ ಬಂದು, ತೊಳೆದೇನು ಏನು ? ಎಷ್ಟು ಸಾರಿ ಮಗುವಾಗಿದ್ದಾಗ ನನ್ನ ಪಾದ ತೊಳೆದಿದ್ದಳೋ ಮಹರಾಯಿತಿ ಎನಿಸಿತು. ಹಲವಾರು ವರ್ಷಗಳಲ್ಲಿ ಆಗಿ ಹೋಗಿದ್ದ ಎಷ್ಟೋ ವಿಷಯಗಳನ್ನು ಮಾತನಾಡಿದಳು. "ಡಾಕ್ಟರ್ ಹತ್ತಿರ ಕರೆದುಕೊಂಡು ಹೋಗುತ್ತೇನೆ ಬಾ" ಎಂದೆ. "ಬೇಡಿ ಬುಡಿ ಬುದ್ಧಿ, ನಿಮಗ್ಯಾಕೆ ತೊಂದರೆ" ಎಂದಳು ನಯವಾಗಿ. ಔಷಧಿ ಖರ್ಚಿಗಾದರೂ ಇಟ್ಟುಕೋ ಎಂದು ಒಂದಷ್ಟು ಹಣ ಕೊಡಲು ಹೋದೆ. ಸ್ವಾಭಿಮಾನಿ ರಂಗಿ ಹಣ ತೆಗೆದುಕೊಳ್ಳಲು ಸುತರಾಂ ಒಪ್ಪಲಿಲ್ಲ. ಯಳಂದೂರಿನಲ್ಲಿದ್ದ ನನ್ನ ಪರಿಚಯದ ಡಾಕ್ಟರೊಬ್ಬರ ಬಳಿ ಮಾತನಾಡಿ, "ಸರಕಾರದಿಂದ ಬಂದಿರೋ ಔಷಧಿ, ತಗಳಲ್ಲ ಅಂತ ಹೇಳಂಗಿಲ್ಲ" ಎಂದು ಬಲವಂತದಿಂದ ಔಷಧಿ, ಮಾತ್ರೆ ಕೊಟ್ಟಾಗ ತೆಗೆದುಕೊಂಡಳಂತೆ. ಆರೋಗ್ಯ ಸುಧಾರಿಸಿದೆ ಎಂದು ಡಾಕ್ಟರು ಫೋನಿನಲ್ಲಿ ತಿಳಿಸಿದಾಗ ಮಗುವಾಗಿದ್ದಾಗ ನನ್ನ ಪಾದ ತೊಳೆದಿದ್ದ ಅವಳ ಋಣ ತೀರಿಸಿದೆ ಎಂಬ ಭಾವನೆಯೇ ಮನಸಿಗೆ ಸಂತಸ ಕೊಟ್ಟಿತು.

✶ ✶ ✶

ಇಷ್ಟೆಲ್ಲ ಏಕೆ ಹೇಳ ಹೊರಟಿದ್ದೇನೆ ಎನ್ನುವುದಕ್ಕೂ ಒಂದು ಕಾರಣವಿದೆ. ಪಕ್ಕದ ಮನೆಗೊಂದು ಮುದ್ದಾದ ಪಾಪು ಬಂದಿದೆ. ಸಿಟೌಟ್‌ನಲ್ಲಿ ಹಾಕಿರುವ ತೊಟ್ಟಿಲಿನಲ್ಲಿ ಆ ಪಾಪುವನ್ನು ಮಲಗಿಸಿ ತೂಗುವುದು ಕಾಣಿಸುತ್ತದೆ. ಮಗು ಅತ್ತಾಗ ಅವರು ಹಾಕುವ ಇಂಗ್ಲಿಷ್ ಹಾಡುಗಳು ನಮ್ಮ ಕಿವಿಗೂ ಕೇಳಿಸುತ್ತದೆ. ಎಷ್ಟೇ ಸಮಾಧಾನ ಮಾಡಿದರೂ ಸುಮ್ಮನಾಗದೆ ರಚ್ಚೆ ಹಿಡಿದಾಗ ಓಕೆ, ಓಕೆ, ಓಕೆ... ಎಂದು ಸಮಾಧಾನಪಡಿಸಲು ಪ್ರಯತ್ನಿಸುತ್ತಾರೆ. ಇನ್ನೂ ಜಾಸ್ತಿ ಅಳುತ್ತಲೇ ಇದ್ದಾಗ ಓಕೆ... ಓಕೆ... ಅಂತ ಹೇಳಿದೆನಲ್ಲ, ಇನ್ಯಾಕೆ ಅಳ್ತೀಯಾ ಎಂದೆನ್ನುತ್ತಾರೆ.

"ಮಗುವಿಗೇನು ಗೊತ್ತು ಓ.ಕೆ. ಪದದ ಅರ್ಥ ?"

ಆಟವಾಡಲು ಪಾಪುವಿನ ಮುಂದೆ ಹಲವಾರು ಎಲೆಕ್ಟ್ರಾನಿಕ್ ಗ್ಯಾಜೆಟ್‌ಗಳನ್ನು ತಂದು ಸುರಿದಿದ್ದಾರೆ. ಅವು ನಾವು ಕೇಳಿರದ ವಿದೇಶೀಯ ಹಲವಾರು ಭಾಷೆಯ ಹಾಡುಗಳಿಂದ ತುಂಬಿಹೋಗಿವೆ. ಮಗುವಿಗೆ ಅರ್ಥವಾಗುತ್ತೋ ಬಿಡುತ್ತೋ ಅಂತೂ ಅದು ಮಿಕಮಿಕ ನೋಡತೊಡಗುತ್ತದೆ.

'ಈಗಿನ ಮಕ್ಕಳು ಕೂಡ ಅಷ್ಟೆ ಚುರುಕು !'

ಹಿಂದಿನ ಕಾಲದ ಮಕ್ಕಳಂತೆ ಮೊದ್ದುಮೊದ್ದಾಗಿ ವರ್ಷವಾದರೂ ಬಿದ್ದು ಕೊಂಡಿರುವುದಿಲ್ಲ. ಮೂರು ತಿಂಗಳಿಗೆ ತೆವಳಿದರೆ, ಆರು ತಿಂಗಳಿಗೆ ಅಂಬೆಗಾಲಿಡುವ ಈ ಮಕ್ಕಳಿಗೂ ಕೂಡ ಬಣ್ಣ ಬಣ್ಣದ ದೀಪಗಳಿಂದ, ಸಂಗೀತದ ವಿವಿಧ ಶಬ್ದಗಳಿಂದ ಕೂಡಿರುವ ಎಲೆಕ್ಟ್ರಾನಿಕ್ ಗ್ಯಾಜೆಟ್‌ಗಳೆಂದರೆ ಬಲು ಪ್ರೀತಿ. ಎರಡು ವರ್ಷದ ಮಗು ಸೆಲ್ಫಿ ಫೋಟೋ ಕ್ಲಿಕ್ಕಿಸಿ ಸಂಭ್ರಮಿಸುತ್ತಿರುವಾಗ,

*ಯಾಕಳುವೆ ಎಲೆರಂಗ ಬೇಕಾದ್ದು ನಿನಗೀವೆ*
*ನಾಕೆಮ್ಮೆ ಕರೆದ ನೊರೆ ಹಾಲು !*

– ಎಂದು ಹಾಡಿದರೆ ಕೇಳುತ್ತವೆಯೇ ಅವು !

ಈಗಿನ ಕಾಲದ ಪಟ್ಟಣದ ಮಕ್ಕಳು ಎಮ್ಮೆ ಹಾಲು ಕುಡಿದಾವೆ ! ಪಟ್ಟಣಗಳಲ್ಲಿ ಎಲ್ಲೆಡೆ 'ನಂದಿನಿ'ಯದೇ ದರ್ಬಾರು. ಎಮ್ಮೆ ಹಾಲು ತರುವುದಾದರು ಎಲ್ಲಿಂದ ?

ಇಂದಿನ ಚಲನಚಿತ್ರಗಳಲ್ಲಿ ಆಡುಮಾತೇ ಹಾಡಾಗಿ ಹರಿಯುವ 'ಬಾರಮ್ಮ ಹುಡುಗಿ ಅಲ್ಲೆ ಎಲ್ಲಾರ್ ಅಡ್ಜೆಸ್ಟ್ ಮಾಡ್ಕೊ...' ಅಥವಾ 'ಚಿತ್ರನ್ನ ಚಿತ್ರಾನ್ನ...'; 'ಹಳೆ ಸೀಸ. ಹಳೆ ಕಬಣ...'; 'ಪ್ರೀತ್ಸೆ ಪ್ರೀತ್ಸೇ...' 'ಎಕ್ಕರಾಜ ರಾಣಿ ನನ್ನ ಕೈಯೊಳಗಾ/ಹಿಡಿ ಮಣ್ಣು ನಿನ ಬಾಯೊಳಗಾ' ಮುಂತಾದ ಬೆರಕೆ ಸಂಗೀತದ ಹಾಡುಗಳ ಭರಾಟೆಯಲ್ಲಿ ಇಂತಹ ತ್ರಿಪದಿ/ಚೌಪದಿಗಳನ್ನು ಪಟ್ಟಣಗಳಲ್ಲಿ ಹಾಗಿರಲಿ ಹಳ್ಳಿಗಳಲ್ಲೂ ಕೂಡ ಹಾಡುವವರು, ಕೇಳಲಿಚ್ಛಿಸುವವರೇ ಇಲ್ಲದಿರುವಾಗ ಜಾನಪದ ಹಾಡುಗಳನ್ನು ಕೇಳುತ್ತಾ ಬೆಳೆಯುವ ಅವಕಾಶಗಳು ಇಂದಿನ ಮಕ್ಕಳಿಗಂತು ಇಲ್ಲವೇ ಇಲ್ಲ !

**ವೈ. ಎನ್. ಗುಂಡೂರಾವ್**
'ಸೌರಭ', ನಂ. ೧೨೩೧, ೧೩ನೇ ಅಡ್ಡರಸ್ತೆ, ೨ನೇ ಹಂತ, ಗಿರಿನಗರ, ಬೆಂಗಳೂರು – ೮೫

# ಅಚ್ಛೇ ದಿನಗಳು

ಪ್ರಧಾನಿ ಮೋದಿಯು ಘೋಷಣೆ ಮಾಡಿಹ
ಅಚ್ಛೇ ದಿನಗಳು ಬಂದಿವೆ ಕಾಣಿರೊ
ಅಪೂರ್ವ ದಿನಗಳು ನಾಡಲಿ ಗೈದಿಹ
ಬಹುವಿಧ ಪವಾಡ ಸರಣಿಯ ಕೇಳಿರೊ !

ಕುಬೇರ ಕುವರರ ಮನೆಯಂಗಳದಲಿ
ಅಚ್ಛೇ ದಿನಗಳು ವಿನಯದಿ ನಿಂತಿವೆ
ಸೇವೆಯ ನಡೆಸುವ ಅತ್ಯಾತುರದಲಿ
ಭೃತ್ಯರ ತೆರದಲಿ ಕರಗಳ ಕಟ್ಟಿವೆ !

ಪ್ರಭುತ್ವ ಗಣ್ಯರ ಮಹಲುಗಳಲ್ಲಿಯು
ಅಚ್ಛೇ ದಿನಗಳ ಸೇವೆಯು ನಡೆದಿದೆ
ಗುತ್ತಿಗೆದಾರರ ಭವನಗಳಲ್ಲಿಯು
ಸೇವಾ ಕಾರ್ಯವು ನಿಲ್ಲದೆ ನಡೆದಿದೆ !

ಕುಚೇಲ ಕುವರರ ದೀನ ಕುಟೀರಕೆ
ಬೆನ್ ಮಾಡಿರುವವೊ ಅಚ್ಛೇ ದಿನಗಳು
ದೀನರ ದಲಿತರ ನತದೃಷ್ಟತ್ವಕೆ
ಮರುಗುವುದಿಲ್ಲವೊ ಅಚ್ಛೇ ದಿನಗಳು !

ಅಚ್ಛೇ ದಿನಗಳು ಹಾಲಿನ ಹೊಳೆಯನು
ಹರಿಸಿವೆ ಎನುವುದು ಕೇಸರಿ ಸಂಘವು
ಸುರಿಸುತ್ತಿರುವವು ಮುತ್ತಿನ ಮಳೆಯನು
ಎನ್ನುವುದಯ್ಯಾ ಮೂಢರ ಸಂಘವು !

ಸಮಾಜವಾದವ ನಿದ್ರೆಗೆ ಮಲಗಿಸಿ
ಲಾಲಿಯ ಹಾಡಿವೆ ಮೋದಿಯ ಪದಗಳು
ಕುಬೇರಶಾಹಿಗೆ ಪಟ್ಟವ ಕಟ್ಟಿಸಿ
ಕೀರ್ತಿಸುತಿರುವವು ಅಚ್ಛೇ ದಿನಗಳು !

ನಗರ ಭ್ರಮಣದ ಅಚ್ಛೇ ದಿನಗಳು
ಕುಗ್ರಾಮಗಳಿಗೆ ಹೋಗಲಿ ಒಲ್ಲವು
ದಿಲ್ಲಿಯಲಾಳುವ ಕೇಸರಿ ಮನಗಳು
ಸಂವೇದನೆಯನು ಕಳೆಕೊಂಡಿರುವವು !

ಎಲ್ಲಿಗೆ ಬಂದಿವೆ ಯಾರನು ತಲುಪಿವೆ
ಮೋದೀ ಘೋಷಿತ ಅಚ್ಛೇ ದಿನಗಳು ?
ಕೇಸರಿ ಪಡೆಗಳ ಮನಗಳ ಮಣಿಸಿವೆ
ಪ್ರಧಾನಿ ಗೀಳನು ತಣಿಸುವ ದಿನಗಳು !

ಗಾಂಧೀ ಪ್ರಣೀತ ಸರ್ವೋದಯವನು
ಸೃಷ್ಟಿಸಬಲ್ಲವೆ ಅಚ್ಛೇ ದಿನಗಳು ?
ಸಮತಾವಾದದ ಹೊನ್ನಿನ ಕನಸನು
ನನಸಾಗಿಸುವವೆ ಅಚ್ಛೇ ದಿನಗಳು ?

ಬಲಶಾಲಿಗಳಿಗೆ ಪಾಯಸವೀಯುವ
ಅಚ್ಛೇ ದಿನಗಳು ಬಡವರಿಗಿಲ್ಲವೊ
ಮುಗುದರ ಮೂಗಿಗೆ ತುಪ್ಪವ ಸವರುವ
ಅಚ್ಛೇ ದಿನಗಳು ಬೇಕಾಗಿಲ್ಲವೊ !



**ಎ. ಆರ್. ನಾರಾಯಣಘಟ್ಟ**
ನಂ. ೧೬೮, 'ಗೀತಾ ಕುಟೀರ'
ವಿಠಲನಗರ, ಕುಮಾರಸ್ವಾಮಿ ಬಡಾವಣೆ
೨ನೇ ಹಂತ, ಬೆಂಗಳೂರು – ೫೬೦ ೧೧೧

ಪ್ರಪಂಚದ ಯಾವುದೇ ಮೂಲೆಯಲ್ಲಿ ಸಂಭವಿಸುವ ಘಟನೆ ಕ್ಷಣಾರ್ಧದಲ್ಲಿ ಟೆಲಿವಿಷನ್‌ನಲ್ಲಿ ಪ್ರಸಾರವಾಗುತ್ತದೆ. ಇದರ ಜೊತೆಗೆ ಇಂಟರ್‌ನೆಟ್, ಸಾಮಾಜಿಕ ಜಾಲತಾಣ, ಫೇಸ್ ಬುಕ್ ವಗೈರೆ ವಗೈರೆಗಳು ಬಂದಿವೆ. ಇವೆಲ್ಲ ಇಪ್ಪತ್ತೊಂದನೇ ಶತಮಾನದ ಆವಿಷ್ಕಾರಗಳು.

## ಟಿ. ವಿ. ಲೋಕ

# ಸುದ್ದಿವಾಹಿನಿಗಳ ವಿಶ್ವಾಸಾರ್ಹತೆ ಎಷ್ಟು? ಉತ್ಪ್ರೇಕ್ಷೆ ಎಷ್ಟು?

ಕಿರಿತೆರೆ ಮತ್ತು ಹಿರಿತೆರೆ ಅಥವಾ ಬೆಳ್ಳಿತೆರೆ ಮಧ್ಯೆ ಇರುವ ಮುಖ್ಯ ವ್ಯತ್ಯಾಸ ಎಂದರೆ ಒಂದು ಮೂರು ಗಂಟೆಯಲ್ಲಿ ಮುಕ್ತಾಯವಾದರೆ ಇನ್ನೊಂದು ಮೂರು ವರ್ಷವಾದರೂ ಮುಗಿಯುವುದಿಲ್ಲ. ಸೀರಿಯಲ್ಲುಗಳಲ್ಲಿ ಹೊಡೆದಾಟ ಬಡಿದಾಟ, ಲಾಂಗು, ಮಚ್ಚು ಪ್ರವೇಶಿಸದೆ ಇರುವುದು ವಿಶೇಷ. ಈಗಿರುವ ಸರಕುಗಳೆಲ್ಲ ಮುಗಿದ ಮೇಲೆ ಅದಕ್ಕೂ ಮೊರೆಹೋಗುವ ಕಾಲ ಬಂದೀತು. ಟಿ.ವಿ. ಕಾರ್ಯಕ್ರಮಗಳನ್ನು ಕುರಿತು ವಿವರವಾಗಿ ಪರಿಶೀಲಿಸಲಾಗಿದೆ. ಪ್ರಸಾರವಾಗುವ ಎಲ್ಲ ಕಾರ್ಯಕ್ರಮಗಳನ್ನು ಕಳಪೆ ಎಂದು ತಳ್ಳಿಹಾಕುವಂತಿಲ್ಲ. ಕೆಲವನ್ನು ನೋಡಬಹುದು. ಒಮ್ಮೊಮ್ಮೆ ದೇಶೀ ಹಾಗೂ ವಿದೇಶೀ ಸಾಕ್ಷ್ಯಚಿತ್ರಗಳು ಪ್ರಸಾರವಾಗುತ್ತವೆ, ಪ್ರವಾಸಿ ತಾಣಗಳ ಪರಿಚಯ ಇರುತ್ತವೆ. ಹೆಚ್ಚಿನ ಕಾರ್ಯಕ್ರಮಗಳು ಜಾಹೀರಾತುಗಳ ಮೇಲೆ ಅವಲಂಬಿತವಾಗಿರುವುದರಿಂದ ಪ್ರೇಕ್ಷಕರನ್ನು ಆಕರ್ಷಿಸಲು ಸುಲಭ ಸೂತ್ರಗಳನ್ನು ಅನುಸರಿಸುತ್ತಾರೆ. ಎಲ್ಲವೂ ವ್ಯವಹಾರಮಯ, ವ್ಯಾಪಾರೀ ಸರಕು. ಭಕ್ತಿಸುಧೆ ಬೇಕಾದಷ್ಟು ಹರಿಯುತ್ತದೆ. ಇದಲ್ಲದೆ ಬೇರೆ ಬೇಕಾದಷ್ಟು ಭಕ್ತಿವಾಹಿನಿಗಳಿವೆ.

ಹತ್ತಾರು ಟಿ.ವಿ. ಚಾನೆಲ್‌ಗಳಿಗೆ ಪ್ರತಿದಿನ ಪ್ರಸಾರ ಮಾಡುವುದಕ್ಕೆ ಐದಾರು ಧಾರಾವಾಹಿಗಳಾದರೂ ಬೇಕು. ಅಂದರೆ ಐವತ್ತು ಅರವತ್ತು ಸೀರಿಯಲ್ಲುಗಳು ಸಿದ್ಧವಾಗಿರಬೇಕು. ಹಾಗಿರುವಾಗ ಗುಣಮಟ್ಟ ಕಾಯ್ದುಕೊಳ್ಳುವುದು ನಿಜವಾಗಿ ಕಷ್ಟದ ಕೆಲಸ. ವೀಕ್ಷಕರನ್ನು ಆಕರ್ಷಿಸಲು ಎಲ್ಲ ಮಸಾಲೆಗಳನ್ನು ಸೇರಿಸಬೇಕು. ಚಾನೆಲ್‌ಗಳವರು ಹೇಳಿದರೆ ಕತೆಯ ಹಂದರವನ್ನು ಎಳೆಯಬೇಕು. ಭಾಷೆಗೆ, ಸಂಭಾಷಣೆಗೆ ಹೆಚ್ಚು ಗಮನ ಕೊಡಲು ಒತ್ತಡದಿಂದ ಸಾಧ್ಯವಾಗದು. ಒಂದರಲ್ಲಿ ಬರುವ ಸಂಭಾಷಣೆಯೇ ಇನ್ನೊಂದರಲ್ಲಿ ಮರುಕಳಿಸುವುದನ್ನು ಕಾಣಬಹುದು. ಎಲ್ಲವೂ ಒಂದು ಫಾರ್ಮುಲಾ ಅಥವಾ ಚೌಕಟ್ಟಿನೊಳಗೆ ಬರುವುದರಿಂದ ತೂಗಿಸಿಕೊಂಡು ಹೋಗುತ್ತದೆ. ಅದಕ್ಕಾಗಿಯೇ ಚಾನೆಲ್‌ಗಳು ಧಾರಾವಾಹಿಗಳ ಜೊತೆಗೆ ಇತರ ಕಾರ್ಯಕ್ರಮಗಳನ್ನು ರೂಪಿಸುತ್ತವೆ. ಆಗಾಗ ಪ್ರಶಸ್ತಿ ಪ್ರದಾನ ಕಾರ್ಯಕ್ರಮಗಳಿರುತ್ತವೆ. ಅಂಥವಕ್ಕೆ ಸಾಕಷ್ಟು ಹಣವನ್ನು ಖರ್ಚು ಮಾಡುತ್ತಾರೆ.

ಎಲ್ಲ ಟಿ.ವಿ. ಕೇಂದ್ರಗಳು ಬೆಂಗಳೂರಿನಲ್ಲಿಯೇ ಕೇಂದ್ರೀಕೃತವಾಗಿವೆ. ಅದರಿಂದ ಎಲ್ಲ ಕಾರ್ಯಕ್ರಮಗಳ ತಯಾರಿ ಬೆಂಗಳೂರಿನಲ್ಲಿಯೇ. ಟಿ.ವಿ. ಚಿತ್ರೀಕರಣಕ್ಕಾಗಿಯೇ ಬೇಕಾದಷ್ಟು ಮನೆಗಳೂ ಸಿದ್ಧವಾಗಿವೆ. ಹಿಂದೆಲ್ಲ ಸಿನಿಮಾ ಚಿತ್ರೀಕರಣಕ್ಕೆ



**ಸಿ. ಆರ್. ಕೃಷ್ಣರಾವ್**

ಸ್ಟುಡಿಯೋಗಳಲ್ಲಿ ದೊಡ್ಡ ಫ್ಲೋರ್‌ಗಳನ್ನು ಕಟ್ಟುತ್ತಿದ್ದರು. ಅದರಲ್ಲಿ ಸೆಟ್‌ಗಳನ್ನು ಹಾಕಿ ಚಿತ್ರೀಕರಿಸುತ್ತಿದ್ದರು. ಆಗ ಈ ಸೆಟ್‌ಗಳಿಗೆ ಬೇಕಾದ ಪರಿಕರಗಳನ್ನು ಒದಗಿಸುವ ಒಂದು ಉದ್ಯಮವೇ ಇತ್ತು. ಈಗ ಅವೆಲ್ಲ ಅದೃಶ್ಯವಾಗಿವೆ. ಸೆಟ್‌ಗಳನ್ನು ನಿರ್ಮಿಸುವುದು ಈಗ ಅಪರೂಪ. ಈಗ ಸಿನಿಮಾಗಳಿಗಾಗಿಯೇ ಮನೆಗಳನ್ನು ನಿರ್ಮಿಸಿರುತ್ತಾರೆ. ಹೆಚ್ಚಾಗಿ ಅವರೆಲ್ಲ ಉದ್ಯಮಕ್ಕೆ ಸಂಬಂಧಪಟ್ಟವರೇ. ಕಿರುತೆರೆಯಲ್ಲಿ ಹೊರಾಂಗಣ ಚಿತ್ರೀಕರಣ ಅಷ್ಟಾಗಿರುವುದಿಲ್ಲ. ಸಿನಿಮಾ, ಕಿರುತೆರೆಯ ಎಲ್ಲ ತಯಾರಿಕೆಗಳಿಗೂ ಬೆಂಗಳೂರೇ ಕೇಂದ್ರ. ನಿರ್ದೇಶಕರು, ಛಾಯಾಗ್ರಾಹಕರು, ಸಂಕಲನಕಾರರು, ತಾಂತ್ರಿಕ ವರ್ಗ, ಸ್ಟುಡಿಯೋಗಳು, ಶೂಟಿಂಗ್ ಮನೆಗಳು, ನಟನಟಿಯರು, ಕತೆ, ಚಿತ್ರಕತೆ, ಸಂಭಾಷಣೆ ಬರಹಗಾರರು ಮುಂತಾದವರೆಲ್ಲ ನೆಲೆಸಿರುವುದು ಕೂಡ ಬೆಂಗಳೂರಿನಲ್ಲೆ. ಇದಕ್ಕೆ ಪೂರಕವಾಗಿ ವಿವಿಧ ಕೇಬಲ್ ನೆಟ್‌ವರ್ಕ್‌ಗಳೂ ಇವೆ. ಅವರದೇ ಆದ ಒಂದು ಸಂಘಟನೆಯೂ ಇದೆ. ಈ ಕೇಬಲ್ ನೆಟ್‌ವರ್ಕ್‌ಗಳೂ ಕೂಡ ಸಿನಿಮಾಗಳನ್ನು, ಕೆಲವು ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತವೆ. ಕೆಲವು ಕೇಬಲ್ ಕಂಪನಿಗಳು ಪ್ರಸಾರ ಮಾಡುವ ಚಲನಚಿತ್ರಗಳಿಗೆ ಪ್ರತ್ಯೇಕವಾಗಿ ಹಣವನ್ನು ಕೂಡ ವಸೂಲಿ ಮಾಡುತ್ತವೆ. ಇದೂ ಕೂಡ ಒಂದು ಉದ್ಯಮವಾಗಿ ಬೆಳೆದಿದೆ. ಸೆಟ್‌ಅಪ್ ಬಾಕ್ಸ್ ಅಳವಡಿಸುವುದನ್ನು ಈಗ ಕಡ್ಡಾಯ ಮಾಡಲಾಗಿದೆ. ಕೋಟ್ಯಂತರ ರೂಪಾಯಿಗಳ ಈ ಮನರಂಜನಾ ಉದ್ಯಮದಿಂದ ಸರಕಾರಕ್ಕೂ ಲಾಭವಿದೆ ತೆರಿಗೆಗಳಿಂದ. ಸಾವಿರಾರು ಮಂದಿಗೆ ಕೇಬಲ್ ನೆಟ್‌ವರ್ಕ್‌ನಿಂದಲೂ ಉದ್ಯೋಗ ಲಭಿಸಿದೆ. ಇಪ್ಪತ್ತನೇ ಶತಮಾನದ ಕೊನೆಯಲ್ಲಿ ದೇಶಾದ್ಯಂತ ಪಸರಿಸಿದ ಟೆಲಿವಿಷನ್ ಚಾನೆಲ್‌ಗಳು ಬಹುಬೇಗನೆ ಬೆಳೆದು ಜನಜೀವನದ ಒಂದು ಭಾಗವೇ ಆಗಿಬಿಟ್ಟಿದೆ.

ಇನ್ನು ಟೆಲಿವಿಷನ್ ಪ್ರಸಾರದಲ್ಲಿ ಬಹು ಮುಖ್ಯವಾದ ಸುದ್ದಿವಾಹಿನಿಗಳ ಪರಿಸ್ಥಿತಿ ಗಮನಿಸೋಣ. ಒಂದಾನೊಂದು ಕಾಲದಲ್ಲಿ ಪಾರಿವಾಳ ಹಕ್ಕಿಗಳು ಸುದ್ದಿವಾಹಕಗಳಾಗಿದ್ದುವು. ಮತ್ತೆ ಬಂದದ್ದು ಕುದುರೆ ಸವಾರ, ಕಾಲಾಳು, ಅಂಚೆ, ತಂತಿ, ಟೆಲಿಫೋನ್, ರೇಡಿಯೊ ಇತ್ಯಾದಿ. ಈಗ ಅವೆಲ್ಲ ಇತಿಹಾಸವಾಗಿಬಿಟ್ಟಿದೆ. ಪ್ರಪಂಚದ ಯಾವುದೇ ಮೂಲೆಯಲ್ಲಿ ಸಂಭವಿಸುವ ಘಟನೆ ಕ್ಷಣಾರ್ಧದಲ್ಲಿ ಟೆಲಿವಿಷನ್‌ನಲ್ಲಿ ಪ್ರಸಾರವಾಗುತ್ತದೆ. ಇದರ ಜೊತೆಗೆ ಇಂಟರ್‌ನೆಟ್, ಸಾಮಾಜಿಕ ಜಾಲತಾಣ, ಫೇಸ್ ಬುಕ್ ವಗೈರೆ ವಗೈರೆಗಳು ಬಂದಿವೆ. ಇವೆಲ್ಲ ಇಪ್ಪತ್ತೊಂದನೇ ಶತಮಾನದ ಆವಿಷ್ಕಾರಗಳು. ಅಂಗೈಯ್ಯಲ್ಲಿರಿಸಿಕೊಳ್ಳಬಹುದಾದ ಸ್ಮಾರ್ಟ್ ಫೋನ್‌ಗಳು ಬಂದ ಮೇಲಂತೂ ನಿಂತಲ್ಲಿ ಕೂತಲ್ಲಿ ಪ್ರಪಂಚದ ಆಗುಹೋಗುಗಳನ್ನು ಅರಿಯಬಹುದು. ಇದನ್ನು ಸಂವಹನ ಕ್ಷೇತ್ರದಲ್ಲಿ ಉಂಟಾಗಿರುವ ಕ್ರಾಂತಿಕಾರಿ ಬದಲಾವಣೆ ಎನ್ನಬಹುದು. ಓಲೆಗರಿಯಿಂದ ಮುದ್ರಣ ಯಂತ್ರದವರೆಗೆ. ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳಶಾಹಿ ಉತ್ಪಾದನೆಯವರೆಗೆ ಮನುಕುಲದ ಬೆಳವಣಿಗೆ ಅತಿಶಯವಾದ್ದು.

ಪ್ರಸಿದ್ಧ ಅಂಕಣಕಾರ, ಟೆಲಿವಿಷನ್ ಆಂಕರ್ ಶಶಿಕುಮಾರ್ ಪ್ರಕಾರ "ಬಂಡವಾಳಶಾಹಿ ವ್ಯವಸ್ಥೆಯ ಉದಯ ಮತ್ತು ಬೆಳವಣಿಗೆಯೊಂದಿಗೇ ಪತ್ರಿಕೋದ್ಯಮ ಹುಟ್ಟಿ, ಬೆಳೆಯಿತು. ಇದು ಇತಿಹಾಸ. ಹದಿನೇಳನೇ ಶತಮಾನದ ಪ್ರಾರಂಭದಲ್ಲಿ ಇಂಗ್ಲೆಂಡಿನಲ್ಲಿ ಸಾರ್ವಜನಿಕ ಕ್ಷೇತ್ರದ ಬೆಳವಣಿಗೆಗೆ ಪ್ರೇರಣೆಯೂ ಬಂಡವಾಳಶಾಹಿಯದ್ದೆ. ವೃತ್ತಪತ್ರಿಕೆಯ ಬೆಳವಣಿಗೆಯೂ ಕೂಡ ಈ ಸಾರ್ವಜನಿಕ ಕ್ಷೇತ್ರದ ಒಂದು ಭಾಗ." ನಮ್ಮ ಭಾರತ ದೇಶದಲ್ಲಿ ಪತ್ರಿಕೋದ್ಯಮ ಎನ್ನುವುದು ಸ್ವಾತಂತ್ರ್ಯ ಹೋರಾಟದ ಅವಿಭಾಜ್ಯ ಅಂಗವಾಗಿತ್ತು. ಆದರೆ ಈಗ ಅದು ಹೆಚ್ಚು ಕಡಿಮೆ ಪೂರ್ಣವಾಗಿ ಕಾರ್ಪೊರೇಟ್ ವಲಯದ ಭಾಗವಾಗಿಬಿಟ್ಟಿದೆ. ವಾರ್ತೆಗಳಿಗೆ ವೃತ್ತಪತ್ರಿಕೆಗಳು ಮತ್ತು ರೇಡಿಯೊಗಳ ಮೇಲೆಯೇ ಇದ್ದ ಅವಲಂಬನೆ ಹೋಗಿ ಸುಮಾರು ಅರ್ಧ ಶತಮಾನವೇ ಕಳೆದಿದೆ. ಈಗೆಲ್ಲ ದೃಶ್ಯಮಾಧ್ಯಮದ್ದೇ ಪ್ರಾಧಾನ್ಯ. ಪ್ರಿಂಟ್ ಮೀಡಿಯ ಎಂದು ಕರೆಯುತ್ತಿರುವ ಪತ್ರಿಕಾ ಮಾಧ್ಯಮ ಮತ್ತು ಎಲೆಕ್ಟ್ರಾನಿಕ್ ಮೀಡಿಯ ಎಂದು ಕರೆಯುವ ದೃಶ್ಯಮಾಧ್ಯಮ ಎರಡೂ ಈಗ ಅಸ್ತಿತ್ವದಲ್ಲಿದೆ. ಎರಡೂ ಕೂಡ ಬಂಡವಾಳಶಾಹಿ ಒಡೆತನದಲ್ಲೇ ಇವೆ. ಮುಂದೇನಾದೀತು ಎಂದು, ಯಾವುದು ಹೆಚ್ಚು ಮೇಲುಗೈ ಸಾಧಿಸುವುದು ಎನ್ನುವುದು ಊಹೆಯಾದೀತು ಅಷ್ಟೆ. ಒಂದಂತೂ ನಿಜ, ದೃಶ್ಯಮಾಧ್ಯಮ ಇಂದು ಜನಮಾನಸದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿದೆ. ಭಾರತದಲ್ಲಿ ಈ ದೃಶ್ಯಮಾಧ್ಯಮ ೨೦೧೪ರಲ್ಲಿ ಪಾರ್ಲಿಯಮೆಂಟಿಗೆ ನಡೆದ ಚುನಾವಣೆಗಳಲ್ಲಿ ವಹಿಸಿದ ಪಾತ್ರ ನಮ್ಮ ಮುಂದಿದೆ.

ಟೆಲಿವಿಷನ್ ಪ್ರಪಂಚದಲ್ಲಿ ಸುದ್ದಿವಾಹಿನಿಗಳು ಮುಖ್ಯವಾದೊಂದು ಭಾಗ. ಅದಕ್ಕಾಗಿಯೇ ಮೀಸಲಾಗಿರುವ ಚಾನೆಲ್‌ಗಳು ಎಲ್ಲ ಭಾಷೆಗಳಲ್ಲಿಯೂ ಇವೆ. ನಮ್ಮ ವಿಶ್ಲೇಷಣೆಗೆ ಇಂಗ್ಲಿಷ್ ಮತ್ತು ಕನ್ನಡ ವಾಹಿನಿಗಳಷ್ಟನ್ನೇ ತೆಗೆದುಕೊಳ್ಳೋಣ. ಇತರ ಭಾಷೆಗಳಲ್ಲಿ ಸ್ಥಿತಿ ಭಿನ್ನವಾಗೇನಿಲ್ಲ. ವಾಹಿನಿಗಳಲ್ಲಿ ಸುದ್ದಿಗಿಂತ ಅಬ್ಬರವೇ ಜಾಸ್ತಿ. ಅವು ಪ್ರಧಾನವಾಗಿ ಉತ್ಪ್ರೇಕ್ಷೆಗೆ ಮಾರುಹೋಗಿರುವುದರಿಂದ ಹಾಗಾಗುತ್ತದೆ. ಒಂದು ಘಟನೆ ಅಥವಾ ಸುದ್ದಿ ತಲುಪಿದಾಗ ಅದರ ವಿಶ್ವಾಸಾರ್ಹತೆ ಬಹಳ ಮುಖ್ಯವಾಗುತ್ತದೆ. ಪ್ರಿಂಟ್ ಮೀಡಿಯಾದಲ್ಲಿ ಅದನ್ನು ತಪಾಸಣೆ ಮಾಡಿ, ಸುದ್ದಿ ನಿಜವೇ, ನಂಬಿಕಾರ್ಹವೆ ಎಂದು ಪ್ರಕಟಿಸುವ ಮುನ್ನ ಪರಿಶೀಲಿಸಲು ಸಮಯ ಇರುತ್ತದೆ. ನಿಯಮಬದ್ಧವಾಗಿ ಕ್ರಾಸ್ ವೆರಿಫಿಕೇಶನ್ ಮಾಡುವುದಕ್ಕೆ ಅವಕಾಶ ಇರುತ್ತದೆ. ಸುದ್ದಿಮಾಧ್ಯಮದಲ್ಲಿ ಅದಾವುದಕ್ಕೂ ಸಮಯ ಇರುವುದಿಲ್ಲ. ವರದಿಗಾರ ಕಂಡದ್ದು ನೇರವಾಗಿ ಪ್ರಸಾರವಾಗುತ್ತದೆ. 'ನೇರ, ದಿಟ್ಟ, ನಿರಂತರ' ಇದು ಎಲ್ಲ ಸುದ್ದಿಮಾಧ್ಯಮಗಳ ಘೋಷವಾಕ್ಯ. ಆದರೆ ಪ್ರಸಾರವಾಗುವ ಸುದ್ದಿಯಲ್ಲಿ ಜೊಳ್ಳೆಷ್ಟು ಕಾಳೆಷ್ಟು ಎಂದು ನಿರ್ಧರಿಸಲು ನೋಡುಗರಿಗೂ ವ್ಯವಧಾನ ಇರುವುದಿಲ್ಲ. ಟಿ.ವಿ.ಯಲ್ಲಿ ಬರುವ ಸುದ್ದಿಗಳನ್ನೇ ನಂಬಿಕೊಂಡಿರುವ ಜನ ಬೇಕಾದಷ್ಟಿದ್ದಾರೆ. ಸುದ್ದಿಯ ಜೊತೆಗೆ ವರದಿಗಾರನ ಅಭಿಪ್ರಾಯವೂ ಸೇರಿಹೋಗಿರುತ್ತದೆ. ಮಂತ್ರಕ್ಕಿಂತ ಉಗುಳೇ ಜಾಸ್ತಿ ಅನ್ನುವ ಹಾಗೆ ಸುದ್ದಿಗೆ ಬಣ್ಣ ಹಚ್ಚುವುದೇ ಮುಖ್ಯವಾಗಿಬಿಡುತ್ತದೆ ಮಾಧ್ಯಮಗಳಲ್ಲಿ. ಸುದ್ದಿಯ ಜೊತೆ ವ್ಯಾಖ್ಯಾನವೂ ಇರುತ್ತದೆ. ಚಾನೆಲ್‌ಗಳ ನೀತಿಗೆ ಅನುಗುಣವಾಗಿ ಪ್ರಕಟವಾಗುವ ಸುದ್ದಿಗಳಲ್ಲಿ ತಿರುವುಗಳು ಇರುತ್ತವೆ. ಸುದ್ದಿವಾಹಿನಿಗಳಲ್ಲಿ ನಿಗದಿಯಾದ ಸಮಯಕ್ಕೆ ಸುದ್ದಿಗಳು ಪ್ರಸಾರವಾಗುತ್ತವೆ. ಅದರ ವ್ಯಾಖ್ಯಾನವೂ ಇರುತ್ತದೆ. ಅತಿ ಮುಖ್ಯವಾದ ಘಟನೆಯ ಬಗ್ಗೆ ಚರ್ಚೆಗಳು, ಸಂದರ್ಶನಗಳೂ ಇರುತ್ತವೆ. ಇಂಥವುಗಳಲ್ಲಿ ಚರ್ಚೆಗಿಂತ ಗದ್ದಲವೇ ಹೆಚ್ಚು.

*(ಮುಂದುವರಿಯುವುದು)*

ಸಿ. ಆರ್. ಕೃಷ್ಣರಾವ್
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ,
ಬೆಂಗಳೂರು – ೫೬೦ ೦೮೫

## ವಿಪರ್ಯಾಸ !

ಪ್ರಜಾ ರಾಜ್ಯದಲ್ಲಿ
ಪ್ರಜಾ 'ಸೇವಕ'ರಿಗೆ
ಭವ್ಯ ಮಹಲು
ಪ್ರಜಾ 'ಪ್ರಭು'ವಿಗೆ
ಬಡ ಗುಡಿಸಲು !

**ಗೀತಾ ಶಾಸ್ತ್ರಿ**
೧೨೧/೩, ಶ್ರೀನಿಲಯ, ಶ್ರೀನಿವಾಸ ರಸ್ತೆ
೨ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು – ೨೮



# ಸಮಾನ ಅವಕಾಶ – ಆರ್ಥಿಕಾಭಿವೃದ್ಧಿಗಾಗಿ ಖಾಸಗಿ ರಂಗದಲ್ಲಿ ಮೀಸಲಾತಿ

**ಜೈಕುಮಾರ್ ಹೆಚ್. ಎಸ್.**

**ಮೀಸಲಾತಿಯ ವ್ಯಾಖ್ಯಾನ**

ನಮ್ಮ ದೇಶದಲ್ಲಿ ಎಲ್ಲರನ್ನು ಸಮಾನವಾಗಿ, ನ್ಯಾಯಯುತವಾಗಿ ಕಾಣದ ಜಾತಿ ತಾರತಮ್ಯ ಅಂತರ್ಗತವಾಗಿರುವುದರಿಂದ ಸಾಮಾಜಿಕ ಜೀವನ ದಂತೆಯೇ ದೇಶದ ಉತ್ಪಾದಕತೆಯೂ ರೋಗಗ್ರಸ್ತ ವಾಗಿದೆ. ಚಾರಿತ್ರಿಕವಾಗಿ ದೇಶದ ಮೂರನೇ ಒಂದು ಪಾಲು ಜನತೆಯನ್ನು ಕೆಳಹಂತದ ಉತ್ಪಾದಕ ಚಟುವಟಿಕೆಗಳಿಗೆ ಮಾತ್ರವೇ ಮೀಸಲಾಗಿಸಿರು ವುದರಿಂದ ಇಡೀ ಮಾನವ ಸಂಪನ್ಮೂಲವನ್ನು ದೇಶದ ಆಮೂಲಾಗ್ರ ಬೆಳವಣಿಗೆಗೆ ಪೂರಕವಾಗಿ ಬಳಸ ಲಾಗುತ್ತಿಲ್ಲ. ಭಾರತ ಒಂದು ಪ್ರಗತಿಶೀಲ, ಶಕ್ತಿಶಾಲಿ ರಾಷ್ಟ್ರವಾಗಿ ಬೆಳೆಯುವಲ್ಲಿ ಜಾತಿವ್ಯವಸ್ಥೆ ದೊಡ್ಡ ತಡೆಗೋಡೆಯಾಗಿ ನಿಂತಿದೆ. ದೀರ್ಘಕಾಲದಿಂದ ತುಳಿತಕ್ಕೊಳಗಾದ ಜನರಿಗೆ ಸಹಾಯಹಸ್ತ ನೀಡುವ ಸಲುವಾಗಿ ಮೀಸಲಾತಿ ಒದಗಿಸಬೇಕು ಎಂಬ ವ್ಯಾಖ್ಯಾನವೇ ದೋಷಪೂರಿತ. ಈ ಹಿನ್ನೆಲೆಯಲ್ಲಿ, ಕೆಳ ಸಮುದಾಯಗಳನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಸಮಾನತೆಯಿಂದ ಭಾವಿಸಲು ಸಾಧ್ಯವಾಗದ ಭಾರತೀಯ ಸಮಾಜದ ದೌರ್ಬಲ್ಯ ಗಳನ್ನು ಸರಿಪಡಿಸುವ ಚಿಕಿತ್ಸಕ ಶಕ್ತಿಯೆಂದು ಮೀಸಲಾತಿಯನ್ನು ಪರಿಭಾವಿಸಬೇಕು.

೧೯೯೦ರಿಂದೀಚೆಗೆ ಅನುಸರಿಸುತ್ತಿರುವ ಹೊಸ ಆರ್ಥಿಕ ನೀತಿಯಿಂದ ಎಲ್ಲ ರಂಗವೂ ಖಾಸಗೀ ಮಯವಾಗುತ್ತಿದೆ. ಜಾಗತೀಕರಣ ಎಂಬುದು ದಲಿತರು ಮತ್ತು ಹಿಂದುಳಿದವರನ್ನು ಬಲಿ ತೆಗೆದು ಕೊಳ್ಳುತ್ತಿರುವ ಬಂಡವಾಳಶಾಹಿ ವ್ಯವಸ್ಥೆಯ ಹಂತ. ಉಳ್ಳವರು ಇನ್ನೂ ಹೆಚ್ಚು ಹೆಚ್ಚು ಗಳಿಸುವ, ಇಲ್ಲದವರು ಇನ್ನಷ್ಟು ಕಳಕೊಳ್ಳುವ ಸ್ಥಿತಿ ತಲುಪಿದೆ. ೧೯೯೦ಕ್ಕೆ ಮುಂಚೆ ಸರ್ಕಾರಗಳ ಅಧೀನದಲ್ಲಿದ್ದ ಸಾರ್ವಜನಿಕ ಉದ್ದಿಮೆಗಳು, ಜೀವವಿಮೆ, ಬ್ಯಾಂಕಿಂಗ್, ಹಣಕಾಸು, ಇತ್ಯಾದಿಗಳಲ್ಲಿ ಮೀಸಲಾತಿಯಿಂದಾಗಿ ದಲಿತರು ಉದ್ಯೋಗ ಪಡೆದು ಉಸಿರಾಡಲು ಕೆಲಮಟ್ಟಿನ ಅವಕಾಶವಿತ್ತು. ಆದರೆ ಜಾಗತೀಕರಣದ ತ್ರಿಮೂರ್ತಿಗಳಾದ ಡಬ್ಲ್ಯೂ.ಟಿ.ಒ., ವಿಶ್ವ ಬ್ಯಾಂಕ್ ಮತ್ತು ಐ.ಎಂ.ಎಫ್. ನಿರ್ದೇಶನಗಳ ಅನುಸಾರ 'ಸಂರಚನೆ ಹೊಂದಾಣಿಕೆ' ಮತ್ತು 'ತೊಟ್ಟಿಕ್ಕುವ ಸಿದ್ಧಾಂತ' ಎಂಬ ನೀತಿಗಳಿಗೆ ಆತುಕೊಂಡ ನಂತರ ಮೀಸಲಾತಿಗೆ ದೊಡ್ಡ ಸೊನ್ನೆ ಸುತ್ತಿದ ಹಾಗೆ ಆಗಿದೆ ಎಂದು ಹಲವು ಅಧ್ಯಯನಗಳು ಹೇಳುತ್ತಿವೆ. ಏಕೆಂದರೆ, ಶೇ. ೯೦ರಷ್ಟು ದಲಿತರು ಕೆಲಸ ಮಾಡು ತ್ತಿರುವ ಖಾಸಗಿ ರಂಗವು (ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯ) ಮೀಸಲಾತಿ ವ್ಯಾಪ್ತಿಯಿಂದ ಆಚೆಗಿವೆ.

ಇದರಿಂದಾಗಿ ಖಾಸಗಿ ರಂಗದಲ್ಲಿ ಅವಕಾಶ ವಂಚಿತರಿಗೆ ಮೀಸಲಾತಿ ನೀಡಬೇಕೆಂಬ ದನಿ ಗಟ್ಟಿಯಾಗ ತೊಡಗಿತು. ಈ ಹಿನ್ನೆಲೆಯಲ್ಲಿ ಸುಮಾರು ೧೯೯೪–೨೦೦೮ರವರೆಗಿನ ಅಧ್ಯಯನದ ಆಧಾರದ ಮೇಲೆ ಕಾನ್‌ಫೆಡರೇಷನ್ ಆಫ್ ಇಂಡಿಯನ್ ಇಂಡಸ್ಟ್ರೀಸ್ (ಸಿಐಐ) ಸಂಘಟನೆಯು ತನ್ನ ಸದಸ್ಯ ಉದ್ದಿಮೆಗಳಲ್ಲಿ ಮೀಸಲಾತಿಯ ಬದಲು 'ಸಬಲೀಕರಣ ಕ್ರಿಯಾ ನೀತಿ'ಯನ್ನು ಜಾರಿಗೆ ತರುವುದಾಗಿ ಹೇಳತೊಡಗಿತು. ಆದರೂ ಅದು ಕೇವಲ ಹೇಳಿಕೆಯಾಗಷ್ಟೆ ಉಳಿದಿದೆ.

> ಹಲವಾರು ವರ್ಷಗಳ ಕಾಲ ಸರಪಳಿಯಿಂದ ಬಂಧಿಸಲ್ಪಟ್ಟ ವ್ಯಕ್ತಿಯನ್ನು ಬಿಡಿಸಿದಾಕ್ಷಣ, ಸ್ಪರ್ಧಾ ಕಣದಲ್ಲಿ ನಿಲ್ಲಿಸಿ, ಇನ್ನಿತರೆಲ್ಲರ ಜೊತೆ ಸ್ಪರ್ಧಿಸಲು ನೀನು ಸ್ವತಂತ್ರ ಎಂದು ಹೇಳಿದರೆ, ಆ ವ್ಯಕ್ತಿಯು ಸ್ಪರ್ಧಾ ಕಣದಲ್ಲಿ ಸರಿ ಸಮನಾಗಿ ಸ್ಪರ್ಧಿಸಲು ನೀನು ಅವಕಾಶ ಮಾಡಿಕೊಟ್ಟಂತಾಗುತ್ತದೆಯೇ ? ಗೋಚರ ಮತ್ತು ಅಗೋಚರ ಅಡ್ಡಗೋಡೆಗಳನ್ನು ಉರುಳಿಸಿ ಸಮನಾದ ವೇದಿಕೆಯನ್ನು ಪ್ರತಿಯೊಬ್ಬರಿಗೂ ಒದಗಿಸಲು ಸಬಲೀಕರಣ ನೀತಿಗಳು ಅತ್ಯವಶ್ಯ.
>
> **– ಲಿಂಡನ್ ಜಾನ್ಸನ್**
>
> ಅಮೆರಿಕಾದ ಮಾಜಿ ಅಧ್ಯಕ್ಷ, ೧೯೬೫

ಅಮರ್ತ್ಯ ಸೇನ್ ಅವರು ಅಭಿವೃದ್ಧಿಯ ಪ್ರಕ್ರಿಯೆ ಯಲ್ಲಿ ಪ್ರಮುಖ ವ್ಯತ್ಯಾಸವನ್ನು ಗುರುತಿಸುತ್ತಾರೆ. ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಕೆಲವು ವಿಭಾಗವನ್ನು ಹೊರಗಿಡುವುದು ಅಥವಾ ಬಿಟ್ಟುಬಿಡುವುದನ್ನು 'ಪ್ರತಿಕೂಲ ಹೊರಗಿಡುವಿಕೆ' ಎನ್ನುತ್ತಾರೆ. ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪ್ರತಿಕೂಲ ಷರತ್ತುಗಳ ಆಧಾರದಲ್ಲಿ ಕೆಲವು ವಿಭಾಗವನ್ನು ಒಳಗೊಳ್ಳುವುದನ್ನು 'ಪ್ರತಿಕೂಲ ಒಳಗೊಳ್ಳುವಿಕೆ' ಎನ್ನುತ್ತಾರೆ. ಇವೆರಡೂ ಕೂಡ ಅಂತಹ ಜನವಿಭಾಗಗಳ ಮೇಲೆ ಒಂದೇ ಮಟ್ಟದ ದುಷ್ಪರಿಣಾಮಗಳನ್ನು ಬೀರುತ್ತದೆ. ಇದರ ಜೊತೆಗೆ ಅರ್ಥಶಾಸ್ತ್ರದ ಮುಖ್ಯವಾಹಿನಿಯಲ್ಲೂ ಸಹ 'ಹೊರಗಿಡುವಿಕೆ' ಮತ್ತು 'ತಾರತಮ್ಯ'ಗಳ ಕುರಿತು ವಿವರಣೆಗಳಿದ್ದು, ಅವು ಮಾರುಕಟ್ಟೆ ಮತ್ತು ಮಾರುಕಟ್ಟೆಯೇತರ ತಾರತಮ್ಯಗಳ ಕುರಿತು ಅಧ್ಯಯನ ನಡೆಸಿವೆ.

**ಜಾತಿ ಮತ್ತು ವರ್ಗದ ನಡುವಿನ ಸಮೀಕರಣ**

ಮೇಲ್ಜಾತಿಯವರ ನಡುವೆಯೂ ಬಡಜನರು ಇರುವುದರಿಂದ ಎಲ್ಲಾ ಜಾತಿಗಳ ಬಡವರಿಗೆ ಆರ್ಥಿಕವಾಗಿ ಹಿಂದುಳಿದವರಿಗೆ ಮೀಸಲಾತಿ ನೀಡಿದರೆ ಸಾಕು ಎಂಬ ವಾದವೂ ಇದೆ. ಸಮುದಾಯವೊಂದು ಆರ್ಥಿಕವಾಗಿಯಷ್ಟೇ ಅಲ್ಲ, ಸಾಮಾಜಿಕವಾಗಿಯೂ ಹಿಂದುಳಿಯುವಲ್ಲಿ ಇರುವ ಬಹು ಆಯಾಮಗಳನ್ನು ಅರ್ಥ ಮಾಡಿ ಕೊಳ್ಳಬೇಕಾದರೆ, ಜಾತಿ ಮತ್ತು ವರ್ಗದ ನಡುವೆ ಇರುವ ಸಮೀಕರಣವನ್ನು ತಿಳಿದುಕೊಳ್ಳಬೇಕು.

ಡಾ॥ ಬಿ. ಆರ್. ಅಂಬೇಡ್ಕರ್ ಅವರು ೧೯೨೪ರಲ್ಲಿ ಭಾರತೀಯ ಸಮಾಜದಲ್ಲಿ ಜಾತಿ ಒಂದು ಪ್ರಮುಖ ಪಾತ್ರವನ್ನು ವಹಿಸುತ್ತದೆ ಎಂದಿದ್ದರು. "ಬಡಜನರಲ್ಲಿ ಅಸ್ಪೃಶ್ಯರು ಮತ್ತು ಹಿಂದುಳಿದವರೂ ಸೇರಿಕೊಂಡಿದ್ದಾರೆ. ಕಾರ್ಮಿಕರು ಕಾರ್ಮಿಕರೇ ಆಗಿದ್ದರೂ, ಅವರೂ ವಿಭಜನೆಗೊಂಡು ಪ್ರತ್ಯೇಕಗೊಂಡಿದ್ದಾರೆ. ಕಾರ್ಮಿಕರು ಸಾಮಾನ್ಯವಾಗಿ ಶೋಷಣೆಗೊಳಗಾಗಿದ್ದರೂ, ಹೆಚ್ಚಿನ ಸಂಬಳಕ್ಕಾಗಿ ಹೋರಾಟ ಮಾಡುವ ಅದೇ ಜನ ಐಕ್ಯತೆ, ಭ್ರಾತೃತ್ವವಿಲ್ಲದೆ ಸಾಮಾಜಿಕ ಜೀವನದಲ್ಲಿ ವಿಭಜನೆ ಯಾಗಿದ್ದಾರೆ. ಜಾತಿಗೆ ಭೌತಿಕ ನೆಲೆಗಟ್ಟು ಮಾತ್ರವಲ್ಲ, ಸೈದ್ಧಾಂತಿಕ ನೆಲೆಯೂ ಇದೆ" ಎಂದಿದ್ದರು. "ಮೀಸಲಾತಿ ವಿರುದ್ಧದ ಹಿಂದಿರುವುದು ಸನಾತನ

ಮನಃಸ್ಥಿತಿ. ಮೀಸಲಾತಿ ವಿರುದ್ಧದ ಅನಿಸಿಕೆಗಳೆಲ್ಲವೂ ಭಾರತೀಯ ಸಮಾಜ ಕೆಳಜಾತಿಗಳ ಮೇಲೆ ಹೊಂದಿರುವ ಪೂರ್ವಗ್ರಹದಿಂದ ಮೂಡಿರುವಂತಹವು. ದಲಿತ ಸಮುದಾಯವನ್ನು ತಾರತಮ್ಯ ಮುಖೇನ ಸಾಮಾಜಿಕವಾಗಿ ಹೊರದಬ್ಬುವ ಸರ್ವವ್ಯಾಪಿ ಗುಣ ಹಿಂದೂಧರ್ಮದಲ್ಲಿ ಅಂತರ್ಗತವಾಗಿದೆ" ಎಂದಿದ್ದರು.

ಖ್ಯಾತ ಇತಿಹಾಸಕಾರರಾದ ಪ್ರೊ॥ ಇರ್ಫಾನ್ ಹಬೀಬ್ ಅವರು ಹೇಳುವಂತೆ, "ಬಂಡವಾಳಶಾಹಿ–ಪೂರ್ವ ಆರ್ಥಿಕ ತಳಪಾಯದ ಮೇಲೆ ನಿರ್ಮಾಣವಾಗಿರುವ ಗಟ್ಟಿ ಕಟ್ಟಡವೇ ಜಾತಿವ್ಯವಸ್ಥೆಯಾಗಿದ್ದು, ಇದು ಆಳವಾದ ಅಸಮಾನತೆಯಲ್ಲಿ ಬೇರು ಬಿಟ್ಟಿದೆ. ಇಂದಿಗೂ ಭಾರತದಲ್ಲಿ ಜಾತಿವ್ಯವಸ್ಥೆ ತನ್ನ ಕಬಂದಬಾಹುಗಳನ್ನು ಚಾಚಿದ್ದು, ಪಾಳೇಗಾರಿ ಗುಣಲಕ್ಷಣಗಳು ಗಟ್ಟಿಯಾಗಿ ಬೇರೂರಿವೆ. ಗ್ರಾಮೀಣ ಭಾಗದಲ್ಲಿ ಭೂಹೀನ ಕೂಲಿಕಾರರಲ್ಲಿ ಶೇ. ೮೦ರಷ್ಟು ಮಂದಿ ದಲಿತರೇ." ಈ ಹಿನ್ನೆಲೆಯಲ್ಲಿ ಜಾತಿ ನಿರ್ಮೂಲನೆ ಹೋರಾಟಗಳು ಮತ್ತು ಆರ್ಥಿಕ ಹೋರಾಟಗಳು ಒಂದಕ್ಕೊಂದು ಬೆಸೆದುಕೊಂಡಂತಿರಬೇಕು."

## ವಿವಿಧ ಹಂತದಲ್ಲಿರುವ ಜಾತಿ ತಾರತಮ್ಯಗಳು

**ಉದ್ಯೋಗ ನೇಮಕಾತಿ ಹಂತ :** ನಮ್ಮ ದೇಶದಲ್ಲಿ ಜಾತಿ ವ್ಯವಸ್ಥೆಯು ವಿವಿಧ ಹಂತಗಳಲ್ಲಿ ತಾರತಮ್ಯಗಳನ್ನು ಹುದುಗಿಸಿಟ್ಟಿದೆ. ಒಂದು ಅಧ್ಯಯನದ ಪ್ರಕಾರ, ಉದ್ಯೋಗ ಮಾರುಕಟ್ಟೆಯಲ್ಲಿ ಮೇಲ್ಜಾತಿಯವರಿಗೆ ಹೋಲಿಸಿದರೆ ಸಂದರ್ಶನಕ್ಕೆ ಕರೆ ಬರುವ ಸಂಭವನೀಯತೆ ದಲಿತರಿಗೆ ಶೇ. ೬೫ರಷ್ಟು ಕಡಿಮೆ, ಮುಸ್ಲಿಮರಿಗೆ ಶೇ. ೩೫ರಷ್ಟು ಕಡಿಮೆ. ಮೇಲ್ಜಾತಿಯವರು ಜಾತಿಸಮಸ್ಯೆಯಿಂದ ರಕ್ಷಣೆ ಹೊಂದಿರುತ್ತಾರೆ.

## ಆದಾಯ ಗಳಿಕೆಯಲ್ಲಿ ಜಾತಿ ತಾರತಮ್ಯಗಳು

ಎಸ್. ಮಹದೇಶ್ವರನ್ ಮತ್ತು ಪೌಲ್ ಅಟ್ವೆಲ್ ಅವರ ಅಧ್ಯಯನದ ಪ್ರಕಾರ ಮೇಲ್ಜಾತಿ ಉದ್ಯೋಗಿಗಳಿಗೆ ಹೋಲಿಸಿದಾಗ ಒಂದೇ ಉದ್ದಿಮೆಯಲ್ಲಿ, ಸಮಾನ ಕೆಲಸ ಮತ್ತು ಪರಿಸ್ಥಿತಿಗಳಲ್ಲಿ ಕೆಲಸ ಮಾಡುತ್ತಿದ್ದ ಪರಿಶಿಷ್ಟ ಜಾತಿಯವರು ೧೯೮೩ರಲ್ಲಿ ಶೇ. ೫ರಷ್ಟು ಕಡಿಮೆ ಆದಾಯ ಪಡೆಯುತ್ತಿದ್ದರು, ೧೯೯೩–೯೪ರಲ್ಲಿ ಶೇ. ೮.೪ರಷ್ಟು ಕಡಿಮೆ, ಮತ್ತು ೧೯೯೯–೨೦೦೦ರಲ್ಲಿ ಶೇ. ೮.೯ರಷ್ಟು ಕಡಿಮೆ ಪಡೆದರೆ, ಇತರೆ ಹಿಂದುಳಿದ ವರ್ಗದವರು ೧೯೯೯–೨೦೦೦ರಲ್ಲಿ ಶೇ. ೧೦.೯ರಷ್ಟು ಕಡಿಮೆ ಆದಾಯ ಪಡೆಯುತ್ತಿದ್ದರು. ಜಾತಿ ಮತ್ತು ಶಿಕ್ಷಣಗಳ ತುಲನೆ ಮಾಡಲು ಆದಾಯ ಗಳಿಕೆಯ ಸರಾಸರಿ ದರವು ಹೆಚ್ಚೆಚ್ಚು ಶಿಕ್ಷಣ ಇದ್ದಂತೆ ಹೆಚ್ಚಿನ ಪ್ರಮಾಣದಲ್ಲಿದೆ. ಕೆಲಸ ಗಿಟ್ಟಿಸುವ ಹಂತಕ್ಕಿಂತಲೂ ಹೆಚ್ಚಿನ ತಾರತಮ್ಯವು ವೇತನ ನೀಡುವ ಹಂತದಲ್ಲಿರುವುದನ್ನು ಈ ಅಧ್ಯಯನಗಳು ಸಾಬೀತುಪಡಿಸಿವೆ.

ಉದ್ಯೋಗ ನೇಮಕಾತಿಯಲ್ಲಿ ಪಾರದರ್ಶಕತೆ ಇರಬೇಕೆಂದರೆ ದಿನಪತ್ರಿಕೆಗಳ ಮೂಲಕ ಜಾಹೀರಾತು ನೀಡಿ ಕೆಲಸಕ್ಕೆ ತೆಗೆದುಕೊಳ್ಳಬೇಕು. ಆದರೆ ಅಪಾರದರ್ಶಕ ನೀತಿಯೇ ವ್ಯಾಪಕತೆ ಪಡೆದುಕೊಂಡಿದೆ. ಇಂದು ಕ್ಯಾಂಪಸ್ ಸಂದರ್ಶನ, ವೆಬ್‌ಸೈಟ್‌ಗಳು ಮತ್ತು ಏಜೆನ್ಸಿಗಳ ಮೂಲಕ ನೇಮಕಾತಿ ನಡೆಯುತ್ತಿದ್ದು, ಇದು ಸಂಪೂರ್ಣ ಅಪಾರದರ್ಶಕವಾಗಿರುವುದರಿಂದ ಸಹಜವಾಗಿ ತಾರತಮ್ಯತೆಯಿಂದ ಕೂಡಿದೆ.

ರಾಷ್ಟ್ರೀಯ ಉದ್ಯೋಗ ವಿನಿಮಯ ವ್ಯವಸ್ಥೆಯನ್ನು ಖಾಸಗಿ ಉದ್ದಿಮೆಗಳು ಬಳಸುವುದನ್ನು ಕೈಬಿಡುತ್ತಾ ಬಂದಿವೆ. ೧೯೪೯–೧೯೫೩ರ ನಡುವೆ ಶೇ. ೫೦–೮೫ರಷ್ಟು ಖಾಲಿ ಹುದ್ದೆಗಳನ್ನು ಉದ್ಯೋಗ ವಿನಿಮಯ ಕಛೇರಿಗಳಿಂದಲೇ ತುಂಬಲಾಗಿದ್ದರೆ, ೧೯೫೩–೧೯೬೦ರ ಅವಧಿಯಲ್ಲಿ ಶೇ. ೬೫ರಷ್ಟು ಖಾಲಿ ಹುದ್ದೆಗಳನ್ನು ಈ ಮೂಲಕ ತುಂಬಲಾಗಿದ್ದು, ೧೯೬೦–೬೮ರ ಅವಧಿಯಲ್ಲಿ ಇದು ಶೇ. ೬೦ಕ್ಕೆ ಇಳಿದಿದೆ. ೧೯೮೦ರ ಅವಧಿಯಲ್ಲಿ ಶೇ. ೧೦ಕ್ಕೆ ಇಳಿದಿದ್ದು, ೨೦೧೦ರ ವೇಳೆಗೆ ಅದರ ಅಸ್ತಿತ್ವವೇ ಇಲ್ಲದಂತಾಗಿದೆ. ಹೀಗಾಗಿ ಸರ್ಕಾರದ ಪಾರದರ್ಶಕ ವ್ಯವಸ್ಥೆಯಂತಿದ್ದ ಉದ್ಯೋಗ ವಿನಿಮಯ ವ್ಯವಸ್ಥೆಯ ಬದಲಿಗೆ ಖಾಸಗಿ ಕಂಪನಿಗಳು ನೇಮಕಾತಿಗಾಗಿ ತಾವೇ ಪ್ರತ್ಯೇಕ ವಿಧಾನ ಅಳವಡಿಸಿಕೊಂಡಿದ್ದು, ಅದು ಅಪಾರದರ್ಶಕತೆಗೆ ಎಡೆಮಾಡಿಕೊಟ್ಟಿದೆ. ಮೇಲ್ಜಾತಿಯವರಂತೆಯೇ ದಲಿತರು ಒಂದೇ ಶೈಕ್ಷಣಿಕ ಅರ್ಹತೆ ಹೊಂದಿರುವ ಸಂದರ್ಭದಲ್ಲಿ ಕೂಡ ಉದ್ಯೋಗ ಮಾರುಕಟ್ಟೆಯ ಅಪಾರದರ್ಶಕ ನೀತಿಗಳು ಜಾತಿ ತಾರತಮ್ಯಕ್ಕೆ ಕಾರಣವಾಗಿವೆ. ಆದ್ದರಿಂದ ಹೆಚ್ಚುವರಿ ರಕ್ಷಣೆ ನೀಡುವ ನೀತಿಯನ್ನು ರೂಪಿಸುವ ಅವಶ್ಯಕತೆ ಇದೆ.

**ಮಾರುಕಟ್ಟೆಯಲ್ಲಿ ತಾರತಮ್ಯ :** ದಲಿತನೊಬ್ಬ ಕಿರಾಣಿ ಅಂಗಡಿಯನ್ನೋ ಹೋಟೆಲನ್ನೋ ತೆರೆದರೆ ಗ್ರಾಹಕರು ಜಾತಿ ಕಾರಣಕ್ಕಾಗಿಯೇ ಅಲ್ಲಿ ವ್ಯವಹರಿಸುವುದಿಲ್ಲ. ಅದೇ ಐಯ್ಯಂಗಾರಿಯೊಬ್ಬ ಬೇಕರಿಯನ್ನೋ ಹೋಟೆಲನ್ನೋ ತೆರೆದರೆ, ಅಲ್ಲಿ ಜಾತಿಯ ಅನುಕೂಲತೆಯಿಂದ ವ್ಯವಹಾರ ನಿರಾತಂಕವಾಗಿ ನಡೆಯುತ್ತದೆ. ಈ ಹಿನ್ನೆಲೆಯಲ್ಲಿ, ತಾರತಮ್ಯಗಳು ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯಗಳಲ್ಲಿಯೂ ಇರುವುದನ್ನು ಅರ್ಥ ಮಾಡಿಕೊಳ್ಳಬೇಕು.

## ಜಾತಿವಾರು ಉದ್ದಿಮೆಗಳು ಮತ್ತು ಉದ್ಯೋಗಗಳ ಪಾಲು

ಕೇಂದ್ರೀಯ ಅಂಕಿಅಂಶ ಸಂಸ್ಥೆಯು ಆರ್ಥಿಕ ಸಮೀಕ್ಷೆ ಮೂಲಕ ಸಂಗ್ರಹಿಸಿರುವ ಅಂಕಿಅಂಶಗಳ ಆಧಾರದ ಮೇಲೆ ೨೦೧೩ರಲ್ಲಿ ಜಾತಿವಾರು ಉದ್ದಿಮೆಗಳ ಮಾಲೀಕರು ಮತ್ತು ಉದ್ಯೋಗಗಳ ಹಂಚಿಕೆ ಕುರಿತಂತೆ ಅಧ್ಯಯನವೊಂದನ್ನು ನಡೆಸಲಾಗಿದೆ. ಈ ಅಧ್ಯಯನದಲ್ಲಿ ೨೦೦೫ರ ಆರ್ಥಿಕ ಸಮೀಕ್ಷೆಯಲ್ಲಿನ ಎಲ್ಲ ಕೃಷಿಯೇತರ ಉದ್ದಿಮೆಗಳನ್ನು ಒಳಗೊಳ್ಳಲಾಗಿದೆ. ಇವುಗಳಲ್ಲಿ ಬಹುತೇಕ ಉದ್ದಿಮೆಗಳು ಕೇವಲ ಒಬ್ಬನೇ/ಳೇ ಉದ್ಯೋಗಿಯನ್ನು ಹೊಂದಿರುವ ಅತಿ ಸಣ್ಣ ಉದ್ದಿಮೆಗಳು. ೨೦೦೧ರ ಜನಗಣತಿ ಪ್ರಕಾರ ಪರಿಶಿಷ್ಟ ಜಾತಿಯವರು ಶೇ. ೧೬.೪ರಷ್ಟಿದ್ದರೆ, ಅವರು ಶೇ. ೯.೮ರಷ್ಟು ಮಾತ್ರವೇ ಮಾಲೀಕತ್ವವನ್ನು ಹೊಂದಿದ್ದು, ಅವರ ಮಾಲೀಕತ್ವದ ಉದ್ದಿಮೆಗಳಲ್ಲಿ ಕೇವಲ ಶೇ. ೮.೧ರಷ್ಟು ಉದ್ಯೋಗಿಗಳು ಮಾತ್ರವೇ ಇದ್ದಾರೆ. ಮೇಲ್ಜಾತಿಯವರು ತಮ್ಮ ಜನಸಂಖ್ಯೆಗಿಂತಲೂ ಹೆಚ್ಚಿನ ಪಾಲು ಉದ್ದಿಮೆಯಲ್ಲಿ ಮಾಲೀಕತ್ವ ಹೊಂದಿದ್ದು, ಅಲ್ಲಿ ಕೆಲಸ ಮಾಡುವ ಕೆಲಸಗಾರರ ಸಂಖ್ಯೆಯೂ ಹೆಚ್ಚಿನ ಪ್ರಮಾಣದಲ್ಲಿದ್ದರೆ, ದಲಿತರ ಮಾಲೀಕತ್ವದ ಉದ್ದಿಮೆಗಳು ಮತ್ತು ಅವು ಹೊಂದಿರುವ ಉದ್ಯೋಗಿಗಳ ಪ್ರಮಾಣ ಅವರ ಜನಸಂಖ್ಯೆಗಿಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಕೋಷ್ಟಕ ೧.೦ ತೋರಿಸಿಕೊಡುತ್ತದೆ :

**ಕೋಷ್ಟಕ ೧.೦ : ಜಾತಿವಾರು ಗುಂಪುಗಳು ಹೊಂದಿರುವ ಉದ್ದಿಮೆಗಳು ಮತ್ತು ಉದ್ಯೋಗಗಳ ಪಾಲು, ೨೦೦೫**

| ಉದ್ದಿಮೆಯ ಮಾಲೀಕರ ಜಾತಿ ಗುಂಪು | | | | | |
|---|---|---|---|---|---|
| | ಸಾಮಾನ್ಯ (%) | ಒಬಿಸಿ (%) | ಎಸ್‌ಸಿ (%) | ಎಸ್‌ಟಿ (%) | ಖಾಸಗಿ ಉದ್ದಿಮೆಗಳ ಸಂಖ್ಯೆ |
| **ಜನಸಂಖ್ಯೆಯ ಪಾಲು** | ೩೩.೨ | ೪೨.೭ | ೧೬.೪ | ೭.೭ | |
| ಗ್ರಾಮೀಣ | | | ೧೮.೨ | ೯.೭ | |
| ನಗರ | | | ೧೧.೭ | ೨.೨ | |
| **ಉದ್ದಿಮೆ ಮಾಲೀಕತ್ವದ ಪಾಲು ೨೦೦೫** | **೪೨.೯** | **೪೩.೫** | **೯.೮** | **೩.೭** | **೩೫,೯೫೧,೬೮೬** |
| ಗ್ರಾಮೀಣ | ೩೬.೯ | ೪೬.೮ | ೧೧.೫ | ೪.೮ | ೨೧,೮೯೦,೫೫೨ |
| ನಗರ | ೫೨.೩ | ೩೮.೪ | ೭.೩ | ೨.೦ | ೧೪,೦೬೧,೧೩೪ |
| **ಉದ್ಯೋಗದ ಪಾಲು ೨೦೦೫** | **೪೮.೫** | **೪೦.೦** | **೮.೧** | **೩.೪** | **೭೪,೭೫೪,೯೭೮** |
| ಗ್ರಾಮೀಣ | ೪೦.೩ | ೪೫.೦ | ೧೦.೧ | ೪.೭ | ೩೪,೧೭೭,೯೬೫ |
| ನಗರ | ೫೮.೨ | ೩೪.೧ | ೫.೮ | ೧.೯ | ೪೦,೫೭೭,೦೧೩ |

೬೬ನೇ ಸುತ್ತಿನ ಎನ್‌ಎಸ್‌ಎಸ್ ಸಮೀಕ್ಷೆ, ಮೂಲ : ಆರ್ಥಿಕ ಸಮೀಕ್ಷೆ, ೨೦೦೫, ಜನಗಣತಿ ೨೦೦೧ ಮತ್ತು ೨೦೦೯–೧೦.
ಹಾಗೂ ಇಪಿಡಬ್ಲ್ಯೂ ಫೆಬ್ರವರಿ ೯, ೨೦೧೩.

ಇದೇ ಸಂದರ್ಭದಲ್ಲಿ, ದಲಿತರಲ್ಲಿ ಇತ್ತೀಚೆಗೆ ಬೆಳೆದುಬಂದಿರುವ ಮಿಲಿಯನೇರುಗಳ ವಿಭಾಗವು ಇಡೀ ದಲಿತ ಸಮುದಾಯದ ಪ್ರತಿನಿಧಿಯಾಗಿ ಮೂಡಿಬಂದಿಲ್ಲದಿರುವುದನ್ನು ಅಧ್ಯಯನ ದಾಖಲಿಸಿದೆ.

## ಕಾರ್ಪೊರೇಟ್ ಕಂಪನಿಗಳ ಮಾಲೀಕರ ಜಾತಿ ಹಿನ್ನೆಲೆ

೨೦೧೦ರಲ್ಲಿ ಸುಮಾರು ೪,೦೦೦ ಭಾರತೀಯ ಕಂಪನಿಗಳ ಪೈಕಿ ಟಾಪ್ ೧೦೦೦ ಕಂಪನಿಗಳಲ್ಲಿ ಅಧ್ಯಯನ ನಡೆಸಲಾಯಿತು. ಟಾಪ್ ೧೦೦೦ ಕಂಪನಿಗಳು

ಮಾರುಕಟ್ಟೆ ಮೌಲ್ಯದಲ್ಲಿ ಸುಮಾರು ಶೇ. ೮೦ರಷ್ಟು ಪಾಲು ಹೊಂದಿರುವಂತಹವು. ಈ ಅಧ್ಯಯನದ ಪ್ರಕಾರ ಕಂಪನಿಯ ಆಡಳಿತ ಮಂಡಳಿ ಸದಸ್ಯರಲ್ಲಿ ಮೇಲ್ಜಾತಿಯವರು ಶೇ. ೯೨.೬ರಷ್ಟಿದ್ದರೆ, ದಲಿತರು ಕೇವಲ ಶೇ. ೩.೫ರಷ್ಟಿದ್ದಾರೆ (ಕೋಷ್ಟಕ ೨.೦). ಜಾತಿ ವೈವಿಧ್ಯತೆಯಿಲ್ಲದ, ಮೇಲ್ಜಾತಿಯವರೇ ಹೆಚ್ಚಿನ ಪ್ರಮಾಣದಲ್ಲಿ ಆಡಳಿತದ ಚುಕ್ಕಾಣಿ ಹಿಡಿದಿರುವ ಖಾಸಗಿ ಕಂಪನಿಗಳಲ್ಲಿ, ಉದ್ಯೋಗ ನೇಮಕಾತಿ ಸಂದರ್ಭದಲ್ಲಿ ಸಹಜವಾಗಿ ಜಾತಿ ಅಡ್ಡ ಬರುವುದಿಲ್ಲ ಎಂದು ಹೇಳುವುದು ಅಸಾಧ್ಯ.

**ಕೋಷ್ಟಕ ೨.೦ : ಭಾರತೀಯ ಕಂಪನಿಯ ಆಡಳಿತ ಮಂಡಳಿ ಸದಸ್ಯರ ಜಾತಿವಾರು ಹಂಚಿಕೆ (೨೦೧೦)**

| ಕ್ರ.ಸಂ. | ಜಾತಿ | ಸಂಖ್ಯೆಗಳು | ಶೇಕಡಾವಾರು |
|---|---|---|---|
| ೧ | ಮೇಲ್ಜಾತಿಯವರು | | |
| | ಅ) ಬ್ರಾಹ್ಮಣರು | ೪,೦೩೭ | ೪೪.೬ |
| | ಆ) ವೈಶ್ಯರು | ೪,೧೬೭ | ೪೬.೦ |
| | ಇ) ಕ್ಷತ್ರಿಯರು | ೪೩ | ೦.೫ |
| | ಈ) ಇತರರು | ೧೩೭ | ೧.೫ |
| | ಒಟ್ಟು (ಎ) | ೮,೩೮೭ | ೯೨.೬ |
| ೨ | ಇತರೆ ಹಿಂದುಳಿದ ವರ್ಗ (ಬಿ) | ೩೪೬ | ೩.೮ |
| ೩ | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಸಿ) | ೩೧೯ | ೩.೫ |
| | **ಒಟ್ಟು (ಎ+ಬಿ+ಸಿ)** | **೯,೦೫೨** | **೧೦೦.೦** |

*(ಮೂಲ : ಇಪಿಡಬ್ಲ್ಯೂ ಆಗಸ್ಟ್ ೧೧, ೨೦೧೨)*

**ಮುಕ್ತ ಮಾರುಕಟ್ಟೆ V/s ಪ್ರಭುತ್ವದ ಮಧ್ಯಪ್ರವೇಶ**

ಮುಕ್ತ ಮಾರುಕಟ್ಟೆಯಲ್ಲಿ ಸರಕುಗಳೇ ದೈವಗಳಾಗಿದ್ದು, ಜಾತಿ ತಾರತಮ್ಯ ಆಚರಿಸುವ ಕಂಪನಿಗಳು / ಉದ್ಯೋಗಿಗಳನ್ನು ಮಾರುಕಟ್ಟೆಯೇ ಅಂತಹ ಕಂಪನಿಗಳ ಲಾಭ ಕುಸಿಯುವ ಮೂಲಕ ಶಿಕ್ಷೆಗೆ ಗುರಿಪಡಿಸುತ್ತದೆ ಎಂದು ಮುಕ್ತ ಮಾರುಕಟ್ಟೆ ಹರಿಕಾರರು ಹೇಳುತ್ತಾರೆ ! ಆದರೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಕೂಡ ಮಾರುಕಟ್ಟೆಯು ಪರಿಪೂರ್ಣ ಸ್ಪರ್ಧಾತ್ಮಕ ಮಾರುಕಟ್ಟೆಯೇನೂ ಆಗಿರುವುದಿಲ್ಲ. ಅಲ್ಲಿ ಕೂಡ ಕಂಪನಿಗಳ ಯಜಮಾನಿಕೆ ಅಗೋಚರವೂ ಬೃಹತ್ ಪ್ರಮಾಣದಲ್ಲಿಯೂ ಇರುತ್ತದೆ. ಅಭಿವೃದ್ಧಿ ಹೊಂದಿದ ದೇಶಗಳ ಶ್ರಮ ಮಾರುಕಟ್ಟೆಯಲ್ಲಿರುವ ತಾರತಮ್ಯಗಳು ಇವೆಲ್ಲ ಹಸಿ ಹಸಿ ಸುಳ್ಳುಗಳು ಎಂಬುದನ್ನು ತೋರಿಸಿವೆ. ಪ್ರಭುತ್ವ ಮಧ್ಯಪ್ರವೇಶದ ನೀತಿಗಳು ಬಹುಮುಖ್ಯ ಎನ್ನುವುದು ಎಲ್ಲರಿಗೂ ತಿಳಿದಿರುವ ಸರಳ ವಿಚಾರ.

ದೇಶದ ಕಾರ್ಪೊರೇಟ್ ನಾಯಕರು ಮೀಸಲಾತಿಯಿಂದ ಪ್ರತಿಭೆ ಮತ್ತು ಮೆರಿಟ್‌ಗಳಿಗೆ ಹಿನ್ನಡೆಯಾಗುತ್ತದೆ, ಅದರಿಂದ ಉತ್ಪಾದಕತೆ, ಸೃಜನಶೀಲತೆ, ಸಂಶೋಧನೆ ಮತ್ತು ಅಭಿವೃದ್ಧಿ ಎಲ್ಲಕ್ಕೂ ಹಾನಿಯಾಗುತ್ತದೆ ಎಂದು ಪ್ರಬಲವಾಗಿ ವಾದಿಸುತ್ತಾರೆ. ಆದರೆ ಮೀಸಲಾತಿ ನೀತಿಯನ್ನು ಅಳವಡಿಸಿಕೊಂಡಿರುವ ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ಇಸ್ರೋ), ಫಾರ್ಚೂನ್ ೫೦೦ ಕಂಪನಿಗಳ ಪಟ್ಟಿಯಲ್ಲಿರುವ ಒಎನ್‌ಜಿಸಿ, ಜೀವ ವಿಮಾ ನಿಗಮ, ಎಸ್‌ಬಿಐ ಇತ್ಯಾದಿ ಸಾರ್ವಜನಿಕ ಉದ್ದಿಮೆಗಳು ಖಾಸಗಿ ಕಂಪನಿಗಳಿಗಿಂತ ದೊಡ್ಡ ಮಟ್ಟದಲ್ಲಿ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಬೆಳೆಯುತ್ತಿವೆ. ಹಾಗಾಗಿ ಕಾರ್ಪೊರೇಟ್ ಮಾಲೀಕರ ವಾದ ಪೊಳ್ಳು ಎಂಬುದು ತಿಳಿಯುತ್ತದೆ.

ಅಮೆರಿಕಾದ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯವು ವಿಶ್ವದಲ್ಲೇ ಮುಂಚೂಣಿಯಲ್ಲಿರುವ ವಿಶ್ವವಿದ್ಯಾನಿಲಯಗಳಲ್ಲೊಂದು. ಇಲ್ಲಿ ಕೂಡ ಕರಿಯರು, ಅಂಗವಿಕಲರು ಇತ್ಯಾದಿ ಸಾಮಾಜಿಕ ಗುಂಪುಗಳಿಗೆ ಸಬಲೀಕರಣ ನೀತಿಗಳನ್ನು

## ಪ್ರೀತಿ






**ಯಾ**ರಬ್
ಪ್ರೀತಿ ಬೇಕೆಂದು ನಿನ್ನಲ್ಲಿ
ಬೇಡಿದೆ ಕೊಡಲಿಲ್ಲ
ಪ್ರೀತಿಸುವವರನು ತಲಾಷ್
ಮಾಡಿಸಲು ಹೇಳಿದೆ ಹುಡುಕಿಕೊಡಲಿಲ್ಲ !

ಯಾರಬ್
ಅಂದು ನೀಡದ ಪ್ರೀತಿ
ಇಂದೇಕೆ ಕೊಡುತ್ತಿರುವೆ
ಅಂದು ಪ್ರೀತಿಸುವವರನು ಹುಡುಕದೆ
ಇಂದೇಕೆ ಹುಡುಕಿಸಿಕೊಟ್ಟೆ ?

ಯಾರಬ್
ಗೆದ್ದಿಲು ಹತ್ತಿದ ಮರದಲ್ಲೂ
ಹೊಸ ಕವಿತೆ ಹುಟ್ಟಿದೆ
ಕೋಗಿಲೆ-ಗಿಳಿ-ಪಾರಿವಾಳಗಳೂ
ದಸ್ತೂರ ಹಾಕಿವೆ !

ಯಾರಬ್
ಬತ್ತೀಸ್‌ರಾಗ ಬಲ್ಲವ ನೀನು
ಪಲ್ಲವಿ ನೀನು ಹಾಡು
ಅನು ಪಲ್ಲವಿ
ನಾನು ಹಾಡುವೆ !

ಯಾರಬ್
ನನ್ನೆದೆಯ ಶೃತಿ
ಅವಳು ಮೀಟಲಿ
ಅವಳ ಅಂತರಂಗದ
ಮೃದಂಗ ನಾ ನುಡಿಸುವೆ !

ಯಾರಬ್
ನಾ ಬರೆದ ಕವಿತೆ
ಓದಿದವಳು ಅವಳೊಬ್ಬಳೆ
ಒಲವ ಸಾಗರದಲ್ಲಿ
ಮಿಂದವಳೂ ಅವಳೇ !

ಯಾರಬ್
ಹರಿದ ವೀಣೆಯ
ತಂತಿ ಬೆಸೆದು
ಒಡಲ ದನಿ ಆಲಿಸಿದವಳೂ
ಅವಳೇ !

ಯಾರಬ್
ನೀನು ಆಡಿಸಿದಂತೆ ಆಡುವೆ
ಅವಳು ಹಾಡಿದಂತೆ ಹಾಡುವೆ
ಜಗದ ರಂಗದಲ್ಲಿ
ಲಯ-ತಾಳ ತಪ್ಪದಂತೆ !

ಯಾರಬ್
ಶಿವನ ಕೈಯಲ್ಲಿನ ಡಮರುಗ
ಅಲ್ಲಮನ ಮದ್ದಳೆ
ವಾಗ್ದೇವಿಯ ವೀಣೆ
ಮಕರಂದ ಹೀರುವ ಜೇನಾಗುವೆ !

**ಎ. ಎಸ್. ಮಕಾನದಾರ**
ನಿರಂತರ ಪ್ರಕಾಶನ, ಗಾಂಧಿನಗರ
೫ನೇ ಅಡ್ಡರಸ್ತೆ
ಲೋಯಲಾ ಕಾನ್ವೆಂಟ್ ಹಿಂಭಾಗ
ಬೆಟಗೇರಿ – ಗದಗ – ೫೮೨ ೧೦೨

ಅಳವಡಿಸಿಕೊಳ್ಳಲಾಗಿದೆ. ಆದರೆ ನಮ್ಮ ಅಗ್ರಮಾನ್ಯ ಐಐಟಿಗಳು ಗುಣಮಟ್ಟದ ಪಟ್ಟಿಯಲ್ಲಿ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯದ ಹತ್ತಿರ ಕೂಡ ಇಲ್ಲದಿದ್ದರೂ ಮೀಸಲಾತಿಯಿಂದ ಐಐಟಿಗಳ ಗುಣಮಟ್ಟಕ್ಕೆ ಹಿನ್ನಡೆಯಾಗುತ್ತದೆಂಬ ಢೋಂಗಿ ವಾದವನ್ನು ಹೂಡಲಾಗುತ್ತದೆ.

**ಹಲವು ದೇಶಗಳಲ್ಲಿ ಮೀಸಲಾತಿ**

ಜನಾಂಗ, ಧರ್ಮ, ಬುಡಕಟ್ಟು, ಸಾಮಾಜಿಕ ಹಿನ್ನೆಲೆಯ ಆಧಾರದಲ್ಲಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ತಾರತಮ್ಯಗಳಿವೆ. ಬಂಡವಾಳ ಸ್ಥಿರಾಸ್ತಿ, ಉದ್ಯೋಗ, ಶಿಕ್ಷಣ, ರಾಜಕೀಯದಲ್ಲಿ ಪಾಲ್ಗೊಳ್ಳುವಿಕೆ ಮತ್ತು ಇತರೆ ವಲಯಗಳಲ್ಲಿ ಅಸಮತೋಲನವನ್ನು ಸರಿಪಡಿಸಲು ಹಲವು ದೇಶಗಳು ಮೀಸಲಾತಿ, 'ಸಕರಾತ್ಮಕ ಕ್ರಿಯಾ ನೀತಿ', ಸಮಾನ ಅವಕಾಶ, ಅಥವಾ ಗುಣಾತ್ಮಕ ಕಾರ್ಯಕ್ರಮಗಳನ್ನು ತಾರತಮ್ಯಕ್ಕೆ ಒಳಗಾಗಿರುವ ಜನವಿಭಾಗಕ್ಕೆ ಹಮ್ಮಿಕೊಂಡಿವೆ. ಇದು ಸಾಮಾನ್ಯ ಬಡವರಿಗೆ ನೀಡುವ ಸವಲತ್ತಿಗಿಂತ ಹೆಚ್ಚುವರಿಯಾಗಿ ನೀಡುವುದಾಗಿದೆ. ಅಮೆರಿಕಾ, ಬ್ರಿಟನ್, ಐರ್ಲೆಂಡ್ ಮತ್ತು ಯುಗೋಸ್ಲಾವಿಯಾ ಮಾತ್ರವಲ್ಲ ಲ್ಯಾಟೀನ್ ಅಮೆರಿಕಾದ ಬ್ರೆಝಿಲ್, ಬೊಲಿವಿಯಾ, ಪೆರು, ಆಫ್ರಿಕಾದ ಲೈಬೀರಿಯಾ, ಸುಡಾನ್, ದಕ್ಷಿಣ ಆಫ್ರಿಕಾ ಮತ್ತು ಏಷ್ಯಾದಲ್ಲಿ ಮಲೇಷಿಯಾ, ಪಾಕಿಸ್ತಾನ, ಚೀನಾ, ಜಪಾನ್ ಹಾಗೂ ಭಾರತ ಇದಕ್ಕೆ ಉದಾಹರಣೆಗಳು. ಹಲವು ದೇಶಗಳಲ್ಲಿ ಸಾರ್ವಜನಿಕ ರಂಗ ಮತ್ತು ಖಾಸಗಿ ರಂಗ ಇವೆರಡರಲ್ಲೂ ಮೀಸಲಾತಿ ನೀಡಲಾಗುತ್ತಿದೆ. ಆದರೆ ಭಾರತದಲ್ಲಿ ಆರಂಭದಿಂದಲೂ ಖಾಸಗಿ ರಂಗದಲ್ಲಿ ಮಾತ್ರ ಮೀಸಲಾತಿ ಇಲ್ಲ.

**ಬಂಡವಾಳಶಾಹಿ ಆರ್ಥಿಕ ಸಿದ್ಧಾಂತ**ದ ಪ್ರಕಾರ ತಾರತಮ್ಯದ ದುಷ್ಪರಿಣಾಮಗಳೆಂದರೆ : ಅದು ಆರ್ಥಿಕ ಬೆಳವಣಿಗೆಗೆ ತೊಡಕುಂಟುಮಾಡುತ್ತದೆ, ಆದಾಯ ಕಡಿತ, ಅಸಮಾನತೆ ಉಂಟಾಗುತ್ತದೆ ಮತ್ತು ಸಮಾನ ಅವಕಾಶಗಳನ್ನು ನಿರಾಕರಿಸುವುದರಿಂದ ವಿವಿಧ ಸಾಮಾಜಿಕ ಗುಂಪುಗಳ ನಡುವೆ ಘರ್ಷಣೆ, ಕಲಹಗಳನ್ನು ಉಂಟುಮಾಡುತ್ತದೆ.

ಲಭ್ಯವಿರುವ ಮಾನವ ಸಂಪನ್ಮೂಲವನ್ನು ಪೂರ್ಣ ಪ್ರಮಾಣದಲ್ಲಿ ಹಂಚಿಕೆ ಮಾಡಿ ಆರ್ಥಿಕ ತಾರತಮ್ಯದಿಂದಾಗಿ ಬಳಸಿಕೊಳ್ಳದ ಕಾರಣ ಕಾರ್ಯಕ್ಷಮತೆ ಕುಂಠಿತಗೊಂಡು ಬೆಳವಣಿಗೆಯು ಕುಸಿಯುತ್ತದೆ. ಜಾತಿ ಗುಂಪುಗಳ ನಡುವೆ ಶ್ರಮ ಮತ್ತು ಬಂಡವಾಳದ ಚಲನೆಗೆ ನಿರ್ಬಂಧವಿದೆ. ಇದನ್ನು ಪರಿಪಾಲಿಸಲು ಬಲವಾದ ದಂಡ ವಿಧಿಸುವ ವ್ಯವಸ್ಥೆ ಇದೆ. ಇದರಿಂದಾಗಿ ಆರ್ಥಿಕತೆಯು ಬಡತನವನ್ನು ಬೆಳೆಸುವ ವ್ಯವಸ್ಥೆಯಾಗಿ ರೂಪುಗೊಳ್ಳುತ್ತದೆ ಎಂದು ಕೆಲವು ಉದಾರವಾದಿ ಬಂಡವಾಳಶಾಹಿ ಆರ್ಥಿಕ ತಜ್ಞರು ಹೇಳುತ್ತಾರೆ.

**ಮಾರುಕಟ್ಟೆ – ಪೂರ್ವ ತಾರತಮ್ಯಗಳು**

ಇದುವರೆಗೂ ನಾವು ಮಾರುಕಟ್ಟೆಯಲ್ಲಿರುವ ತಾರತಮ್ಯಗಳ ಕುರಿತು ಚರ್ಚಿಸಿದೆವು. ಇನ್ನು ಉದ್ಯೋಗ ಮಾರುಕಟ್ಟೆಗೆ ಪ್ರವೇಶಿಸುವ ಮುನ್ನವೇ ಕೆಳಕಂಡ ಪ್ರಮುಖ ಸೌಲಭ್ಯಗಳಿಂದ ವಂಚಿತರಾಗುವ ಜನವಿಭಾಗಕ್ಕೆ ಸಹಜವಾಗಿ ಉದ್ಯೋಗ ಪಡೆಯುವ ಅವಕಾಶಗಳು ಕುಂಠಿತಗೊಳ್ಳುತ್ತವೆ :

೧. ಶಿಕ್ಷಣ
೨. ಆರೋಗ್ಯ
೩. ಪೌಷ್ಟಿಕಾಂಶ
೪. ಕುಶಲಾಭಿವೃದ್ಧಿ, ಇತ್ಯಾದಿ.

ಇಂತಹ ಮಾರುಕಟ್ಟೆ – ಪೂರ್ವ ತಾರತಮ್ಯಗಳು ಕೂಡ ಹಲವು ಅಧ್ಯಯನಗಳು ತೋರಿಸಿಕೊಟ್ಟಿರುವಂತೆ ವೇತನ ಗಳಿಕೆಗೆ ನೇರ ಅನುಪಾತದಲ್ಲಿವೆ. ಇವು ಉದ್ಯೋಗ ಮಾರುಕಟ್ಟೆ ತಾರತಮ್ಯಗಳಿಗಿಂತ ಹೆಚ್ಚು ವಿವರಣೆ ನೀಡಬಲ್ಲವು.

**ಪರಿಹಾರ ಕ್ರಮಗಳು**

ಹೀಗೆ ಬದುಕಿನ ಹಲವು ಹಂತಗಳಲ್ಲಿ ಅತ್ಯವಶ್ಯ ಸೌಲಭ್ಯಗಳಿಂದ ವಂಚಿತರಾದ ಜನವಿಭಾಗಕ್ಕೆ ಸಮಾನ ಅವಕಾಶಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ಕೆಳಕಾಣಿಸಿದ ಪರಿಹಾರ ಕ್ರಮಗಳನ್ನು ಹಲವು ದೇಶಗಳು ಹಮ್ಮಿಕೊಂಡು ಬರುತ್ತಿದ್ದು, ನಮ್ಮ ದೇಶದಲ್ಲೂ ಸಬಲೀಕರಣ ನೀತಿಗಳನ್ನು ಬಲಪಡಿಸಬೇಕಿದೆ :

**೧. ಸಮಾನ ಅವಕಾಶಗಳಿಗಾಗಿ ಶಾಸನ**

ಎಲ್ಲ ಜನವಿಭಾಗಕ್ಕೂ ಉತ್ಪಾದನೆಯ ಎಲ್ಲ ರಂಗದಲ್ಲೂ ಸಮಾನ ಅವಕಾಶ ಒದಗುವಂತೆ ಮಾಡಲು ಬಲಿಷ್ಠ ಶಾಸನ ಜಾರಿಗೆ ತರಬೇಕು.

**೨. ಸಮಾನ ಪಾಲ್ಗೊಳ್ಳುವಿಕೆ**

ಮೀಸಲಾತಿ ಮೂಲಕ ಅವಕಾಶವಂಚಿತ ಜನವಿಭಾಗಗಳು ಎಲ್ಲ ರಂಗದಲ್ಲೂ ಆದಾಯ ಗಳಿಕೆಯಲ್ಲಿ ಪಾಲ್ಗೊಳ್ಳುವಂತೆ ಮಾಡುವುದು.

**೩. ಪರಿಹಾರಗಳು ಮತ್ತು ಸರಿಪಡಿಸುವಿಕೆ ಕ್ರಮಗಳು**

ಪರಿಹಾರ ನೀಡುವ ಮೂಲಕ ಈಗಾಗಲೇ ತುಳಿಯಲ್ಪಟ್ಟ ಜನತೆಯು ಸ್ವಾವಲಂಬನೆಯತ್ತ ಹೆಜ್ಜೆ ಹಾಕಲು ಸರಿಪಡಿಸುವಿಕೆಯಂತಹ ಕ್ರಮಗಳು.

ಸಾಮಾಜಿಕವಾಗಿ ತುಳಿತಕ್ಕೊಳಗಾಗಿರುವ ಜನತೆಯನ್ನು ಮೇಲೆತ್ತುವ ನಿಟ್ಟಿನಲ್ಲಿ ಮೀಸಲಾತಿ ಒಂದು ಸಣ್ಣ ಶಮನಕಾರಿ ಚಿಕಿತ್ಸೆಯೇ ಹೊರತು ಅದು ರಾಮಬಾಣವಲ್ಲ. ಅಸಮಾನತೆ ಅಳಿಯುವವರೆಗೆ ಮೀಸಲಾತಿ ಅವಶ್ಯವಿದೆ. ಆದರೆ ಆಳುವ ವರ್ಗಗಳು ಜಾತಿಯನ್ನು ಮುಂದುವರಿಸಿಕೊಂಡು ಹೋಗುತ್ತಾ ಮೀಸಲಾತಿ ಎಂಬ ಊರುಗೋಲಿನ ಮರೀಚಿಕೆಯನ್ನು ಚುನಾವಣೆಯ ಸಂದರ್ಭದಲ್ಲಿ ಮತಗಳಿಕೆ ಅಸ್ತ್ರವನ್ನಾಗಿ ಬಳಸುತ್ತಿರುವ ಕುಟಿಲೋಪಾಯವೂ ಅಡಗಿದೆ.

ಈ ಹಿನ್ನೆಲೆಯಲ್ಲಿ, ತುಳಿತಕ್ಕೊಳಗಾದ ಜನವಿಭಾಗ ನಿಜಕ್ಕೂ ಏಳಿಗೆ ಹೊಂದಬೇಕಾದರೆ ಪರಿಣಾಮಕಾರಿ ಯೋಜನೆಗಳಾದ ಕೃಷಿ ಭೂಮಿ ವಿತರಣೆ, ದಮನಿತ ಜಾತಿಗಳಿಗೆ ಆರ್ಥಿಕ ಲಭ್ಯತೆ, ಉದ್ಯಮಶೀಲತಾಭಿವೃದ್ಧಿ, ಕೌಶಲ್ಯಾಭಿವೃದ್ಧಿ, ಶಿಕ್ಷಣ, ಸಂಪತ್ತಿನ ಸಮಾನ ಹಂಚಿಕೆ, ಅಗತ್ಯ ಪರಿಶ್ರಮಗಳ ಪೂರೈಕೆಯಿಂದ ಕೂಡಿದ ಸಹಕಾರಿ ಸಂಘಟಿತ ಬೇಸಾಯ, ಕ್ಷಿಪ್ರ ಕೈಗಾರೀಕರಣ, ರಾಷ್ಟ್ರೀಕೃತ ವಿಮೆಗಳ ಮೂಲಕ ಜನರ ಸಂಪನ್ಮೂಲದ ಕ್ರೋಢೀಕರಣ, ಪ್ರಮುಖ ಕೈಗಾರಿಕೆಗಳನ್ನು ಸಾರ್ವಜನಿಕ ನಿಯಂತ್ರಣದಲ್ಲಿಡುವುದು, ಇತ್ಯಾದಿ ಅತ್ಯವಶ್ಯ.

ಇದಕ್ಕಾಗಿ ಅಸ್ಪೃಶ್ಯತೆ ನಿರ್ಮೂಲನೆ ಮತ್ತು ಜಾತಿ–ವಿರೋಧಿ ಹೋರಾಟಗಳು ಸರ್ವವ್ಯಾಪಿಯಾಗಿ ಮೂಡಿಬರಬೇಕು. ಇಂತಹ ಸಾಮಾಜಿಕ ಹೋರಾಟಗಳನ್ನು ಆರ್ಥಿಕ ಹೋರಾಟಗಳ ಜೊತೆ ಬಲಿಷ್ಠವಾಗಿ ಬೆಸೆಯಬೇಕು. ಸಮರಶೀಲ ಜಾತಿ–ವಿರೋಧಿ ಮತ್ತು ಆರ್ಥಿಕ ಹೋರಾಟಗಳನ್ನು ಸಾಕಾರಗೊಳಿಸಲು ಅಂಬೇಡ್ಕರ್‌ವಾದಿಗಳು, ಎಡಪಂಥೀಯರು, ಸಮಾಜವಾದಿಗಳು ಮತ್ತು ಪ್ರಗತಿಪರರೆಲ್ಲರೂ ತಮ್ಮ ನಡುವಿನ ಒಳಜಗಳಗಳನ್ನು ಬದಿಗಿರಿಸಿ ಜೊತೆಗೂಡಬೇಕಿದೆ. ಇಲ್ಲದಿದ್ದರೆ ಸಮಸಮಾಜಕ್ಕಾಗಿ ಹೋರಾಟ ನಡೆಸುವ ಮಾತಿರಲಿ, ಪ್ರಜಾಪ್ರಭುತ್ವವೇ ಬುಡಮೇಲಾಗುವುದರಲ್ಲಿ ಸಂದೇಹವಿಲ್ಲ.

**ಜೈಕುಮಾರ್ ಹೆಚ್. ಎಸ್.**
೧೦೫, 'ತಿರುಮಲ', ೨ನೇ ಮಹಡಿ, ೨೯ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ೪ನೇ ಬ್ಲಾಕ್
ಬಿ.ಹೆಚ್.ಇ.ಎಲ್. ಆಫೀಸರ್ಸ್ ಲೇಔಟ್ ಹತ್ತಿರ, ನಂದಿನಿ ಲೇಔಟ್, ಬೆಂಗಳೂರು – ೯೬

**ಪೋಸ್ಟ್ !**

ದುರ್ಗತಿ
ಬಂದಿದೆ ನಮ್ಮ ಅಂಚೆಗೆ
ಬಲಿಯಾಗಿ
ತಾನು ಈ–ಮೇಲು ಸಂಚಿಗೆ
ಸರಿದಿದೆ ತಾನೇ
ಮೂಲೆಯ ಅಂಚಿಗೆ !

**ಗೀತಾ ಶಾಸ್ತ್ರಿ**
೧೨೧/೩, ಶ್ರೀನಿಲಯ, ಶ್ರೀನಿವಾಸ ರಸ್ತೆ ೨ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು – ೨೮

'ಹೊಸತು' ಸೆಪ್ಟೆಂಬರ್ ೨೦೧೬ರ ಸಂಚಿಕೆಯಲ್ಲಿ ಅಚಾತುರ್ಯದಿಂದ ಪ್ರೊ ॥ ಮಾಲತಿ ಪಟ್ಟಣಶೆಟ್ಟಿ ಅವರ ಕವನವನ್ನು 'ಪತ್ರಗಳು' ವಿಭಾಗದಲ್ಲಿ ಪ್ರಕಟಿಸಲಾಗಿದೆ. ಅದನ್ನು ಸ್ವತಂತ್ರ ಕವಿತೆಯಾಗಿ ಒಳಗಿನ ಪುಟವೊಂದರಲ್ಲಿ ಪ್ರಕಟಿಸಬೇಕಾಗಿತ್ತು. ಅಚಾತುರ್ಯಕ್ಕಾಗಿ ಪ್ರೊ ॥ ಮಾಲತಿ ಪಟ್ಟಣಶೆಟ್ಟಿ ಅವರ ಕ್ಷಮೆ ಬೇಡುತ್ತೇವೆ.

*- ಸಂ.*

# ದಕ್ಷಿಣ ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿನ ತಳ ಸಮುದಾಯದಲ್ಲಿರುವ ಬಡತನದ ಕುರಿತು ಒಂದು ವಿಶ್ಲೇಷಣೆ

**ಹೆಚ್. ಆರ್. ಚನ್ನಕ್ಕಿ**
**ಮತ್ತು**
**ರಾಧಾ ಜಿ. ಮಣ್ಣೂರ್**

ಸ್ವಾತಂತ್ರ್ಯಾನಂತರ ಅಧಿಕಾರಕ್ಕೆ ಬಂದ ಸರಕಾರಗಳು ದೇಶದಲ್ಲಿರುವ ಅನಕ್ಷರತೆ, ಬಡತನ ಮತ್ತು ಇನ್ನಿತರ ಅಭಿವೃದ್ಧಿ ವಿಷಯಗಳಿಗೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ದೀನದಲಿತರ ಮತ್ತು ತೀರ ಹಿಂದುಳಿದ ವರ್ಗದವರ ಸಬಲೀಕರಣಕ್ಕಾಗಿ ಪ್ರಯತ್ನಿಸಿದವು. ಭಾರತದ ಒಕ್ಕೂಟದಲ್ಲಿರುವ ಎಲ್ಲಾ ರಾಜ್ಯಗಳು ಒಂದೇ ದಶಕದಲ್ಲಿ ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಸಹ ಕೆಲವೊಂದು ರಾಜ್ಯಗಳು ತಾವು ಆಚರಣೆಗೆ ತಂದ ಕಾರ್ಯಕ್ರಮಗಳನ್ನು ಅತ್ಯಂತ ಯಶಸ್ವಿಯಾಗಿ ಗುರಿ ಮುಟ್ಟಿದ್ದರೆ, ಇನ್ನು ಕೆಲವು ರಾಜ್ಯಗಳು ಗುರಿ ಮುಟ್ಟಲು ಸಾಧ್ಯವೇ ಆಗಿಲ್ಲ ಎಂದು ಹೇಳಬಹುದು. ಇದಕ್ಕೆ ಮೂಲ ಕಾರಣ ಆಯಾ ರಾಜ್ಯಗಳಲ್ಲಿ ಅಧಿಕಾರಕ್ಕೇರಿದ ರಾಜಕೀಯ ಪಕ್ಷಗಳ ಮತ್ತು ರಾಜಕೀಯ ನಾಯಕರ ಇಚ್ಛಾಶಕ್ತಿಯ ಕೊರತೆ ಎಂದು ಹೇಳಿದರೆ ತಪ್ಪಲ್ಲ.

ನಕ್ಷೆ ಮತ್ತು ಕೋಷ್ಟಕ ೧ರಲ್ಲಿ ತಿಳಿಸಿರುವಂತೆ, ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಬಡತನ ರೇಖೆಯ ಕೆಳಗಿರುವ ಜನತೆಯ ಒಟ್ಟು ಪ್ರತಿಶತವನ್ನು ವಿಶ್ಲೇಷಿಸಲಾಗಿದೆ. ನಕ್ಷೆಯಲ್ಲಿ ನಮೂದಿಸಿದಂತೆ ಕರ್ನಾಟಕ ರಾಜ್ಯದೊಂದಿಗೆ ದಕ್ಷಿಣ ರಾಜ್ಯಗಳಾದ ಆಂಧ್ರಪ್ರದೇಶ (ಈಗಿನ ಹೊಸ ರಾಜ್ಯ ತೆಲಂಗಾಣವನ್ನು ಸೇರಿಸಿದಂತೆ) ಕೇರಳ ಮತ್ತು ತಮಿಳುನಾಡಿನೊಂದಿಗೆ ೧೯೭೩-೭೪ರಿಂದ ೨೦೦೪-೦೫ರ ಅವಧಿಯಲ್ಲಿನ ದತ್ತಾಂಶಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಇದಕ್ಕಾಗಿ ಯೋಜನಾ ಆಯೋಗ ಮತ್ತು ಎನ್‌ಎಸ್‌ಎಸ್‌ಓ ೬೧ನೇ ಸುತ್ತಿನ ದತ್ತಾಂಶಗಳನ್ನು ಬಳಸಿಕೊಳ್ಳಲಾಗಿದೆ.

ಎಲ್ಲಾ ರಾಜ್ಯಗಳಲ್ಲಿ ಒಂದೇ ದಶಕದಲ್ಲಿ ಪ್ರಾರಂಭವಾದ ಬಡತನ ನಿವಾರಣೆಯ ಕಾರ್ಯಕ್ರಮಗಳ ಲಾಭಗಳು ಸಹ ಒಂದೇ ಅವಧಿಯಲ್ಲಿ ತಲುಪಬೇಕಾಗಿತ್ತು. ಆದರೆ ಕೇರಳವನ್ನು ಹೊರತುಪಡಿಸಿದಂತೆ, ಉಳಿದ ರಾಜ್ಯಗಳು ತಾವೇ ನಿಗದಿ ಪಡಿಸಿಕೊಂಡ ಗುರಿಗಳನ್ನು ಮುಟ್ಟಲು ವಿಫಲವಾಗಿವೆ. ಅದಕ್ಕೆ ಮೂಲ ಕಾರಣ ಆಯಾ ರಾಜ್ಯಗಳಲ್ಲಿರುವ ವಿವಿಧ ರೀತಿಯ ಪಕ್ಷಗಳ ಸರಕಾರಗಳು ಮತ್ತು ರಾಜಕೀಯ ನಾಯಕರ ಇಚ್ಛಾಶಕ್ತಿಯ ಕೊರತೆ. ಏಕೆಂದರೆ, ಈ ಎಲ್ಲಾ ನಾಯಕರ ರಾಜಕೀಯದ ಶಕ್ತಿ ಮತ್ತು ಯುಕ್ತಿ ಅಡಗಿರುವದೇ ಈ ಬಡವರ ಮೇಲೆ. ಅವರಿಗೋಸ್ಕರ ಹಲವಾರು ಕಾರ್ಯಕ್ರಮಗಳನ್ನು ರಚಿಸಿ ಚುನಾವಣೆಯ ಸಮಯದಲ್ಲಿ ಪ್ರಣಾಳಿಕೆಗಳನ್ನು ಬಿಡುಗಡೆಗೊಳಿಸಿ ಅವರ ಓಟುಗಳನ್ನು ಪಡೆದು ಅಧಿಕಾರ ಗಳಿಸಿದ ಮೇಲೆ ಅವರನ್ನು ಸಂಪೂರ್ಣವಾಗಿ ಕಡೆಗಣಿಸುತ್ತಾರೆ.





**ನಕ್ಷೆ ೧ : ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿರುವ ಬಡತನ ರೇಖೆಯ ಕೆಳಗಿರುವ ಶೇಕಡಾವಾರು ಜನಸಂಖ್ಯೆ**




ಇಡೀ ದೇಶದಲ್ಲಿ ೧೯೭೩-೭೪ರಲ್ಲಿ ಶೇ. ೫೪.೮೮ರಷ್ಟು ಜನಸಂಖ್ಯೆಯು ಬಡತನ ರೇಖೆಯ ಕೆಳಗಿದ್ದರೆ ಇದು ೨೦೦೪-೦೫ರಲ್ಲಿ ಶೇ. ೨೧.೦೮ಕ್ಕೆ ಇಳಿಕೆಯಾಗಿದೆ. ಅಂದರೆ, ಸುಮಾರು ಈ ಮೂವತ್ತು ವರ್ಷಗಳ ಅವಧಿಯಲ್ಲಿ ಶೇಕಡ ೩೩.೮೦ರಷ್ಟಿನ (೫೪.೮೮-೨೧.೦೮) ಜನಸಂಖ್ಯೆಯು ಬಡತನ ರೇಖೆಯನ್ನು ಮೀರಿ ತಮ್ಮ ತಲಾ ಆದಾಯವನ್ನು ಹೆಚ್ಚಿಸಿಕೊಂಡಿರಬಹುದು ಅಥವಾ ಜೀವನಮಟ್ಟವನ್ನು ಸುಧಾರಿಸಿಕೊಂಡಿರಬಹುದು ಎಂದು ಅಂದಾಜಿಸಬಹುದು. ಆದರೂ ಕೂಡ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳ ಬಡತನ ನಿವಾರಣೆಯ ಕಾರ್ಯಕ್ರಮಗಳಲ್ಲಿ ಯಾವುದೇ ರೀತಿಯ ಇಳಿಕೆಯಾಗಿಲ್ಲ. ಬದಲಾಗಿ, ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಏರಿಕೆಯಾಗುತ್ತಿವೆ. ಈ ಎಲ್ಲಾ ಬಡತನ ನಿವಾರಣೆಯ ಕಾರ್ಯಕ್ರಮಗಳು ಜನರನ್ನು ಇನ್ನೂ ಕಡುಬಡತನದತ್ತ ದೂಡುತ್ತಿವೆಯೇ ಹೊರತು ಅವರನ್ನು ಬಡತನದಿಂದ ಮೇಲೆತ್ತುವ ಕೆಲಸ ಮಾಡುವಲ್ಲಿ ಸೋತಿವೆ ಎಂದು ಹೇಳಬಹುದು. ಇನ್ನು, ದಕ್ಷಿಣದ ರಾಜ್ಯಗಳಲ್ಲಿನ ಬಡತನ ರೇಖೆಯ ಕೆಳಗಿನ ಜನಸಂಖ್ಯೆಯ ಬಗ್ಗೆ ಹೇಳುವುದಾದರೆ ಕ್ರಮವಾಗಿ ಕರ್ನಾಟಕದಲ್ಲಿ ಶೇಕಡ ೫೪.೪೭, ತಮಿಳುನಾಡಿನಲ್ಲಿ ಶೇಕಡ ೫೪.೯೪, ಕೇರಳ ೫೯.೭೯ ಮತ್ತು ಆಂಧ್ರಪ್ರದೇಶದಲ್ಲಿ ಶೇಕಡ ೪೮.೮೬ರಷ್ಟು ಜನಸಂಖ್ಯೆಯು ೧೯೭೩-೭೪ರಲ್ಲಿ ಬಡತನರೇಖೆಯ ಕೆಳಗಿದ್ದರೆ, ೨೦೦೪-೦೫ರಲ್ಲಿ ಇದು ಕ್ರಮವಾಗಿ ಶೇಕಡ ೧೭.೪ರಷ್ಟು ಕರ್ನಾಟಕದಲ್ಲಿ, ಶೇಕಡ ೧೭.೮ರಷ್ಟು ತಮಿಳುನಾಡಿನಲ್ಲಿ, ಶೇಕಡ ೧೧.೪ರಷ್ಟು ಕೇರಳದಲ್ಲಿ ಮತ್ತು ಶೇಕಡ ೧೧.೧ರಷ್ಟು ಆಂಧ್ರಪ್ರದೇಶದಲ್ಲಿ ಇಳಿಕೆಯಾಗಿರುವದು ಕಂಡುಬರುತ್ತದೆ. ಆದರೆ ಕೇರಳವನ್ನು ತೆಗೆದುಕೊಂಡರೆ, ಆ ರಾಜ್ಯ ೧೯೭೩-೭೪ರಲ್ಲಿ ದಕ್ಷಿಣದ ರಾಜ್ಯಗಳಲ್ಲೇ ಅಧಿಕ ಪ್ರಮಾಣದ ಬಡವರನ್ನು ಹೊಂದಿತ್ತು. ಆದರೆ ಅದು ೨೦೦೪-೦೫ರಲ್ಲಿ ದಕ್ಷಿಣದ ಎಲ್ಲಾ ರಾಜ್ಯಗಳಿಗಿಂತ ಕಡಿಮೆ ಪ್ರಮಾಣದ ಬಡವರನ್ನು ಹೊಂದಿರುವ ರಾಜ್ಯವಾಗಿದೆ. ಆದರೆ ಕರ್ನಾಟಕವು ೧೯೭೩-೭೪ರಲ್ಲಿ ಕೇರಳಕ್ಕಿಂತ ಕಡಿಮೆ ಸಂಖ್ಯೆಯ ಬಡವರನ್ನು ಹೊಂದಿತ್ತು. ಆದರೆ ಇದು ೨೦೦೪-೦೫ರಲ್ಲಿ ಕೇರಳಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಬಡವರನ್ನು ಹೊಂದಿದೆ. ಅಂದರೆ ಕೇರಳ ರಾಜ್ಯ ಸಾಧಿಸಿದ ಪ್ರಗತಿಯನ್ನು ಸಾಧಿಸುವಲ್ಲಿ ಕರ್ನಾಟಕ ರಾಜ್ಯವು ವಿಫಲವಾಗಿದೆ ಎಂದು ಹೇಳಬಹುದು. ಅದರ ನಕ್ಷೆ ಮತ್ತು ಕೋಷ್ಟಕ ೧ರಿಂದ ತಿಳಿದುಬರುವುದೇನೆಂದರೆ ದಕ್ಷಿಣದ ಎಲ್ಲಾ ರಾಜ್ಯಗಳು ದೇಶದಲ್ಲಿರುವ ಸರಾಸರಿ ಬಡವರಿಗಿಂತ ಕಡಿಮೆ ಪ್ರಮಾಣದ ಬಡವರನ್ನು ಹೊಂದಿರುವುದು ತಿಳಿದುಬರುತ್ತದೆ. ಅತಿ ಹೆಚ್ಚಿನ ಬಡತನದಿಂದ ಇರುವ ಜನಸಂಖ್ಯೆಯನ್ನು ನಾವು ತಮಿಳುನಾಡಿನಲ್ಲಿ ಕಾಣಬಹುದಾಗಿದೆ.

| **ಕೋಷ್ಟಕ ೧ : ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿರುವ ಬಡತನ ರೇಖೆಯ ಕೆಳಗಿರುವ ಶೇಕಡಾವಾರು ಜನಸಂಖ್ಯೆ** | | | | | |
|---|---|---|---|---|---|
| **ವರ್ಷ** | **ಆಂಧ್ರಪ್ರದೇಶ** | **ಕರ್ನಾಟಕ** | **ಕೇರಳ** | **ತಮಿಳುನಾಡು** | **ಒಟ್ಟು ಭಾರತ** |
| ೧೯೭೩-೭೪ | ೪೮.೮೬ | ೫೪.೪೭ | ೫೯.೭೯ | ೫೪.೯೪ | ೫೪.೮೮ |
| ೧೯೭೭-೭೮ | ೩೯.೩೧ | ೪೮.೭೮ | ೫೨.೨೨ | ೫೪.೭೯ | ೫೧.೩೨ |
| ೧೯೮೩ | ೨೮.೯೧ | ೩೮.೨೪ | ೪೦.೪೨ | ೫೧.೬೬ | ೪೪.೪೮ |
| ೧೯೮೭-೮೮ | ೨೫.೮೬ | ೩೭.೫೩ | ೩೧.೭೯ | ೪೩.೩೯ | ೩೮.೮೬ |
| ೧೯೯೩-೯೪ | ೨೨.೧೯ | ೩೩.೧೬ | ೨೫.೪೩ | ೩೫.೦೩ | ೩೫.೯೭ |
| ೧೯೯೯-೨೦೦೦ | ೧೫.೭೭ | ೨೦.೦೪ | ೧೨.೭೨ | ೨೧.೧೨ | ೨೬.೧ |
| ೨೦೦೪-೦೫* | ೧೫.೮ | ೨೫.೦ | ೧೫.೦ | ೨೨.೫ | ೨೭.೫ |
| ೨೦೦೪-೦೫** | ೧೧.೧ | ೧೭.೪ | ೧೧.೪ | ೧೭.೮ | ೨೧.೮ |
| * ಏಕರೂಪ ಉಲ್ಲೇಖಿತ ಕಾಲಾವಧಿ ** ಮಿಶ್ರ ಉಲ್ಲೇಖಿತ ಕಾಲಾವಧಿ | | | | | |

ಮಾಹಿತಿಯ ಮೂಲ : ಯೋಜನಾ ಆಯೋಗ, ಭಾರತ ಸರಕಾರ ಮತ್ತು ಎನ್‌ಎಸ್‌ಎಸ್‌ಓ ೬೧ನೇ ಸುತ್ತಿನ ದತ್ತಾಂಶಗಳು

ಇಲ್ಲಿ ಇನ್ನೊಂದು ಬಹಳ ಪ್ರಮುಖವಾದ ವಿಚಾರವೇನೆಂದರೆ ಆಂಧ್ರಪ್ರದೇಶದಲ್ಲಿನ ಬಡವರ ಸಂಖ್ಯೆ ೧೯೭೩-೭೪ರಲ್ಲಿ ಕೇರಳಕ್ಕಿಂತ ಕಡಿಮೆ ಇದ್ದರೂ ಸಹ ೨೦೦೪-೦೫ರ ಸುಮಾರಿಗೆ ಕೇರಳ ರಾಜ್ಯ ಸಾಧಿಸಿದಷ್ಟು ಪ್ರಗತಿಯನ್ನು ಸಾಧಿಸುವಲ್ಲಿ ಆಂಧ್ರಪ್ರದೇಶವು ಸಂಪೂರ್ಣವಾಗಿ ವಿಫಲವಾಗಿದೆ. ಇದಕ್ಕೆ ಮೂಲ ಕಾರಣ ಆ ರಾಜ್ಯದಲ್ಲಿನ ಪ್ರಾದೇಶಿಕ ಅಸಮತೋಲನ ಮತ್ತು ಅಧಿಕಾರ ನಡೆಸಿದ ರಾಜಕೀಯ ಪಕ್ಷಗಳು. ಈಗಿನ ಆಂಧ್ರಪ್ರದೇಶದಲ್ಲಿರುವ ರಾಯಲಸೀಮಾ ಮತ್ತು ಕರಾವಳಿ ಪ್ರದೇಶಗಳನ್ನು ಅಭಿವೃದ್ಧಿ ಪಡಿಸುವಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದ್ದವು. ಇದಕ್ಕೆ ಮೂಲ ಕಾರಣ ರಾಜ್ಯದಲ್ಲಿ ಅಧಿಕಾರ ನಡೆಸಿದ ಅತಿ ಹೆಚ್ಚಿನ ಮುಖ್ಯಮಂತ್ರಿಗಳು ರಾಯಲಸೀಮಾ ಮತ್ತು ಕರಾವಳಿ ಪ್ರದೇಶಕ್ಕೆ ಸೇರಿದವರಾಗಿದ್ದರು ಮತ್ತು ಅವರೆಲ್ಲರೂ ತೆಲಂಗಾಣ ರಾಜ್ಯದಲ್ಲಿರುವ ೧೦ ಜಿಲ್ಲೆಗಳನ್ನು ಅಭಿವೃದ್ಧಿಯಿಂದ ದೂರ ಸರಿಯುವಂತೆ ಮಾಡಿದರು. ಆದ್ದರಿಂದ ಆಂಧ್ರಪ್ರದೇಶದ ಅಭಿವೃದ್ಧಿಯನ್ನು ಮುಂದೆ ತೆಗೆದುಕೊಂಡು ಹೋಗುವಲ್ಲಿ ಇದು ತೊಡಕಾಯಿತು ಎಂದು ಹೇಳಬಹುದು. ಅದಕ್ಕೋಸ್ಕರವೇ ಆಂಧ್ರಪ್ರದೇಶ ದಲ್ಲಿನ ತೆಲಂಗಾಣ ಪ್ರದೇಶದಲ್ಲಿ ಅಭಿವೃದ್ಧಿಗಾಗಿ ಅನೇಕ ಹೋರಾಟಗಳನ್ನು ಸಂಘಟಿಸಲಾಯಿತು. ಹೋರಾಟಗಳನ್ನು ಹತ್ತಿಕ್ಕಲು ಕೇಂದ್ರ ಸರಕಾರವು ಈ ಪ್ರದೇಶದ ಅಭಿವೃದ್ಧಿಗಾಗಿ ೧೯೭೪ರಲ್ಲಿ ಸಂವಿಧಾನಕ್ಕೆ ೩೨ನೇ ತಿದ್ದುಪಡಿಯ ಮುಖಾಂತರ ೩೭೧ (ಡಿ)ನೇ ಪರಿಚ್ಛೇದದಲ್ಲಿ ಅಭಿವೃದ್ಧಿಗಾಗಿ ವಿಶೇಷ ಸವಲತ್ತನ್ನು ಕೊಟ್ಟರೂ ಸಹ ರಾಜಕೀಯ ಪಕ್ಷಗಳ ನಾಯಕರು ಮಾತ್ರ ಆ ಅಭಿವೃದ್ಧಿಯ ಕನಸಿಗೆ ನೀರು ಹಾಕಿ ಬೆಳೆಸುವ ಗೋಜಿಗೆ ಹೋಗಲಿಲ್ಲ. ಆದ್ದರಿಂದ ಇದನ್ನು ಮನಗಂಡ ತೆಲಂಗಾಣದ ಜನಪ್ರತಿನಿಧಿಗಳು

**ನಕ್ಷೆ ೨ : ೨೦೦೯–೧೦ರಲ್ಲಿ ದೇಶ ಮತ್ತು ದಕ್ಷಿಣ ರಾಜ್ಯಗಳ ನಿರ್ದಿಷ್ಟ ಬಡತನ ರೇಖೆಗಳು**




ಬೇರೆ ರಾಜ್ಯಕ್ಕಾಗಿ ಹೋರಾಡಿ ೨೦೧೪ರಲ್ಲಿ ಅದನ್ನು ಪಡೆದುಕೊಂಡರು.

ಈ ಮೇಲೆ ಹೇಳಿದ ಬಡತನದ ಜನಸಂಖ್ಯೆಯನ್ನು ಆಯಾ ಜನರ ತಲಾ ಮಾಸಿಕ ಆದಾಯದಿಂದ ಅಂದಾಜಿಸಿ ಹೇಳಲಾಗುತ್ತದೆ. ಆದ್ದರಿಂದ ದೇಶ ಮತ್ತು ದಕ್ಷಿಣದ ರಾಜ್ಯಗಳಲ್ಲಿರುವ ಜನರ ತಲಾ ಮಾಸಿಕ ಆದಾಯವನ್ನು ನಕ್ಷೆ ಮತ್ತು ಕೋಷ್ಟಕ ೨ರಲ್ಲಿ ವಿವರಿಸಿದಂತೆ ನಗರ ಮತ್ತು ಗ್ರಾಮೀಣ ಪ್ರದೇಶಕ್ಕನುಗುಣವಾಗಿ ೨೦೦೯–೧೦ರಲ್ಲಿರುವಂತೆ ಚರ್ಚಿಸಲಾಗಿದೆ. ದೇಶದ ಗ್ರಾಮೀಣ ಭಾಗದಲ್ಲಿರುವ ಜನರ ಮಾಸಿಕ ತಲಾ ಆದಾಯವು ರೂಪಾಯಿ ೬೭೨ಕ್ಕಿಂತ ಕಡಿಮೆ ಇರುವವರನ್ನು ಬಡತನ ರೇಖೆಯ ಕೆಳಗಿರುವವರೆಂದು ಪರಿಗಣಿಸಲಾಗಿದೆ. ಆದರೆ ನಗರ ಪ್ರದೇಶದಲ್ಲಿನ ಇದು ರೂಪಾಯಿ ೮೫೯ಕ್ಕಿಂತ ಕಡಿಮೆ ವರಮಾನ ಇರುವವರನ್ನು ಬಡವರೆಂದು ಪರಿಗಣಿಸಲಾಗಿದೆ.

ಇನ್ನು ದಕ್ಷಿಣದ ರಾಜ್ಯಗಳಲ್ಲಿನ ಮಾಸಿಕ ತಲಾ ಆದಾಯವನ್ನು ತೆಗೆದು ಕೊಂಡರೆ ಕರ್ನಾಟಕದಲ್ಲಿನ ಗ್ರಾಮೀಣ ಭಾಗದಲ್ಲಿರುವ ಜನಸಂಖ್ಯೆಯು ಅತಿ ಕಡಿಮೆಯ, ಅಂದರೆ ರೂಪಾಯಿ ೬೨೯.೪ಕ್ಕಿಂತ ಕಡಿಮೆ ತಲಾ ಮಾಸಿಕ ಆದಾಯ ಹೊಂದಿರುವವರನ್ನು ಬಡತನ ರೇಖೆಯ ಕೆಳಗಿನವರು ಎಂದು ಹೇಳಲಾಗುತ್ತದೆ. ಆದರೆ ಇದು ಕೇರಳದಲ್ಲಿ ೭೭೫ ರೂಪಾಯಿ, ಆಂಧ್ರಪ್ರದೇಶದಲ್ಲಿ ೬೯೩ ರೂಪಾಯಿ ಮತ್ತು ತಮಿಳುನಾಡಿನಲ್ಲಿ ೬೩೯ ರೂಪಾಯಿಕ್ಕಿಂತ ಕಡಿಮೆ ತಲಾ ಮಾಸಿಕ ಆದಾಯ ಇರುವವರನ್ನು ಪರಿಗಣಿಸಲಾಗಿದೆ. ತುಲನೆ ಮಾಡಿ ನೋಡಿದಾಗ ಕರ್ನಾಟಕಕ್ಕಿಂತ ಕೇರಳ ಹೆಚ್ಚು ಮತ್ತು ತಮಿಳುನಾಡಿನಲ್ಲಿ ಕಡಿಮೆ ಆದಾಯವಿರುವವರನ್ನು ಪರಿಗಣಿಸಿರುವುದು ಗೋಚರಿಸುತ್ತದೆ. ಇನ್ನೂ ಒಂದು ಅಂಶ ಬಹಳ ಪ್ರಮುಖವಾಗಿರುವುದೆಂದರೆ ತಮಿಳುನಾಡಿನಲ್ಲಿ ಎಲ್ಲಾ ರಾಜಕೀಯ ಪಕ್ಷಗಳು ಚುನಾವಣೆಯ ಸಮಯದಲ್ಲಿ ಕೊಟ್ಟ ಮತ್ತು ಕೊಡುತ್ತಿರುವ ಸೌಲಭ್ಯಗಳು ಕೇರಳ ಮತ್ತು ಆಂಧ್ರಪ್ರದೇಶ ರಾಜ್ಯಗಳಲ್ಲಿ ಕಾಣಸಿಗುವುದಿಲ್ಲ. ಆದರೆ ತಮಿಳುನಾಡಿನಲ್ಲಿ ಕೇವಲ ವ್ಯಕ್ತಿ ಕೇಂದ್ರೀಕೃತ ಸರಕಾರಗಳು ಅಧಿಕಾರ ನಡೆಸುತ್ತಿವೆ. ಇದು ಸ್ವಜನ ಪಕ್ಷಪಾತ ಮತ್ತು ಭ್ರಷ್ಟಾಚಾರಕ್ಕೆ ಕಾರಣವಾಗುತ್ತಿದೆ. ಇದನ್ನು ನಾವು ತಮಿಳುನಾಡಿನಲ್ಲಿ ಅಧಿಕಾರ ನಡೆಸಿದ ಎಲ್ಲಾ ಸರಕಾರಗಳಲ್ಲಿ ಕಾಣಬಹುದು. ಆದರೆ ಕೇರಳದಲ್ಲಿ ಆಡಳಿತ ನಡೆಸಿದ ಸರಕಾರಗಳು ಬಹಳ ನಿಷ್ಪಕ್ಷಪಾತ, ಭ್ರಷ್ಟಾಚಾರ ರಹಿತ ಮತ್ತು ಪಾರದರ್ಶಕ ಆಡಳಿತ ನೀಡಿವೆ. ಆದರೂ ಕೂಡ ಅಲ್ಲಿನ ತಲಾ ಮಾಸಿಕ ಆದಾಯವು ಈ ಎರಡು ರಾಜ್ಯಗಳಿಗಿಂತ ಕಡಿಮೆ ಇದೆ. ಆದರೆ ದಕ್ಷಿಣದಲ್ಲಿ ಕೇರಳ ಮತ್ತು ಆಂಧ್ರಪ್ರದೇಶವನ್ನು ಹೊರತು ಪಡಿಸಿದರೆ ಉಳಿದ ಎಲ್ಲಾ ರಾಜ್ಯಗಳ ಗ್ರಾಮೀಣ ಪ್ರದೇಶದ ಜನರ ಮಾಸಿಕ ತಲಾ ಆದಾಯವು ಕಡಿಮೆ ಎಂದು ಕಂಡುಬರುತ್ತದೆ. ಆದರೆ ಈಗಾಗಲೇ ಹೇಳಿದ ಹಾಗೆ ಆಂಧ್ರಪ್ರದೇಶದಲ್ಲಿನ ಪ್ರಾದೇಶಿಕ ಅಸಮತೋಲನ ಅತಿ ಹೆಚ್ಚಾಗಿದ್ದರ ಫಲವೇ ರಾಜ್ಯ ಇಬ್ಭಾಗವಾಗಿರುವುದನ್ನು ನಾವುಗಳು ೨೦೧೪ರಲ್ಲಿ ಕಂಡಿದ್ದೇವೆ. ಆದರೆ ಕೇರಳದಲ್ಲಿ ಇದನ್ನು ಕಾಣಲು ಸಿಗುವುದಿಲ್ಲ. ಅಲ್ಲಿರುವ ಎಲ್ಲಾ ಜಿಲ್ಲೆಗಳು ಮತ್ತು ಪ್ರದೇಶಗಳು ಸಮಾನಾಂತರವಾಗಿ ಅಭಿವೃದ್ಧಿಯನ್ನು ಕಂಡಿವೆ. ಇದಕ್ಕೆ ಕಾರಣ ಅಲ್ಲಿ ಅಧಿಕಾರ ನಡೆಸಿದ ಎಡರಂಗ ನೇತೃತ್ವದ ಸರಕಾರಗಳ ಧೋರಣೆ ಮತ್ತು ಅಭಿವೃದ್ಧಿಪರ ನೀತಿಗಳು.

ನಗರ ಪ್ರದೇಶದ ತಲಾ ಆದಾಯವು ಗ್ರಾಮೀಣ ಪ್ರದೇಶಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಇರುವವರನ್ನು ಬಡವರೆಂದು ಗಣನೆಗೆ ತೆಗೆದು ಕೊಳ್ಳಲಾಗಿದೆ. ಏಕೆಂದರೆ, ಇವರಿಗೆ ನೌಕರಿಯ ಅವಕಾಶಗಳು ಹೆಚ್ಚು ಇದ್ದು, ಅವರ ಆದಾಯದ ಪ್ರಮಾಣದಲ್ಲಿ ಗ್ರಾಮೀಣ ಭಾಗದವರಿಗಿಂತ ಹೆಚ್ಚಿರುತ್ತದೆ. ದಕ್ಷಿಣ ಭಾರತದಲ್ಲಿ ಆಂಧ್ರಪ್ರದೇಶದಲ್ಲಿ ಪ್ರತಿತಿಂಗಳಿಗೆ ರೂಪಾಯಿ ೯೨೬ಕ್ಕಿಂತ ಹೆಚ್ಚಿದ್ದರೆ ಅವರು ಬಡವರಲ್ಲ. ದಕ್ಷಿಣದ ಇತರೆ ರಾಜ್ಯಗಳಿಗೆ ಸಂಬಂಧಿಸಿದಂತೆ ವಿಶ್ಲೇಷಿಸುವುದಾದರೆ ಪ್ರತಿತಿಂಗಳು ಕರ್ನಾಟಕದಲ್ಲಿ ೯೦೮ ರೂಪಾಯಿ, ಕೇರಳ ಮತ್ತು ತಮಿಳುನಾಡಿನಲ್ಲಿ ಕ್ರಮವಾಗಿ ೮೩೦ ಮತ್ತು ೮೦೦ ರೂಪಾಯಿಗಿಂತ ಹೆಚ್ಚಿನ ಆದಾಯವನ್ನು ಹೊಂದಿದ್ದರೆ ಅವರನ್ನು ಬಡತನ ರೇಖೆಗಿಂತ ಮೇಲಿನವರು ಅಥವಾ ಉಳ್ಳವರು ಎಂದು ಪರಿಗಣಿಸಲಾಗುತ್ತದೆ. ಅದಕ್ಕಿಂತ ಕಡಿಮೆ ಮಾಸಿಕ ಆದಾಯವನ್ನು ಹೊಂದಿರುವವರನ್ನು ಬಡವರೆಂದು ಅಂದಾಜಿಸಲಾಗುತ್ತದೆ.

ಇಲ್ಲಿ ಒಂದು ಅಂಶ ತಿಳಿದುಬರುವುದೇನೆಂದರೆ, ದಕ್ಷಿಣ ರಾಜ್ಯಗಳ ಗ್ರಾಮೀಣ ಭಾಗದಲ್ಲಿರುವ ಬಡವರ ಜನಸಂಖ್ಯೆಯ ಮಾಸಿಕ ತಲಾ ಆದಾಯವು ಅತಿ ಕಡಿಮೆ ಇರುವದು ಕರ್ನಾಟಕದಲ್ಲಿ ಮತ್ತು ಇದು ನಗರ ಪ್ರದೇಶದಲ್ಲಿನ ಜನರ ಮಾಸಿಕ ಆದಾಯವು ಕೇರಳ ಮತ್ತು ತಮಿಳುನಾಡು ರಾಜ್ಯಗಳಿಗಿಂತ ಹೆಚ್ಚು ಇದ್ದರೂ ನೆರೆಯ ರಾಜ್ಯ ಆಂಧ್ರಪ್ರದೇಶಕ್ಕಿಂತ ಕಡಿಮೆ ಇರುವದು ಕಂಡುಬರುತ್ತದೆ. ಅಂದರೆ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿನ ಹೆಚ್ಚು ಜನರು ದಕ್ಷಿಣದ ಇತರೆ ರಾಜ್ಯಗಳಲ್ಲಿನ ಜನರಿಗಿಂತ ಕಡಿಮೆ ತಲಾ ಆದಾಯವನ್ನು ಹೊಂದಿದ್ದಾರೆ.

**ಕೋಷ್ಟಕ ೨ : ೨೦೦೯–೧೦ರಲ್ಲಿ ದೇಶ ಮತ್ತು ದಕ್ಷಿಣ ರಾಜ್ಯಗಳ ನಿರ್ದಿಷ್ಟ ಬಡತನ ರೇಖೆಗಳು**

| ರಾಜ್ಯಗಳು | ತಲಾ ಮಾಸಿಕ ಆದಾಯ (ರೂ.) | |
|---|---|---|
| | ಗ್ರಾಮೀಣ ಪ್ರದೇಶ | ನಗರ ಪ್ರದೇಶ |
| ಆಂಧ್ರಪ್ರದೇಶ | ೬೯೩.೮ | ೯೨೬.೪ |
| ಕರ್ನಾಟಕ | ೬೨೯.೪ | ೯೦೮.೦ |
| ಕೇರಳ | ೭೭೫.೩ | ೮೩೦.೭ |
| ತಮಿಳುನಾಡು | ೬೩೯.೦ | ೮೦೦.೮ |
| ಒಟ್ಟು ಭಾರತ | ೬೭೨.೮ | ೮೫೯.೬ |

ಇಲ್ಲಿಯವರೆಗೆ, ದೇಶ ಮತ್ತು ದಕ್ಷಿಣದ ರಾಜ್ಯಗಳಲ್ಲಿನ ಬಡವರ ಪ್ರತಿಶತ ಮತ್ತು ಅಲ್ಲಿಯ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಜನಸಂಖ್ಯೆ ಮಾಸಿಕ

ತಲಾ ಆದಾಯವನ್ನು ಚರ್ಚಿಸಲಾಯಿತು. ಇನ್ನು ಮುಂದಿನ ನಕ್ಷೆ ೩ ಮತ್ತು ಕೋಷ್ಟಕ ೩ರಲ್ಲಿ ೧೯೮೩ರಿಂದ ೨೦೦೪-೦೫ರಲ್ಲಿನ ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಜನಸಂಖ್ಯೆಯನ್ನು ಸಾಮಾಜಿಕ ಪಂಗಡಗಳ ಅನುಸಾರವಾಗಿ ವಿವರಿಸಲಾಗಿದೆ. ಕೋಷ್ಟಕ ಮತ್ತು ನಕ್ಷೆಯ ಪ್ರಕಾರ ೧೯೮೩ರಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೪೬.೫ರಷ್ಟು ಜನಸಂಖ್ಯೆಯು ಬಡತನ ರೇಖೆಯ ಕೆಳಗಿದ್ದು, ೨೦೦೪-೦೫ರಲ್ಲಿ ಇದು ಶೇಕಡ ೨೮ಕ್ಕೆ ಇಳಿದಿದೆ. ಪರಿಶಿಷ್ಟ ಜಾತಿಗೆ ಸೇರಿದ ಜನಸಂಖ್ಯೆಯು ೧೯೮೩ರಲ್ಲಿ ಶೇಕಡ ೫೯ರಷ್ಟು ಜನರು ಬಡವರಾಗಿದ್ದರೆ, ಇದು ೨೦೦೪-೦೫ರಲ್ಲಿ ಶೇಕಡ ೩೭.೧ಕ್ಕೆ ಇಳಿಕೆಯಾಗಿತ್ತು. ಪರಿಶಿಷ್ಟ ಪಂಗಡದಲ್ಲಿ ಶೇಕಡ ೬೩.೯ರಷ್ಟು ಇದ್ದ ಬಡವರ ಸಂಖ್ಯೆ ೨೦೦೪-೦೫ರಲ್ಲಿ ಶೇಕಡ ೪೪.೦೭ಕ್ಕೆ ಇಳಿಕೆಯಾಗಿದ್ದರೂ ಪರಿಶಿಷ್ಟ ಜಾತಿಯಲ್ಲಾದಷ್ಟು ಗಣನೀಯವಾದ ಇಳಿಕೆಯನ್ನು ಕಾಣಲಿಲ್ಲ ಎಂದು ಹೇಳಬಹುದು.

ಇನ್ನು ದೇಶದಲ್ಲಿರುವ ಮತಧರ್ಮಾಧಾರಿತ ವಿಶ್ಲೇಷಣೆಗಿಳಿದರೆ ೧೯೮೩ರಲ್ಲಿ ಶೇಕಡ ೪೭ರಷ್ಟು ಹಿಂದೂಗಳಲ್ಲಿನ ಜನಸಂಖ್ಯೆಯು ಬಡತನ ರೇಖೆಗಿಂತ ಕೆಳಗೆ ಜೀವನ ನಡೆಸುತ್ತಿದ್ದರು. ಆದರೆ ಇದು ೨೦೦೪-೦೫ರಲ್ಲಿ ಶೇಕಡ ೨೮ಕ್ಕೆ ಇಳಿಕೆಯಾಯಿತು. ಆದರೆ ಮುಸ್ಲಿಮರಲ್ಲಿ ೧೯೮೩ರಲ್ಲಿ ಶೇಕಡ ೫೧.೨ರಷ್ಟು ಬಡತನ ರೇಖೆಯ ಕೆಳಗಿರುವವರ ಸಂಖ್ಯೆ ೨೦೦೪-೦೫ರಲ್ಲಿ ಶೇಕಡ ೩೩ಕ್ಕೆ ಇಳಿದಿದ್ದರೂ ಸಹ ಧರ್ಮಗಳ ಆಧಾರದ ಮೇಲೆ ಹೇಳುವುದಾದರೆ ಮುಸ್ಲಿಮರಲ್ಲಿಯೇ ಅತಿ ಹೆಚ್ಚಿನ ಜನಸಂಖ್ಯೆಯ ಜನ ಬಡತನ ರೇಖೆಯ ಕೆಳಗಿದ್ದಾರೆ ಎಂದು ತಿಳಿದುಬರುತ್ತದೆ. ಇತರೆ ಅಲ್ಪಸಂಖ್ಯಾತರಲ್ಲಿ ೧೯೮೩ರಲ್ಲಿ ಶೇಕಡ ೩೦.೨ರಷ್ಟು ಇದ್ದ ಬಡವರ ಜನಸಂಖ್ಯೆಯು ೨೦೦೪-೦೫ರಲ್ಲಿ ಶೇಕಡ ೧೭.೯ಕ್ಕೆ ಇಳಿದಿದೆ. ಇದು ಹಿಂದೂ ಮತ್ತು ಮುಸ್ಲಿಂ ಸಮುದಾಯಕ್ಕಿಂತ ಕಡಿಮೆ ಪ್ರಮಾಣದ ಬಡವರನ್ನು ಹೊಂದಿದೆ. ೨೦೦೪-೦೫ರಲ್ಲಿ ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಜನಸಂಖ್ಯೆಯಲ್ಲಿ ಅತಿ ಹೆಚ್ಚಿನವರು ಪರಿಶಿಷ್ಟ ಪಂಗಡದವರಲ್ಲಿ ಕಂಡುಬರುತ್ತಾರೆ. ಆದ್ದರಿಂದ ಅಧಿಕಾರ ನಡೆಸುವ ಎಲ್ಲಾ ಸರಕಾರಗಳು ಇವರಿಗಾಗಿ ಕೆಲವೊಂದು ವಿಶೇಷ ಬಡತನ ನಿವಾರಣ ಕಾರ್ಯಕ್ರಮಗಳನ್ನು ಹಾಕಿಕೊಂಡಿರುತ್ತವೆ.

**ನಕ್ಷೆ ೩ : ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಶೇಕಡಾವಾರು ಜನಸಂಖ್ಯೆ ಪರಿಶಿಷ್ಟ ಜಾತಿ ಮತ್ತು ಪಂಗಡವಾರು**




**ಕೋಷ್ಟಕ ೩ : ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಶೇಕಡಾವಾರು ಜನಸಂಖ್ಯೆ ಪರಿಶಿಷ್ಟ ಜಾತಿ ಮತ್ತು ಪಂಗಡವಾರು**

| ಪಂಗಡಗಳು / ವರ್ಷ | ೧೯೮೩ | ೧೯೯೩-೯೪ | ೨೦೦೪-೦೫ |
|---|---|---|---|
| ಒಟ್ಟು ಜನಸಂಖ್ಯೆ | ೪೬.೫ | ೩೭.೨ | ೨೮.೦ |
| ಪರಿಶಿಷ್ಟ ಜಾತಿ | ೫೯.೦ | ೪೮.೬ | ೩೭.೧ |
| ಪರಿಶಿಷ್ಟ ಪಂಗಡ | ೬೩.೯ | ೫೦.೬ | ೪೪.೭ |
| ಒಟ್ಟು ಹಿಂದೂಗಳು | ೪೭.೦ | ೩೬.೮ | ೨೮.೦ |
| ಮುಸ್ಲಿಮರು | ೫೧.೨ | ೪೫.೨ | ೩೩.೦ |
| ಇತರೆ ಅಲ್ಪಸಂಖ್ಯಾತರು | ೩೦.೨ | ೨೬.೮ | ೧೭.೯ |
| ಮಾಹಿತಿಯ ಮೂಲ : ಸುಖದೇವ್ ಥೋರಟ್‌ರವರು ಭಾರತದ ಆರ್ಥಿಕ ಸಂಘದ ವಾರ್ಷಿಕ ಸಭೆಯಲ್ಲಿ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಂಡಿಸಿದ ಲೇಖನ – How Socially Inclusive Has Growth Been ? | | | |

ನಕ್ಷೆ ೪ ಮತ್ತು ಕೋಷ್ಟಕ ೪ರಲ್ಲಿ ಮೇಲೆ ಚರ್ಚಿಸಿದ ಅಂಕಿಅಂಶಗಳನ್ನು ಕರ್ನಾಟಕ ರಾಜ್ಯ ಮತ್ತು ದಕ್ಷಿಣ ಭಾರತದ ಇತರೆ ರಾಜ್ಯಗಳಲ್ಲಿರುವ ಸಾಮಾಜಿಕ ಪಂಗಡಗಳನ್ನು ೧೯೯೩-೯೪ರಿಂದ ೨೦೧೧-೧೨ರವರೆಗೆ ಇದ್ದ ಬಡತನದ ಬಗ್ಗೆ ಚರ್ಚಿಸಲಾಗಿದೆ. ಇದನ್ನು ಕರ್ನಾಟಕ, ದಕ್ಷಿಣದ ಇತರೆ ರಾಜ್ಯಗಳು ಮತ್ತು ದೇಶದಲ್ಲಿರುವ ಬಡತನದ ಪ್ರತಿಶತದೊಂದಿಗೆ ಹೋಲಿಕೆ ಮಾಡಿ ವಿಶ್ಲೇಷಿಸಲಾಗಿದೆ. ಮೊದಲನೆಯದಾಗಿ, ಪರಿಶಿಷ್ಟ ಪಂಗಡದ ಬಗ್ಗೆ ಹೇಳುವುದಾದರೆ ೧೯೯೩-೯೪ರಲ್ಲಿ ಶೇಕಡ ೬೪ರಷ್ಟು ಇದ್ದ ಬಡವರ ಸಂಖ್ಯೆ ೨೦೧೧-೧೨ರಲ್ಲಿ ಇದು ಶೇಕಡ ೪೩ಕ್ಕೆ ಇಳಿದಿದೆ. ಇದು ಪರಿಶಿಷ್ಟ ಜಾತಿಯವರಲ್ಲಿ ೧೯೯೩-೯೪ರಲ್ಲಿ ಶೇಕಡ ೬೯ರಿಂದ ೨೦೧೧-೧೨ರಲ್ಲಿ ಶೇಕಡ ೨೯ಕ್ಕೆ ಇಳಿಕೆಯಾಗಿದೆ. ಇನ್ನು, ಒಟ್ಟಾರೆಯಾಗಿ ಎಲ್ಲಾ ಪಂಗಡಗಳ ಬಗ್ಗೆ ಹೇಳುವುದಾದರೆ ೧೯೯೩-೯೪ರಲ್ಲಿ ಶೇಕಡ ೪೬ರಷ್ಟು ಇದ್ದ ಬಡವರ ಸಂಖ್ಯೆ ೨೦೧೧-೧೨ರಲ್ಲಿ ಶೇಕಡ ೨೨ಕ್ಕೆ ಕುಸಿಯಿತು. ಇದರಿಂದ ಬಹಳ ಸ್ಪಷ್ಟವಾಗಿ ತಿಳಿದುಬರುವುದೇನೆಂದರೆ ಅತಿ ಹೆಚ್ಚಿನ ಪ್ರಮಾಣದ ಬಡವರು ಪರಿಶಿಷ್ಟ ಜಾತಿ, ಪಂಗಡ ಮತ್ತು ಇತರೆ ಹಿಂದುಳಿದವರಲ್ಲಿ ಇದ್ದಾರೆ. ಇಲ್ಲಿ ಇತರೆ ಹಿಂದುಳಿದ ಜಾತಿ ಅಥವಾ ವರ್ಗಗಳಿಗೆ ಸಂಬಂಧಿಸಿದ ಬಡತನದ ಮಾಹಿತಿಯ ಕೊರತೆ ಎದ್ದುಕಾಣುತ್ತದೆ. ದೇಶದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿರುವ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಬಡತನದ ಬಗ್ಗೆ ಯಾವುದೇ ರೀತಿಯ ಮಾಹಿತಿ ಲಭ್ಯವಿಲ್ಲ. ಇದಕ್ಕೆ ಮೂಲ ಕಾರಣ ಆಯಾ ವರ್ಗಗಳಿಗೆ ಸಂಬಂಧಿಸಿದ ಬಡತನ, ಆರೋಗ್ಯ, ಶಿಕ್ಷಣ ಮತ್ತು ಇತರೆ ಸಾಮಾಜಿಕ ಆರ್ಥಿಕತೆಯ ದತ್ತಾಂಶಗಳ ಕೊರತೆಯು ಎದ್ದುಕಾಣುತ್ತದೆ. ದೇಶ ಮತ್ತು ಎಲ್ಲಾ ರಾಜ್ಯಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ವರ್ಗ ಅಥವಾ ಜಾತಿಗಳ ಮಾಹಿತಿ ಎಂದು ಒಟ್ಟು ಮೂರು ವರ್ಗಗಳ ಮಾಹಿತಿ ದೊರಕುತ್ತದೆ. ಹಿಂದುಳಿದ ವರ್ಗಗಳ ಮಾಹಿತಿ ಇತರೆ ಮತ್ತು ಸಾಮಾನ್ಯ ವರ್ಗದೊಂದಿಗೆ ಕೂಡಿಸಿ ಹೇಳುವ ಅಥವಾ ವಿಶ್ಲೇಷಣೆಯನ್ನು ಕೈಗೊಳ್ಳುವ ಪರಿಪಾಠವಿದೆ. ಈ ರೀತಿಯಾದಾಗ ಅತಿ ಹೆಚ್ಚಿನ ಸಂಖ್ಯೆಯಲ್ಲಿರುವ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಹಿತಾಸಕ್ತಿಗಳನ್ನು ಹತ್ತಿಕ್ಕಿದಂತಾಗುತ್ತದೆ. ಇದು ಈ

**ಕೋಷ್ಟಕ ೪ : ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿನ ಸಾಮಾಜಿಕ ಪಂಗಡಗಳು ಮತ್ತು ಬಡತನ ೧೯೯೩-೯೪ರಿಂದ ೨೦೧೧-೧೨**

| | ಪರಿಶಿಷ್ಟ ಪಂಗಡ | | | | ಪರಿಶಿಷ್ಟ ಜಾತಿ | | | | ಎಲ್ಲಾ ಪಂಗಡಗಳು / ಗುಂಪುಗಳು | | | |
|---|---|---|---|---|---|---|---|---|---|---|---|---|
| ರಾಜ್ಯಗಳು | ೧೯೯೩-೯೪ | ೨೦೦೪-೦೫ | ೨೦೦೯-೧೦ | ೨೦೧೧-೧೨ | ೧೯೯೩-೯೪ | ೨೦೦೪-೦೫ | ೨೦೦೯-೧೦ | ೨೦೧೧-೧೨ | ೧೯೯೩-೯೪ | ೨೦೦೪-೦೫ | ೨೦೦೯-೧೦ | ೨೦೧೧-೧೨ |
| ಆಂಧ್ರಪ್ರದೇಶ | ೫೭ | ೫೯ | ೩೮ | ೨೩ | ೬೨ | ೪೦ | ೨೫ | ೧೩ | ೪೫ | ೩೦ | ೨೧ | ೯ |
| ಕರ್ನಾಟಕ | ೬೯ | ೫೧ | ೨೪ | ೩೨ | ೬೯ | ೫೪ | ೩೪ | ೩೩ | ೫೦ | ೩೪ | ೨೪ | ೨೧ |
| ಕೇರಳ | ೩೭ | ೫೪ | ೨೧ | ೩೯ | ೫೧ | ೩೧ | ೨೭ | ೧೬ | ೩೨ | ೨೦ | ೧೨ | ೮ |
| ತಮಿಳುನಾಡು | ೪೭ | ೪೨ | ೧೪ | ೨೬ | ೬೪ | ೪೯ | ೨೯ | ೧೯ | ೪೫ | ೩೧ | ೧೭ | ೧೨ |
| ಒಟ್ಟು ಭಾರತ | ೬೪ | ೬೦ | ೪೬ | ೪೩ | ೬೧ | ೫೧ | ೪೧ | ೨೯ | ೪೬ | ೩೮ | ೩೦ | ೨೨ |

ದತ್ತಾಂಶ ಮೂಲ : ಅರವಿಂದ ಪನಗರಿಯಾ ಮತ್ತು ವಿಶಾಲ ಮೋರೆ, ೨೦೧೩

**ನಕ್ಷೆ ೪ : ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿ ಸಾಮಾಜಿಕ ಪಂಗಡಗಳು ಮತ್ತು ಬಡತನ ೧೯೯೩-೯೪ರಿಂದ ೨೦೧೧-೧೨**




ವರ್ಗಗಳಿಗೆ ವಿಶೇಷವಾದ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ದತ್ತಾಂಶಗಳ ಕೊರತೆಯನ್ನು ಎದುರಿಸಬೇಕಾಗುತ್ತದೆ.

ಇದರನ್ವಯ ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿನ ಎಲ್ಲಾ ಸಾಮಾಜಿಕ ಪಂಗಡಗಳಲ್ಲಿ ದೇಶದಲ್ಲಿ ೧೯೯೩-೯೪ರಲ್ಲಿ ಶೇಕಡ ೪೬ರಷ್ಟು ಜನರು ಬಡವರಾಗಿದ್ದರೆ ೨೦೧೧-೧೨ರಲ್ಲಿ ಇದು ಶೇಕಡ ೨೨ಕ್ಕೆ ಇಳಿಕೆಯಾಯಿತು. ಇನ್ನು ದಕ್ಷಿಣ ಭಾರತದಲ್ಲಿ ೧೯೯೩-೯೪ರಲ್ಲಿ ಆಂಧ್ರಪ್ರದೇಶದಲ್ಲಿ ಶೇಕಡ ೪೫, ಕರ್ನಾಟಕದಲ್ಲಿ ಶೇಕಡ ೫೦ರಷ್ಟು, ಕೇರಳದಲ್ಲಿ ಶೇಕಡ ೩೨ರಷ್ಟು, ತಮಿಳುನಾಡಿನಲ್ಲಿ ಶೇಕಡ ೪೫ರಷ್ಟು ಜನರು ಬಡತನದಿಂದ ಬಳಲುತ್ತಿದ್ದರೆ ೨೦೧೧-೧೨ರಲ್ಲಿ ಇದು ಕ್ರಮವಾಗಿ ಶೇಕಡ ೯ಕ್ಕೆ ಆಂಧ್ರಪ್ರದೇಶದಲ್ಲಿ, ಶೇಕಡ ೨೧ಕ್ಕೆ ಕರ್ನಾಟಕದಲ್ಲಿ, ಶೇಕಡ ೮ಕ್ಕೆ ಕೇರಳದಲ್ಲಿ ಮತ್ತು ಶೇಕಡ ೧೨ಕ್ಕೆ ತಮಿಳುನಾಡಿನಲ್ಲಿ ಇಳಿಕೆಯಾಗಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ದಕ್ಷಿಣ ಭಾರತದಲ್ಲಿ ೧೯೯೩-೯೪ರಲ್ಲಿ ಮತ್ತು ೨೦೧೧-೧೨ರಲ್ಲಿಯೂ ಅತಿ ಹೆಚ್ಚಿನ ಬಡವರು ಕರ್ನಾಟಕದಲ್ಲಿಯೇ ಹೆಚ್ಚಿದೆ. ಆದರೆ ಇತರೆ ದಕ್ಷಿಣ ಭಾರತದ ಎಲ್ಲಾ ರಾಜ್ಯಗಳಲ್ಲಿ ಶೇಕಡ ೧೨ಕ್ಕಿಂತ ಕಡಿಮೆ ಜನರು ಬಡವರಾಗಿದ್ದಾರೆ. ೧೯೯೩-೯೪ರಲ್ಲಿ ದಕ್ಷಿಣದ ಎಲ್ಲಾ ರಾಜ್ಯಗಳು ಕೇರಳವನ್ನು ಹೊರತುಪಡಿಸಿದಂತೆ, ಶೇಕಡ ೪೫ರಿಂದ ೫೦ರಷ್ಟು ಜನರು ಬಡವರಾಗಿದ್ದರು. ಆದರೆ ೨೦೧೧-೧೨ರಲ್ಲಿ ಎಲ್ಲಾ ರಾಜ್ಯಗಳು, ಕರ್ನಾಟಕವನ್ನು ಹೊರತುಪಡಿಸಿದಂತೆ, ಶೇಕಡ ೧೨ಕ್ಕಿಂತ ಕಡಿಮೆಯ ಬಡವರನ್ನು ಹೊಂದಿವೆ. ದಕ್ಷಿಣ ಭಾರತದ ಇತರೆ ರಾಜ್ಯಗಳಲ್ಲಿ ಬಡವರ ಸಂಖ್ಯೆ ಕಡಿಮೆಯಾಗಿರುವಾಗ ಕರ್ನಾಟಕದಲ್ಲಿ ಬಡವರ ಇಳಿಕೆಯ ಪ್ರಮಾಣ ಅತ್ಯಂತ ಕಡಿಮೆಯಾಗಿದೆ. ಇದರರ್ಥ ಕರ್ನಾಟಕ ಸರಕಾರವು ಹಾಕಿಕೊಂಡ ಬಡತನ ನಿವಾರಣೆಯ ಕಾರ್ಯಕ್ರಮಗಳು ಅವುಗಳ ಗುರಿಯನ್ನು ಮುಟ್ಟುವಲ್ಲಿ ವಿಫಲವಾಗಿವೆ ಎಂದು ಅಂದಾಜಿಸಬಹುದು.

ಎಲ್ಲಾ ರಾಜ್ಯಗಳಲ್ಲಿ ಒಂದೇ ದಶಕದಲ್ಲಿ ಪ್ರಾರಂಭವಾದ ಬಡತನ ನಿವಾರಣೆಯ ಕಾರ್ಯಕ್ರಮಗಳ ಲಾಭಗಳು ಸಹ ಒಂದೇ ಅವಧಿಯಲ್ಲಿ ತಲುಪಬೇಕಾಗಿತ್ತು. ಆದರೆ ಕೇರಳವನ್ನು ಹೊರತುಪಡಿಸಿದಂತೆ, ಉಳಿದ ರಾಜ್ಯಗಳು ತಾವೇ ನಿಗದಿಪಡಿಸಿಕೊಂಡ ಗುರಿಗಳನ್ನು ಮುಟ್ಟಲು ವಿಫಲವಾಗಿವೆ. ಅದಕ್ಕೆ ಮೂಲ ಕಾರಣ ಆಯಾ ರಾಜ್ಯಗಳಲ್ಲಿರುವ ವಿವಿಧ ರೀತಿಯ ಪಕ್ಷಗಳ ಸರಕಾರಗಳು ಮತ್ತು ರಾಜಕೀಯ ನಾಯಕರ ಇಚ್ಛಾಶಕ್ತಿಯ ಕೊರತೆ. ಏಕೆಂದರೆ, ಈ ಎಲ್ಲಾ ನಾಯಕರ ರಾಜಕೀಯದ ಶಕ್ತಿ ಮತ್ತು ಯುಕ್ತಿ ಅಡಗಿರುವದೇ ಈ ಬಡವರ ಮೇಲೆ. ಅವರಿಗೋಸ್ಕರ ಹಲವಾರು ಕಾರ್ಯಕ್ರಮಗಳನ್ನು ರಚಿಸಿ ಚುನಾವಣೆಯ ಸಮಯದಲ್ಲಿ ಪ್ರಣಾಳಿಕೆಗಳನ್ನು ಬಿಡುಗಡೆಗೊಳಿಸಿ ಅವರ ಓಟುಗಳನ್ನು ಪಡೆದು ಅಧಿಕಾರ ಗಳಿಸಿದ ಮೇಲೆ ಅವರನ್ನು ಸಂಪೂರ್ಣವಾಗಿ ಕಡೆಗಣಿಸುತ್ತಾರೆ. ಕೇರಳದಲ್ಲಿ ಅತಿ ಹೆಚ್ಚು ಬಾರಿ ಎಡರಂಗ ನೇತೃತ್ವದ ಸರಕಾರಗಳು ಅಧಿಕಾರ ನಡೆಸಿರುವುದು ಕಾರಣವಿರಬಹುದೇ ಎಂಬ ಊಹೆ ಎಲ್ಲರಲ್ಲಿ ಹುಟ್ಟುವುದು ಸಹಜವೇ. ಆದರೆ ಈ ಊಹೆಯನ್ನು ಎಲ್ಲರೂ ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ಒಂದು ವೇಳೆ ಒಪ್ಪಿಕೊಂಡರೆ ತಮ್ಮ ಮತ್ತು ತಮ್ಮ ಪಕ್ಷಗಳ ಬಂಡವಾಳ (ಮುಖವಾಡ) ಬಯಲಾಗುತ್ತದೆ ಎಂಬ ಭಯ ಕಾಡುತ್ತಿರಬಹುದು. ಇದಕ್ಕೆ ಪಕ್ಷ ರಾಜಕಾರಣ ಮತ್ತು ಪ್ರಾದೇಶಿಕವಾಗಿ ವಿಭಿನ್ನವಾಗಿರುವ ಕೆಲವೊಂದು ಸೂಚಕಗಳು ಬಹಳ ಪ್ರಮುಖವಾದ ಪಾತ್ರ ವಹಿಸುತ್ತವೆ. ದೇಶದಲ್ಲಿರುವ ಎಲ್ಲಾ ರಾಜ್ಯಗಳು ತಮ್ಮಲ್ಲಿರುವ ಕಾರ್ಯಕ್ರಮಗಳನ್ನು ಸರಿಯಾಗಿ ನಿರ್ವಹಣೆ ಮಾಡಿ ಜಾರಿಗೊಳಿಸಿದರೆ ಎಲ್ಲಾ ರಾಜ್ಯಗಳು ಕೇರಳದ ಮಾದರಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಬಹುದು.

**ಹೆಚ್. ಆರ್. ಚನ್ನಕ್ಕಿ ಮತ್ತು ರಾಧಾ ಜಿ. ಮಣ್ಣೂರ್**
ಜನಸಂಖ್ಯಾ ಸಂಶೋಧನಾ ಕೇಂದ್ರ, ಧಾರವಾಡ ಮತ್ತು
ಸಹಾಯಕ ಉಪನ್ಯಾಸಕಿ, ಸಮಾಜ ಕಾರ್ಯ ವಿಭಾಗ
ಕರ್ನಾಟಕ ಕಲಾ ಮಹಾ ವಿದ್ಯಾಲಯ, ಧಾರವಾಡ

ಕಾವ್ಯಲೋಕ



# ಕೌದಿಯೊಳಗೆ ನೆತ್ತರದ ರೆಕ್ಕೆ

೧

ರಾತ್ರಿಯ ಇಕ್ಕೆಲಗಳಲ್ಲಿ ಇಕ್ಕಟ್ಟಾಗಿ
ಮೂಲೆಗೊರಗಿದ ಚಿಂದಿ ಚಿಂದಿಯಾದ ಕೌದಿಯೊಳಗೆ
ಶತಮಾನದ ಶಾಪಗಳ ಸಂಕೇತಗಳು

ವಾಸಿಯಾಗದ ಗಾಯಗಳ ಹೊತ್ತ
ಕೌದಿಯೊಳಗೆ
ಅಸಂಖ್ಯಾತ ಹುಣ್ಣುಗಳು
ನೆನಪುಗಳ ಮೂಟೆಯಲಿ
ಒದ್ದಾಡುವ ಕುದಿಬಿಂದು ಒಡಲೊಳಗೆ

ಕನಸುಗಳ ಸಮಾಧಿಯಾಗಿಸಿ ಮಧುಮಂಚಕೆ ಆಹ್ವಾನಿಸಿ
ಪ್ರಜ್ಞಾಹೀನತೆಯ ಒತ್ತೊತ್ತಿ ತುರುಕಿ ಬಡಿದು ಹರಿದು ಕೊಂದು ತಿಂದ
ಮಹಾರಾಜರಷ್ಟೋ...

ಚಕ್ರವರ್ತಿಗಳ ತೆವಲಿಗೆ ಬಲಿಯಾದ ಹೆಡಕುಗಳು
ಕಸೂತಿ ಹೆಣೆಯಲು ಹೆಣಗಾಡಿ
ಅರಮನೆಗಳ ಹೊಸ್ತಿಲಾಗಿ
ಸ್ವರ ಸಂಗೀತ ನುಡಿಸೋ ಶಿಲೆಗಳ ಕಂಬವಾಗಿ
ಆಧಾರ ಸ್ತಂಭದಂತೆ ಜೀವ ನುಡಿಯಾಗಿ ನಿಂತಿವೆ

ತಲೆಮಾರಿನ ತೂಕಡಿಕೆಗೆ
ಸಂತ್ವಾನದ ದೀಪವಾಗಿ
ಆಯಾಸಗೊಂಡ ನೆಲದ ಕರುಣೆಗೆ
ಸೌಜನ್ಯದ ಪ್ರತೀಕವಾಗಿ
ಆಕಾಶ ನುಂಗಿ ಒಳಗೊಳಗೆ ಸಂತನ ತೇರು ಕಟ್ಟಿ
ಇರುಳ ಬೇಲಿಯೊಳಗೆ ಚಂದದ ಬೆಳಕಾಗಿ ನಿಂತಿತು

೨

ಕಥೆ ಕಟ್ಟಿ ಲಾಲಿಹಾಡಿ ಜೋಗುಳವಾಡುವ ಇದರೊಳಗೆ
ಮೋರೆಯಾಚೆ ಮಲಗೋ ಕಂದಮ್ಮಗಳ ಕರುಳ ದನಿಯಿದೆ
ಗುಡಿಸಲ ಕೂಗಿನ ಒಡಲುರಿ ಮಡುಗಟ್ಟಿದೆ
ಮನುಷ್ಯರಂತೆ ಮಾತಾಡೋ ಕೌದಿಗೆ ಹೃದಯ ಬೆಸೆಯೋ ಕಣ್ಣುಗಳವೆ

ಕತ್ತಲ ಮುಖಗಳಗೆದುರಾಗಿ ಅಲೆದಾಡಿ ಬದುಕ ರೇಖೆಯೊಳಗೆ
ನಿಬ್ಬೆರಗಾಗಿ ತೇಲಾಡೋ ಗೀಜಗನ ಗೂಡು ಇದೆ

ಈ ಕೌದಿ ಅಸಂಖ್ಯಾತ ನಾವೆಗಳ
ತೇಲಾಡಿಸೋ ರೆಕ್ಕೆಯಾಗಿ
ಸೋಲರಿಯದ ರಾಗವಾಗಿ
ದಡ ಸೇರಿಸಿ ತಾಯಿ ಬೇರಾಗಿ
ನಿಶ್ಶಬ್ದವಾಗಿ ಜೀವ ಹೊಸೆಯೋ ಕರುಣೆಯ ತೈಲವಾಗಿದೆ



ಈ ಕೌದಿಯೊಳಗೆ ತಲೆಮಾರಿನ
ಗಾಯಗಳ ಹೊರೆಹೊತ್ತ ಸಂತತಿಯ ನೆಯ್ಗೆ
ಆಧುನಿಕತೆಯ ಮಾರಿಗೆ ಜೀವ ಮಿಡಿಸೋ ಬೆಸುಗೆ.

**ಗಿರಿಯಪ್ಪ ಆಸಂಗಿ**
ಕಿರಸೂರ – ಮುಖ್ಯ ಪೋಸ್ಟ್, ಬಾಗಲಕೋಟೆ ತಾಲೂಕು ಮತ್ತು ಜಿಲ್ಲೆ, ಪಿನ್ – ೫೮೭ ೧೧೧







**ನದಿಯ ಹಂಬಲ** (ಕವಿತೆಗಳು) *ಡಾ॥ ಅಶೋಕ ನರೋಡೆ*

**ಪುಟ : xlvi + ೨೧೦ = ೨೫೬   ಬೆಲೆ : ರೂ. ೨೫೦**

**ಸಂಕ್ರಮಣ ಪ್ರಕಾಶನ,** ೨ನೇ ಅಡ್ಡರಸ್ತೆ, ಜ್ಯೋತಿ ಬಡಾವಣೆ, ಯಲಚೇನಹಳ್ಳಿ, ಜೆ. ಪಿ. ನಗರ, ಬೆಂಗಳೂರು – ೭೮

*ಈವರೆಗೆ ಒಟ್ಟು ೧೦ ಕವನ ಸಂಕಲನಗಳನ್ನು ಪ್ರಕಟಿಸಿರುವ ಡಾ॥ ಅಶೋಕ ನರೋಡೆಯವರು ಅವೆಲ್ಲವುಗಳಿಂದ ೧೫೧ ಪ್ರಾತಿನಿಧಿಕವಾದ ಕವನಗಳನ್ನು ಆಯ್ಕೆ ಮಾಡಿ ಸಂಕ್ರಮಣ ಪ್ರಕಾಶನದಿಂದ 'ನದಿಯ ಹಂಬಲ' ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ಹೀಗಾಗಿ ಇದು ಅವರ ಕಾವ್ಯಯಾನದ ಗೊತ್ತು ಗುರಿಗಳನ್ನು ನಿರ್ದೇಶಿಸುವ ಸಂಕಲನವೇ ಹೊರತು 'ಸಮಗ್ರ ಕಾವ್ಯವಲ್ಲ'. ಈ ಪ್ರಾತಿನಿಧಿಕವಾದ ಸಂಕಲನದಲ್ಲಿ ಬಂಡಾಯ, ಕಾವ್ಯ ಮಾರ್ಗದಿಂದ ಆರಂಭಿಸಿ ಧ್ಯಾನಸ್ಥ ಬದುಕಿನ ಕಾವ್ಯ ಮಾರ್ಗದವರೆಗೆ ವಿಸ್ತೃತ ಬೆಳವಣಿಗೆಯಿದೆ. ಅವರ ಮೊದಲ ಕವನ ಸಂಕಲನ 'ಬೇಡಿಕೆ' ಪ್ರಕಟವಾದದ್ದು ಎಂಬತ್ತರ ದಶಕದಲ್ಲಿ. ಅದು ಬದಲಾವಣೆ ಬಯಸುವ ಬಂಡಾಯ ಚಳುವಳಿ ಹೆಚ್ಚು ಆಕ್ರೋಶಗೊಂಡಿದ್ದ ಕಾಲ. ಎಲ್ಲ ಜನಸಮುದಾಯಗಳು ಶ್ರಮಕ್ಕೆ ತಕ್ಕ ಪ್ರತಿಫಲವನ್ನು 'ಬೇಡಿಕೆ'ಗಳ ಮೂಲಕ ಗಟ್ಟಿ ದನಿಯಲ್ಲಿ ಮುಂದಿಡುತ್ತಿದ್ದ ಕಾಲ. ಇತ್ತೀಚೆಗಷ್ಟೇ ಹೊರಬಂದ 'ನಿಜವನುಂಡ ಘನ ಪರಿಮಳ' ತಾತ್ವಿಕ ಜಿಜ್ಞಾಸೆಗಳ ಮೂಲಕ ವಾಸ್ತವವನ್ನು ಎದುರಿಸುವ ಸಂದರ್ಭಗಳ ಭಿನ್ನ ಆಯಾಮಗಳ ಕಾಲ. ಅಲ್ಲಿಂದ ಇಲ್ಲಿಯವರೆಗೆ ಅಂತರಂಗ ಮತ್ತು ಬಹಿರಂಗಗಳಲ್ಲಿ ಕಾಲ ಮತ್ತು ಕ್ರಿಯೆಯ ಬದಲಾವಣೆಗಳೆಲ್ಲಕ್ಕೂ ನರೋಡೆಯವರ ಕಾವ್ಯ ಸಾಕ್ಷಿಯಾಗಿದೆ. ಕಾವ್ಯವೆನ್ನುವುದು ಯಾವಾಗಲೂ ವರ್ತಮಾನಕ್ಕೆ ಪ್ರತಿಕ್ರಿಯೆ ಆಗಿರುತ್ತದೆ. ಸಾಮಾಜಿಕ, ರಾಜಕೀಯ, ಆರ್ಥಿಕ ಸಂಗತಿಗಳಿಂದ ಉಂಟಾಗುವ ಬದಲಾವಣೆಗಳಿಗೆ ಪ್ರತಿಕ್ರಿಯಾತ್ಮಕವಾಗಿಯೇ ರೂಪುಗೊಂಡಿರುತ್ತದೆ. "ಖಡ್ಗವಾಗಿ ಝಳಪಿಸಿ ಬಡವರ ಪ್ರಾಣಮಿತ್ರ / ವಾದ ಕಾವ್ಯಕಹಳೆಯಾಗಿ ಮೊಳಗುವುದೆಂದು?" ಎಂದು ಪ್ರಶ್ನಿಸಿ "ಸಮಗ್ರ ಕರ್ನಾಟಕದ ಅಖಂಡತೆ / ಸಮಸ್ತ ಕನ್ನಡಿಗರ ಏಳಿಗೆಗೆ / ಬದ್ಧ ನನ್ನ ಕಾವ್ಯ" ಎಂದು ತಮ್ಮ ಕಾವ್ಯಬದ್ಧತೆಯನ್ನು ಪ್ರಕಟಪಡಿಸುತ್ತಾರೆ. ನದಿ ಇವರ ಕಾವ್ಯದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿರುವ ರೂಪಕವಾಗಿದೆ. ನದಿ ಸದಾ ಹರಿಯುತ್ತಲೇ ಇರುತ್ತದೆ. ನಿರಂತರ ಚಲನಶೀಲತೆ ಅದರ ಗುಣ. ಹಾಗೆಯೇ ನರೋಡೆಯವರ ಬದುಕು ಮತ್ತು ಕಾವ್ಯಕ್ರಿಯೆಗೆ ನದಿ ಸದಾ ರೂಪಕವಾಗಿ ಬಳಕೆಯಾಗುತ್ತಾ ಬಂದಿದೆ. "ನನ್ನೊಳಗೆ ನದಿ; ನದಿಯೊಳಗೆ ನಾನು/ಇಳಿದಂತೆ ಆಳ ಆಳಕೆ; ಹಚ್ಚ/ಹಸಿರು ಪೈರಿನ ಬೇರು–ಕಾಂಡ–ಎಲೆ/ಗಳ ತುಂಬ ಹರಿದಾಡುವೆವು" ಎಂಬ ಜೀವನೋತ್ಸಾಹ ಇಲ್ಲಿನ ಹಲವಾರು ಕವಿತೆಗಳಲ್ಲಿ ಪುಟಿಯುತ್ತದೆ. "ಬರದ ನಾಡಿನಿಂದ ಬಂದ ನನಗೆ ನದಿಯ ಬಗ್ಗೆ ಅದಮ್ಯ ಸೆಳೆತ." ಎನ್ನುವ ಅಶೋಕ ನರೋಡೆ ಕಾವ್ಯದಲ್ಲಿ ಆ ಸೆಳೆತವಿದೆ.*




**ಅಮ್ಮನ ನೆನಪು – ಸಂಪುಟ – ೧**  *ಚಂದ್ರಕಾಂತ ವಡ್ಡು*

**ಪುಟ : ೨೦೦   ಬೆಲೆ : ರೂ. ೧೫೦**

**ಅಂಕುರ ಪ್ರಕಾಶನ,** ನಂ. ೧೧೪೮, ೧ನೇ ಮಹಡಿ, ೨ನೇ ಅಡ್ಡರಸ್ತೆ, ಪಡುವಣ ರಸ್ತೆ, ಟಿ. ಕೆ. ಬಡಾವಣೆ, ಮೈಸೂರು – ೫೭೦ ೦೨೩

*ಜಗತ್ತಿನಲ್ಲಿ ಕೆಟ್ಟ ಮಕ್ಕಳು ಇರಬಹುದು; ಆದರೆ ಕೆಟ್ಟ ತಾಯಿ ಇರಲು ಸಾಧ್ಯವಿಲ್ಲ ಎಂಬುದು ಜಗತ್ತಿನಾದ್ಯಂತ ಇರುವ ಒಂದು ಅನುಭವದ ಮಾತು. ಪ್ರತಿಯೊಂದನ್ನು ಧರಿಸುವ ಗುಣ ಇರುವುದರಿಂದ ಭೂಮಿಯನ್ನು ಧಾತ್ರಿ ಎಂದು, ಪ್ರತಿಯೊಂದನ್ನು ತಾಳಿಕೊಳ್ಳುವ ಗುಣ ಇರುವುದರಿಂದ ತಾಯಿಯನ್ನು ತಾಳ್ಮೆಯ ಸಾಕಾರಮೂರ್ತಿ ಎಂದು ಕರೆಯಲಾಗಿದೆ. ಇಂಥ ತಾಯಂದಿರ ವೈವಿಧ್ಯಮಯವಾದ ಗುಣಲಕ್ಷಣಗಳನ್ನು, ಅವರು ಅನುಭವಿಸುವ ಕಷ್ಟ–ಕಾರ್ಪಣ್ಯಗಳನ್ನು ಕುರಿತ ಲೇಖನಗಳನ್ನು ಚಂದ್ರಕಾಂತ ವಡ್ಡು ಅವರು 'ಅಮ್ಮನ ನೆನಪು' ಸಂಪುಟ–೧ ಎಂಬ ಕೃತಿಯಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಸಂಪುಟ – ೧ ಎಂದು ಇದನ್ನು ಕರೆದಿರುವುದರಿಂದ ಸಂಪುಟ – ೨ ಕೂಡ ಇದೆ ಎಂದಂತಾಯ್ತು. ತಾಯಿಯ ವೈವಿಧ್ಯಪೂರ್ಣ ವ್ಯಕ್ತಿತ್ವವನ್ನು ಅಕ್ಷರ ರೂಪದಲ್ಲಿ ಹಿಡಿದಿಡಲು ಎಷ್ಟು ಸಂಪುಟಗಳಾದರೂ ಸಾಕಾಗುವುದಿಲ್ಲ. ಈ ಪುಸ್ತಕಗಳ "ಮಾರಾಟದ ಪೂರ್ಣ ಹಣ ಅಸಹಾಯಕ ಅಮ್ಮಂದಿರ ಅನಾಥ ಮಕ್ಕಳ ಒಳಿತಿಗೆ" ಎಂಬ ಅರ್ಪಣೆ ಚಂದ್ರಕಾಂತ ವಡ್ಡು ಸಾಮಾಜಿಕ ಧೋರಣೆಗೆ ಪ್ರತೀಕವಾಗಿದೆ. ಚೈನಾದ ಆಕ್ಯುಪಂಕ್ಚರ್‌ನಲ್ಲಿ ಅನೇಕ ಸಿದ್ಧಾಂತಗಳಿವೆ. ಅವುಗಳಲ್ಲಿ ತಾಯಿ–ಮಗುವಿನ ಸಿದ್ಧಾಂತವೂ ಇದೆ. ಇದರ ಪ್ರಕಾರ "ಮಗು ಅತ್ತರೆ ತಾಯಿಯೂ ಅಳುತ್ತಾಳೆ. ಒಂದು ಕಣ್ಣಲ್ಲಿ ನೀರು ಬಂದರೆ ಇನ್ನೊಂದು ಕಣ್ಣಿನಲ್ಲಿಯೂ ನೀರು ಬರುತ್ತದೆ. ಒಂದು ಅವಯವಕ್ಕೆ ಏನಾದರೂ ಆದರೆ ಇನ್ನೊಂದು ಸಂಕಟಪಡುತ್ತದೆ ಎಂದು ಇದರ ಅರ್ಥ" ಎಂದು ಇಲ್ಲಿ "ಅವಳು ಅನೇಕರ ತಾಯಿ!" ಎಂಬ ಲೇಖನ ಬರೆದಿರುವ ಡಾ॥ ಸುನಂದಾ ಕುಲಕರ್ಣಿ ಅಭಿಪ್ರಾಯಪಡುತ್ತಾರೆ. ಮಕ್ಕಳು ಅಳುವಂಥ ಸಂದರ್ಭಗಳು ಬಂದಾಗ ತಾಯಿ ಮುಂದೆ ನಿಂತು ಎಷ್ಟೇ ಕಷ್ಟವಾದರೂ ಪರಿಹರಿಸುತ್ತಾಳೆ ಎಂಬುದನ್ನು ನೆನೆದಾಗ ಅಮ್ಮನ ಮಹತ್ವ ಗೊತ್ತಾಗುತ್ತದೆ. ಇಲ್ಲಿರುವ ಅನೇಕ ಲೇಖನಗಳನ್ನು ಓದಿದಾಗ ಎಲ್ಲರ ತಾಯಂದಿರೂ ಭಿನ್ನ ಭಿನ್ನ ಆಯಾಮಗಳನ್ನುಳ್ಳವರು ಎಂಬುದು ಗೊತ್ತಾಗುತ್ತದೆ. ಅಂಥ ಭಿನ್ನ ಭಿನ್ನ ಆಯಾಮಗಳಿದ್ದರೂ ಅವರೆಲ್ಲರದು ಮಕ್ಕಳು ಸುಖವಾಗಿ ಇರಬೇಕು ಎಂಬ ದೃಷ್ಟಿಕೋನ. ಕೆಲವರು ಖ್ಯಾತನಾಮರು ಇದ್ದಾಗ ಅವರ ಪ್ರಭಾವ ವಲಯದಲ್ಲಿ ಅವರ ಪತ್ನಿಯರ ವ್ಯಕ್ತಿತ್ವ ಮಸುಕಾಗಿಬಿಟ್ಟಿರುತ್ತದೆ. ಅಂಥ ತಾಯಂದಿರ ಬಗ್ಗೆ ತಾರಿಣಿ ಚಿದಾನಂದ ಮತ್ತು ವಾಮನ ಬೇಂದ್ರೆ ಬರೆದಿದ್ದಾರೆ. ಕವಿಗಳ, ದಾರ್ಶನಿಕರ ಸಂಸಾರದಲ್ಲಿ ಸಮಸಮನಾಗಿ ನೊಗಹೊತ್ತ ಹೆಣ್ಣುಮಕ್ಕಳ ಸ್ವಭಾವ, ವರ್ತನೆಗಳ ದಾಖಲೆ ಐತಿಹಾಸಿಕ ಮಹತ್ವ ಪಡೆಯುತ್ತದೆ.*

**ಸಂತೆಯೊಳಗೊಂದು ಮನೆ** (ದಲಿತ ಸ್ತ್ರೀವಾದಿ ಚಿಂತನೆಯ ಲೇಖನಗಳು)  *ಬಿ. ಯು. ಸುಮಾ*

**ಪುಟ : xviii + ೧೫೮ = ೧೭೬   ಬೆಲೆ : ರೂ. ೧೪೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧




*ಅತ್ಯಂತ ಸೂಕ್ಷ್ಮ ಮನಸ್ಸಿನ ಹಾಗೂ ಗಂಭೀರ ಅಧ್ಯಯನದ ಲೇಖಕಿ ಬಿ. ಯು. ಸುಮಾ ಅವರು ಅಲ್ಲಿ ಇಲ್ಲಿ ಸಾಂದರ್ಭಿಕವಾಗಿ ಬರೆದ ವಿಷಯ, ಮಾಡಿದ ಭಾಷಣಗಳನ್ನೆಲ್ಲ ಲೇಖನ ರೂಪಕ್ಕಿಳಿಸಿ 'ಸಂತೆಯೊಳಗೊಂದು ಮನೆ' ಎಂಬ ಹೆಸರಿನ ಪುಸ್ತಕ ರೂಪದಲ್ಲಿ ಕೊಟ್ಟಿದ್ದಾರೆ. ಇಲ್ಲಿ ಒಟ್ಟುಗೂಡಿಸಿರುವ ೨೧ ಲೇಖನಗಳನ್ನು ಮೂರು ಭಾಗ ಮಾಡಿಕೊಂಡು ತಮ್ಮ ಚಿಂತನೆಗಳನ್ನು ಪ್ರಕಟಪಡಿಸುತ್ತಾರೆ. ಮೊದಲ ಭಾಗದಲ್ಲಿ ರಾಜಕಾರಣ ಹಾಗೂ ಚಳುವಳಿಗಳ ತಾತ್ವಿಕ ನಿಲುವುಗಳನ್ನು ಚರ್ಚಿಸಿ ಹಲವು ಒಳನೋಟಗಳನ್ನು ಓದುಗರಿಗೆ ನೀಡಿದ್ದಾರೆ. ಎರಡನೇ ಭಾಗದಲ್ಲಿ ಪಕ್ಷ ರಾಜಕಾರಣ ಹಾಗೂ ವ್ಯಕ್ತಿಗತ ಸೈದ್ಧಾಂತಿಕ ಚರ್ಚೆಗಳನ್ನು ನಮ್ಮ ಮುಂದಿಡುತ್ತಾರೆ. ಮೂರನೇ ಭಾಗದ ಲೇಖನಗಳಲ್ಲಿ ಸಾಹಿತ್ಯ, ಸಂಸ್ಕೃತಿ, ಕವಿಗಳ ಮಹತ್ವದ ಕೊಡುಗೆ ಮುಂತಾದ ವಿಷಯಗಳ ಬಗ್ಗೆ ನಮ್ಮ ಗಮನ ಸೆಳೆಯುತ್ತಾರೆ. ಮೊದಲಿಗೇ ಹೇಳಬಹುದಾದ ಮಾತೆಂದರೆ ಬಿ. ಯು. ಸುಮಾ ಅವರು ತಳಸಂಸ್ಕೃತಿಯಿಂದ ಬಂದವರು, ಅವೈದಿಕ ಮನಸ್ಥಿತಿ ಉಳ್ಳವರು ಮತ್ತು ವಿದೇಶಗಳ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಬಲ್ಲವರು. ಹೀಗಾಗಿ ಯಾವುದೇ ಪೂರ್ವಗ್ರಹಗಳಿಗೆ ಒಳಗಾಗದೆ ಎಲ್ಲವನ್ನೂ ಸಮತೋಲನ ದೃಷ್ಟಿಕೋನದಿಂದ ನೋಡಿ ಹೊಸ ರೀತಿಯ ಆಲೋಚನೆಗಳಿಗೆ ದಾರಿ ಮಾಡಿಕೊಟ್ಟಿದ್ದಾರೆ. ಹಾಗಂತ ಅವರ ಎಲ್ಲ ಆಲೋಚನೆಗಳನ್ನು ನಾವು ಒಪ್ಪಿಕೊಳ್ಳಬೇಕು ಅಂತಲ್ಲ. ಆದರೆ ಚರ್ಚೆಗೆ, ಭಿನ್ನ ಆಲೋಚನೆಗಳಿಗೆ ದಾರಿ ತೆರೆದಿದ್ದಾರೆ ಎಂಬುದಷ್ಟೇ ನನ್ನ ಮಾತಿನ ಅರ್ಥ. ಮೊದಲ ಭಾಗದ ಆರು ಬರಹಗಳು ತಳಸಮುದಾಯಗಳ ಇಂದಿನ ಬದುಕನ್ನು ಅವುಗಳ ಸಂಕೀರ್ಣತೆ ಮತ್ತು ಚಲನಶೀಲತೆಗಳಲ್ಲಿ ಗಮನಿಸುತ್ತವೆ. ಕೋಮುವಾದ ಮತ್ತು ಜಾತಿವಾದಗಳೂ ಭಾರತೀಯ ರಾಜಕಾರಣದ ಸ್ಥಾಯಿಭಾವಗಳು ಎನ್ನುವ ಸುಮಾ ಅವರು "ಅಧಿಕಾರ ರಾಜಕಾರಣ ಹಿಂಸೆ, ಸ್ವಾರ್ಥ, ದುರಾಸೆ, ಕ್ರೌರ್ಯ ಮತ್ತು ಶೋಷಣೆಯನ್ನು ಹುಟ್ಟುಹಾಕುತ್ತದೆ" ಎನ್ನುವ ನಿಲುವಿಗೆ ಬರುತ್ತಾರೆ. ಇಂಥ ರಾಜಕಾರಣವನ್ನು ಬದಲಾಯಿಸಲು ಇವಾನ್ ಇಲ್ಯಿಚ್‌ನ 'ಡಿಸ್ಕೂಲಿಂಗ್' ಪರಿಕಲ್ಪನೆ ನೆರವಿಗೆ ಬರುತ್ತದೆ ಎನ್ನುತ್ತಾರೆ. ಶೈಕ್ಷಣಿಕ ವಿಧಾನಗಳಾಚೆಗೆ ಮಕ್ಕಳ ಪ್ರತಿಭೆಯನ್ನು ಗುರುತಿಸುವುದು ಡಿಸ್ಕೂಲಿಂಗ್. ಹೀಗೆ ಇವೆರಡು ಭಾಗದಲ್ಲಿಯೂ ಗಂಭೀರವಾದ ಚಿಂತನೆಗಳನ್ನು ಸುಮಾ ಕಟ್ಟಿಕೊಟ್ಟಿದ್ದಾರೆ.*

– ***ಡಾ॥ ರಂಗಾರೆಡ್ಡಿ ಕೋಡಿರಾಂಪುರ,*** *ಬೆಂಗಳೂರು – ೫೬೦ ೦೫೮*



# ಮಂಗಳದ ಮಾರ್ಗದರ್ಶನ

**ಕಿ**ತ್ತಳೆ ಬಣ್ಣದ ಮಂಗಳ ಗ್ರಹ ಸಂಜೆಯ ಆಕಾಶದಲ್ಲಿಯೇ ಕಾಣುತ್ತದೆ. ವೃಶ್ಚಿಕ–ಧನು ರಾಶಿಗಳ ಮೂಲಕ ಹಾದುಹೋಗುವ ಆಕಾಶಗಂಗೆಯನ್ನು ಗುರುತಿಸಲು ಇದೇ ಮಾರ್ಗದರ್ಶಿಯಾಗುತ್ತದೆ. ೮ರಂದು ಚಂದ್ರನ ಪಕ್ಕ ಇರುವ ಸಂದರ್ಭ ಗುರುತಿಸಲು ಸಹಾಯಕವಾಗುತ್ತದೆ. ಮಂಗಳದ ಆಸುಪಾಸಿನಲ್ಲಿರುವ ಧನು ರಾಶಿಯ ನೆಬ್ಯುಲ ಮತ್ತು ಗುಚ್ಛಗಳನ್ನು ಗುರುತಿಸಲು ಇದು ಸದವಕಾಶ. ಛಾಯಾಗ್ರಹಣಕ್ಕೂ ಇದು ಒಳ್ಳೆಯ ನೋಟಗಳನ್ನು ಒದಗಿಸುತ್ತದೆ. ಅದರ ಚಿತ್ರವನ್ನು ಪ್ರತಿ ದಿನವೂ ತೆಗೆಯುತ್ತಿದ್ದರೆ ಆಕಾಶಗಂಗೆಯ ವಿವಿಧ ಭಾಗಗಳು, ನೆಬ್ಯುಲಾಗಳು ದಾಖಲಾಗುತ್ತವೆ. ಕ್ಯಾಮೆರಾ ಬಳಕೆಗೆ, ಎಕ್ಸ್‌ಪೋಷರ್‌ಅನ್ನು ನಿರ್ಧರಿಸುವುದಕ್ಕೆ ಈ ಪ್ರಯತ್ನಗಳು ಬಹಳ ಸಹಕಾರಿಯಾಗುತ್ತವೆ.

ಸಂಜೆಯ ಆಕಾಶದ ಪಶ್ಚಿಮದ ಭಾಗ ಹೀಗೆ ನಕ್ಷತ್ರಗಳ ದಟ್ಟಣೆಯಿಂದ ಕಂಗೊಳಿಸುತ್ತಿದ್ದರೆ ಪೂರ್ವ ಭಾಗ ಖಾಲಿ ಎನಿಸುತ್ತದೆ. ಅಲ್ಲಿ ಗುರುತಿಸಬಹುದಾದ ಚೌಕವೇ ನಕುಲ (ಪೆಗಸಸ್). ನೆತ್ತಿಯ ಮೇಲೆ ಕಾಣುವ ಬೇಸಿಗೆ ತ್ರಿಕೋಣ – ಶ್ರವಣ, ಅಭಿಜಿತ್ ಮತ್ತು ಹಂಸಾಕ್ಷಿ ನಕ್ಷತ್ರಗಳಿಂದಾದದ್ದು. ಇವು ಕ್ರಮವಾಗಿ ಗರುಡ (ಅಕ್ವಿಲಾ), ವೀಣಾ (ಲೈರಾ) ಮತ್ತು ರಾಜಹಂಸ (ಸಿಗ್ನಸ್) ಈ ಪುಂಜಗಳಲ್ಲಿವೆ. ಆಗ್ನೇಯ ದಿಕ್ಕಿನಲ್ಲಿ ಕಾಣುವ ಎರಡು ಪ್ರಕಾಶಮಾನ ನಕ್ಷತ್ರಗಳು ಬಕ (ಗ್ರುಸ್) ಈ ಪುಂಜಕ್ಕೆ ಸೇರಿವೆ. ಈಶಾನ್ಯದಲ್ಲಿ ಕುಂತಿ (ಕೆಸಿಯೋಪಿಯ) ಮತ್ತು ದ್ರೌಪದಿ (ಆಂಡ್ರೊಮಿಡಾ) ಇವು ಕಾಣುತ್ತವೆ.

ಉ
ಲಘು ಸಪ್ತರ್ಷಿ ಮಂಡಲ
ಕುಂತಿ
ದ್ರೌಪದಿ
ರಾಜಹಂಸ
ವೀಣಾ
ನಕುಲ
ಭೀಮ
ಪೂ
ಮೀನ
ಗರುಡ
ಪ
ಉರಗಧರ
ಶುಕ್ರ
ತುಲಾ
ಕುಂಭ
ಮಕರ
ಮಂಗಳ
ಶನಿ
ವೃಶ್ಚಿಕ
ಧನು
ದಕ್ಷಿಣ ಮೀನ
ಬಕ
ದ

ಕಳೆದ ತಿಂಗಳು ಸಂಜೆಯ ಆಕಾಶದಲ್ಲಿ ಹರಡಿಕೊಂಡಿದ್ದ ಗ್ರಹಗಳಲ್ಲಿ ಮೂರು ಈಗ ಪಶ್ಚಿಮದಲ್ಲಿ ಗುಂಪುಗೂಡಿವೆ. ಶುಕ್ರ, ಶನಿ ಮತ್ತು ಮಂಗಳ ಇವು ಸಂಜೆ ದಿನೇ ದಿನೇ ಸ್ಥಳ ಬದಲಿಸುವುದನ್ನು ಕಾಣಬಹುದು. ಶುಕ್ರವನ್ನು ಗುರುತಿಸಲು ಯಾರ ಸಹಾಯವೂ ಬೇಕಿಲ್ಲ. ಇದು ಕ್ರಮೇಣ ಮೇಲೇರುತ್ತಿದೆ ಎನ್ನಿಸುತ್ತದೆ. ತಿಂಗಳ ಕೊನೆಗೆ ಶನಿಯ ಪಕ್ಕದಲ್ಲಿಯೇ ಕಾಣುತ್ತದೆ. ಶನಿ ದಿನ ದಿನಕ್ಕೆ ಕೆಳಗಿಳಿಯುತ್ತಿದೆಯೇ? ಅಥವಾ ಶುಕ್ರ ಮೇಲೇರುತ್ತಿದೆಯೇ ? ನಮ್ಮ ಕಣ್ಣಿಗೆ ಕಾಣುವ ಸತ್ಯ ಮೊದಲನೆಯದು. ಶನಿ ಕೆಳಗಿಳಿಯುತ್ತಿರುವುದು. ವಾಸ್ತವದಲ್ಲಿ ಶುಕ್ರ ಮೇಲೇರುತ್ತಿದೆ; ಶನಿ ಇದ್ದಲ್ಲೇ ಇದೆ. ಈ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳಲು ನಾವು ಎರಡು ಭಿನ್ನ ದೃಷ್ಟಿಕೋನಗಳಿಂದ ಈ ಚಲನೆಯನ್ನು ಗಮನಿಸಬೇಕು. ಸಂಜೆ ಸುಮಾರು ಏಳು ಗಂಟೆಗೆ ಸ್ಪಷ್ಟವಾಗಿ ಕಾಣುವ ಶುಕ್ರ, ಶನಿ ಇನ್ನಿತರ ನಕ್ಷತ್ರಗಳು, ಎಂಟು–ಒಂಭತ್ತು ಗಂಟೆಗೆ ದಿಗಂತದ ಅಂಚಿಗೆ ಸರಿದು ಕಾಣದಂತಾಗುತ್ತವೆ. ಇದಕ್ಕೆ ಕಾರಣ ಭೂಮಿಯ ಆವರ್ತನೆ. ಸೂರ್ಯ, ಚಂದ್ರ ಮೊದಲಾಗಿ ಎಲ್ಲ ಕಾಯಗಳೂ ಪಶ್ಚಿಮದಲ್ಲಿ ಕಂತುವುದಕ್ಕೆ ಕಾರಣ ಇದೇ ಆವರ್ತನೆ. ಈ ಚಲನೆ ಇಲ್ಲದಿದ್ದಲ್ಲಿ ಆಯಾ ಚುಕ್ಕೆಗಳು ಅದದೇ ಸ್ಥಳಗಳಲ್ಲಿ ಇರುತ್ತಿದ್ದವು. ಭೂಮಿಗೆ ಇನ್ನೊಂದು ಚಲನೆ ಇದೆ – ಪರಿಭ್ರಮಣೆ. ಇದರ ಪರಿಣಾಮವಾಗಿ ಸೂರ್ಯ ದಿನದಿನಕ್ಕೆ 'ಮೇಲೇರಿ'ದಂತೆ ತೋರುತ್ತದೆ. ಮೇಲೆ ಎಂದರೆ ಏನು? ಇದಕ್ಕೆ ನಕ್ಷತ್ರಗಳ ಆಧಾರ ಅವಶ್ಯಕ. ನಕ್ಷೆಯನ್ನು ಗಮನಿಸಿ.



ಅಕ್ಟೋಬರ್ ೪ರ ಮುಸ್ಸಂಜೆ ಶುಕ್ರ ಮತ್ತು ಚಂದ್ರ

ಪಶ್ಚಿಮದ ಅಂಚಿನಲ್ಲಿರುವುದು ತುಲಾ, ಅಲ್ಲಿಂದ ಮೇಲೆ ವೃಶ್ಚಿಕ, ಅಲ್ಲಿಂದ ಮೇಲೆ ಧನು, . . . .. ... ಹೀಗೆ. ಅದಾದ ಮೇಲೆ ನಮ್ಮ ದೃಷ್ಟಿಕೋನದಿಂದ 'ಕೆಳಗೆ' ಆಗುತ್ತದೆ. ಆದ್ದರಿಂದ 'ಮೇಲೆ' 'ಕೆಳಗೆ' ಪದಗಳ ಬದಲು ಪೂರ್ವ ಎನ್ನುವುದು ಸೂಕ್ತವಾಗುತ್ತದೆ. ಶುಕ್ರ ದಿನೇ ದಿನೇ ಪೂರ್ವಕ್ಕೆ ಅಂದರೆ ತುಲಾದಿಂದ ವೃಶ್ಚಿಕದತ್ತ ಚಲಿಸುತ್ತದೆ. ಸೂರ್ಯ ಕೂಡ ಇದೇ ದಿಕ್ಕಿಗೆ ಇನ್ನೂ ನಿಧಾನವಾಗಿ ಚಲಿಸುವುದರಿಂದ ಶುಕ್ರದ ಚಲನೆ ನಮಗೆ ಸ್ಪಷ್ಟವಾಗಿ ತೋರುವುದಿಲ್ಲ. ಆದರೆ ಜ್ಯೇಷ್ಠಾ ನಕ್ಷತ್ರವೇ ದಿನೇ ದಿನೇ ದಿಗಂತದತ್ತ ಸರಿದಂತೆ ಕಾಣುತ್ತದೆ. ಶನಿ, ಹೆಸರೇ ಹೇಳುವಂತೆ, ಬಹಳ ನಿಧಾನ. ಆದ್ದರಿಂದ ಅದು ನಕ್ಷತ್ರದ ಜೊತೆಗೇ ಪಶ್ಚಿಮಕ್ಕೆ ಸರಿಯುವಂತೆ ಕಾಣುತ್ತದೆ.

ಈ ತಿಂಗಳುದ್ದಕ್ಕೂ ಈ ಗ್ರಹಗಳ ಚಲನೆಯನ್ನು ಗಮನಿಸಿದರೆ ಭೂಮಿಯ ಚಲನೆ, ಶುಕ್ರದ ಚಲನೆ, ಮತ್ತು ಶನಿಯ ಚಲನೆ ಮೂರನ್ನೂ ಅರ್ಥ ಮಾಡಿಕೊಳ್ಳಬಹುದು. ಗುರುಗ್ರಹ ಮುಂಜಾವಿನಲ್ಲಿ ಕಾಣುತ್ತದೆ. ೨೮ರಂದು ಚಂದ್ರನ ಪಕ್ಕ ಕಾಣುವುದು. ಬುಧ ಗ್ರಹವನ್ನು ೧೧ರಂದು ಅದರ ಪಕ್ಕ ಕಾಣಬಹುದು. ಆ ಮುಂದೆ ಕಾಣದಾಗುವ ಬುಧ ಗ್ರಹ ಸೂರ್ಯನ ಆಚೆ ಬದಿಯಿಂದ ಹಾದುಹೋಗುವ ಘಟನೆ ೨೭ರಂದು ನಡೆಯುತ್ತದೆ. ಮುಂದಿನ ತಿಂಗಳಲ್ಲಿ ಬುಧ ಸಂಜೆಗೆ ಕಾಣುತ್ತದೆ.

ಈ ತಿಂಗಳ ಹುಣ್ಣಿಮೆಯಂದು ಚಂದ್ರ ಭೂಮಿಯಿಂದ ಕನಿಷ್ಠ ದೂರದಲ್ಲಿರುವುದರಿಂದ ದೊಡ್ಡದಾಗಿ ಕಾಣಬಹುದು; ಕಡಲಿನಲ್ಲಿ ಉಬ್ಬರ ಎಂದಿಗಿಂತ ಜೋರು ಇರುತ್ತದೆ. ಈ ತಿಂಗಳ ಮುಂಜಾವಿನಲ್ಲಿ ಓರಿಯನಿಡ್ಸ್ ಉಲ್ಕಾವೃಷ್ಟಿಯಿದೆ. ತಿಂಗಳುದ್ದಕ್ಕೂ ಕಾಣಬಹುದಾದ ಉಲ್ಕೆಗಳ ಸಂಖ್ಯೆಯಲ್ಲಿ ೨೦ರಂದು ಸ್ವಲ್ಪ ಹೆಚ್ಚಳ ಕಾಣುವುದು.

**ಅಕ್ಟೋಬರ್ ತಿಂಗಳ ಖಗೋಳ ದಿನಚರಿ**

೧ ಅಮಾವಾಸ್ಯೆ ೦೫:೪೧ಕ್ಕೆ
೩ ಶುಕ್ರ – ಚಂದ್ರ ಜೋಡಿ *
೪ ಚಂದ್ರ – ಭೂಮಿಯ ನಡುವೆ ಗರಿಷ್ಠ ದೂರ
೬ ಶನಿ – ಚಂದ್ರ ಜೋಡಿ *
೮ ಮಂಗಳ – ಚಂದ್ರ ಜೋಡಿ *
೯ ಚಾಂದ್ರಮಾಸದ ಮೊದಲ ಪಾದ
೧೧ ಬುಧ – ಗುರು ಜೋಡಿ * (ಮುಂಜಾವು)
೧೬ ಹುಣ್ಣಿಮೆ ರಾತ್ರಿ ೯:೫೩ಕ್ಕೆ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
೨೦ ಬುಧ – ಚಿತ್ರಾ ಜೋಡಿ ಓರಿಯನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ (ಮುಂಜಾವು)
೨೨ ಚಾಂದ್ರಮಾಸದ ಕೊನೆಯ ಪಾದ
೨೬ ಶುಕ್ರ – ಜ್ಯೇಷ್ಠಾ – ಶನಿ ಗುಂಪು *
೨೭ ಬುಧ ಗ್ರಹದ ಯುತಿ
೨೮ ಗುರು – ಚಂದ್ರ ಜೋಡಿ * (ಮುಂಜಾವು)
೩೦ ಶನಿ – ಶುಕ್ರ ಜೋಡಿ * ಅಮಾವಾಸ್ಯೆ ೨೩:೦೮ಕ್ಕೆ
೩೧ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ

* (ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ,** ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೧

# ಭಾರತದ ಕೃಷಿಯ ಮೇಲೆ ಹವಾಮಾನ ವೈಪರೀತ್ಯ ಪರಿಣಾಮ ಮತ್ತು ಪರಿಹಾರಗಳು

ಹವಾಮಾನ ವೈಪರೀತ್ಯ ತಡೆಯುವುದಕ್ಕಾಗಿ ವಿಶ್ವದ ೧೯೬ ದೇಶಗಳು ಇತ್ತೀಚೆಗೆ ಪ್ಯಾರಿಸ್‌ನಲ್ಲಿ ಸಭೆ ನಡೆಸಿ ಸುದೀರ್ಘ ಸಮಾಲೋಚನೆ, ಕೊಸರಾಟದ ನಂತರ ಕೊನೆಗೂ ಒಪ್ಪಂದಕ್ಕೆ ಬಂದಿರುವುದು ಈ ಭೂಮಿ ಮತ್ತು ಸಮಸ್ತ ಜೀವಸಂಕುಲದ ಉಳಿವಿನ ಹಾದಿಯಲ್ಲಿ ಅತ್ಯಂತ ಮಹತ್ವದ ಹೆಜ್ಜೆ. 'ಜಾಗತಿಕ ತಾಪಮಾನದ ಹೆಚ್ಚಳ ಮುಂದಿನ ೫೦ ವರ್ಷಗಳಲ್ಲಿ ಔದ್ಯಮಿಕ ಕ್ರಾಂತಿಯ ಆರಂಭದಲ್ಲಿ ಇರುವುದಕ್ಕಿಂತ ೨ ಡಿಗ್ರಿ ಸೆಲ್ಸಿಯಸ್ ಮೀರಬಾರದು, ಆ ಹೆಚ್ಚಳ ೧.೫ ಡಿಗ್ರಿ ಸೆಲ್ಸಿಯಸ್‌ಗೆ ಮಿತಿಗೊಂಡರಂತೂ ಉತ್ತಮ' ಎಂಬ ವಿಶ್ವಸಂಸ್ಥೆಯ ಸಲಹೆಗೆ ಎಲ್ಲ ದೇಶಗಳು ಸಮ್ಮತಿಸಿವೆ. ಇದೇ ವಿಷಯಕ್ಕೆ ಸಂಬಂಧಿಸಿದಂತೆ ಹಿಂದೆ ೨೦ ಶೃಂಗಸಭೆಗಳು ನಡೆದಿದ್ದವು. ಆದರೆ ಆಗ ಸರ್ವಸಮ್ಮತ ಒಪ್ಪಂದ ಏರ್ಪಟ್ಟಿರಲಿಲ್ಲ. ಭೂಮಿಗೆ ಏನಾದರೂ ಆದರೆ ನಾವ್ಯಾರೂ ಬದುಕಿರುವುದಿಲ್ಲ ಎಂಬ ವಿವೇಕ ಈಗ ಮೂಡಿದೆ. ತಾಪಮಾನ ಏರಿಕೆ ತಡೆಯುವುದರಲ್ಲಿ ಪ್ರತಿಯೊಬ್ಬರ ಪಾಲೂ ಇರಬೇಕು ಎನ್ನುವುದು ಅರಿವಾಗಿದೆ. ಪ್ಯಾರಿಸ್ ಒಪ್ಪಂದದ ಪ್ರತಿಯೊಂದು ಅಕ್ಷರವನ್ನೂ ಕಟ್ಟುನಿಟ್ಟಾಗಿ ಅನುಷ್ಠಾನಕ್ಕೆ ತರುವುದು ಎಲ್ಲ ದೇಶಗಳ ಜವಾಬ್ದಾರಿ. ಅಲ್ಲದೆ ಹೊಣೆ ಹಾರಿಸಿಕೊಳ್ಳುವುದು, ಹಣಬಲದ ಮೂಲಕ ಬಡ ದೇಶಗಳ ಮೇಲೆ ಒತ್ತಡ ಹೇರುವುದನ್ನು ಸಿರಿವಂತ ದೇಶಗಳು ಇನ್ನಾದರೂ ನಿಲ್ಲಿಸಬೇಕು. ಈಗ ಪ್ರವರ್ಧಮಾನಕ್ಕೆ ಬರುತ್ತಿರುವ ಚೀನಾ ಮತ್ತು ಭಾರತದಂಥ ದೇಶಗಳೇ ಭೂಮಂಡಲದ ಉಳಿವಿಗಾಗಿ ತ್ಯಾಗ ಮಾಡಲು ಸಿದ್ಧವಾಗಿವೆ. ಹೀಗಿರುವಾಗ ಇಂಧನ ಬಳಸಿ ಕೈಗಾರಿಕೆಗಳನ್ನು ಬೆಳೆಸಿಕೊಂಡು ಧನಿಕರಾದ ಈ ದೇಶಗಳು ಹೊಸ ವ್ಯವಸ್ಥೆಗೆ ಹೊಂದಿಕೊಳ್ಳಲು ಸಜ್ಜಾಗಲೇಬೇಕು. ಒಪ್ಪಂದದಿಂದಾಗಿ ತಮ್ಮ ಪ್ರಗತಿಯನ್ನು ಬಲಿಕೊಡಬೇಕಾಗಿ ಬಂದ ದೇಶಗಳಿಗೆ ಪರಿಹಾರ ಕೊಡಲು ಹಿಂದೆಮುಂದೆ ನೋಡಬಾರದು. ಏಕೆಂದರೆ ಹಿಂದೆ ನಡೆದ ಒಪ್ಪಂದಗಳಲ್ಲೂ ಈ ರೀತಿ ಪರಿಹಾರ ನೀಡುವ ಷರತ್ತು ಇತ್ತು. ಅದು ಎಷ್ಟರ ಮಟ್ಟಿಗೆ ಜಾರಿಗೆ ಬಂತು ಎನ್ನುವುದು ಇನ್ನೂ ವಿವಾದದ ವಿಷಯವಾಗಿಯೇ ಉಳಿದಿದೆ. ಹವಾಮಾನ ವೈಪರೀತ್ಯದ ಅವಾಂತರಗಳು, ಅದು ತಂದೊಡ್ಡುವ ಸಂಕಟಗಳ ಪರಿಣಾಮ ಏನು ಎನ್ನುವುದನ್ನು ಈಗಾಗಲೆ ಅನುಭವಿಸುತ್ತಿದ್ದೇವೆ. ಹಸಿರು ಮನೆ ಮತ್ತು ಎಲ್‌ನಿನೊ ಪರಿಣಾಮ, ಅತಿವೃಷ್ಟಿ , ಅನಾವೃಷ್ಟಿ , ಅಕಾಲಿಕ ಮಳೆ, ಉಷ್ಣಾಂಶದಲ್ಲಿ ಏರುಪೇರು, ಪ್ರಾಕೃತಿಕ ವಿಕೋಪ, ಸಮುದ್ರದ ನೀರಿನ ಮಟ್ಟದಲ್ಲಿ ಏರಿಕೆ, ಧ್ರುವ ಪ್ರದೇಶಗಳು ಮತ್ತು ಹಿಮಾಲಯದಲ್ಲಿ ಕರಗುತ್ತಿರುವ ಹಿಮ, ಬತ್ತುತ್ತಿರುವ ನೀರ್ಗಲ್ಲುಗಳು – ಹೀಗೆ ಅನಾಹುತಗಳ ಪಟ್ಟಿ ಬೆಳೆಯುತ್ತಲೇ ಇದೆ. ವಾತಾವರಣ ಬಿಸಿಯೇರದಂತೆ ತಡೆಯುವುದೇ ಇದಕ್ಕಿರುವ ಏಕೈಕ ಪರಿಹಾರ. ಈ ದಿಸೆಯಲ್ಲಿ ಕಲ್ಲಿದ್ದಲು, ಪೆಟ್ರೋಲಿಯಂ ಒಳಗೊಂಡಂತೆ ಪಳೆಯುಳಿಕೆ ಇಂಧನ ಉರಿಸುವುದನ್ನು ಕಡಿಮೆ ಮಾಡುವುದು ಅನಿವಾರ್ಯ ಎಂಬುದು ಎಲ್ಲರಿಗೂ ಗೊತ್ತು. ಆದರೆ ಅದನ್ನು ಮಾಡಬೇಕಾದವರು ಯಾರು ಎಂಬುದೇ ದೊಡ್ಡ ಕಗ್ಗಂಟಾಗಿದೆ.

ಹವಾಮಾನ ಬದಲಾವಣೆಯ ವಿಷಯವನ್ನು ಒಂದು ಬಹುಮುಖ್ಯ ಪರಿಸರದ ಸವಾಲು ಎಂಬುದಾಗಿ ಪರಿಗಣಿಸಬೇಕಿದೆ. ತೀವ್ರವಾದ ಕೈಗಾರೀಕರಣ, ಪಳೆಯುಳಿಕೆಗಳ ಉರುವಲು ಬಳಕೆ, ಭೂಮಿ ಹಾಗೂ ಅರಣ್ಯಸಂಪತ್ತಿನ ಅತಿ ಬಳಕೆಯೇ ಪ್ರಮುಖವಾದವುಗಳಾಗಿವೆ. ಹಾಗೆಯೇ ಹವಾಮಾನ ಬದಲಾವಣೆಯು ಕೃಷಿ ಹಾಗೂ ಜಲಸಂಪನ್ಮೂಲಗಳ ಮೇಲೆ ಪ್ರತಿಕೂಲವಾಗಿ ಪ್ರಭಾವ ಬೀರುವುದರಲ್ಲಿ ಸಂದೇಹವೇ ಇಲ್ಲ. ಹವಾಮಾನ ವೈಪರೀತ್ಯದಿಂದಾಗಿ, ಭಾರತವೂ ಸೇರಿದಂತೆ, ಅನೇಕ ದೇಶಗಳ ಕೃಷಿ ಹುಟ್ಟುವಳಿಯಲ್ಲಿ ಏರುಪೇರು ಆಗಲು ಸಾಧ್ಯ. ಮೂಲಭೂತವಾಗಿ ಗೋಧಿ, ಅಕ್ಕಿ ಹಾಗೂ ಬೇಳೆಕಾಳುಗಳಂತಹ ಕೆಲವು ಬೆಳೆಗಳ ಇಳುವರಿ ಕಡಿಮೆಯಾಗುತ್ತದೆ. ಆಹಾರ ಉತ್ಪಾದನೆಯಲ್ಲಿ ಭಾರತದ ಸ್ವಾವಲಂಬನೆಗೆ ಇರುವ ಪ್ರಮುಖ ಸವಾಲಾಗಿ ಪರಿಣಮಿಸಿದೆ. ಇದು ಜಾಗತಿಕ ಆಹಾರ ಭದ್ರತೆಯ ಮೇಲೆ ಭೀಕರ ಪರಿಣಾಮ ಬೀರಿ, ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ನೀರಿನ ಅಭಾವ ಹೆಚ್ಚಾಗಿರುವುದರ ಮೂಲಕ ಹವಾಮಾನ ಬದಲಾವಣೆ ಮತ್ತೊಂದು ಪರಿಣಾಮ ಬೀರುತ್ತದೆ. ಭಾರತದ ಬಹುತೇಕ ಜನವಿಭಾಗಗಳು ಹವಾಗುಣವನ್ನೇ ಅವಲಂಬಿಸಿದ್ದು, ಕೃಷಿ, ಅರಣ್ಯ, ಮೀನುಗಾರಿಕೆಯನ್ನೇ ಬದುಕಿನ ಆಧಾರವಾಗಿ ಅವಲಂಬಿಸಿದ್ದು ಹವಾಮಾನ ವೈಪರೀತ್ಯದಿಂದಾಗಿ, ತಾಪಮಾನ ಹೆಚ್ಚು ಮಳೆ

**ಡಾ|| ಸುರೇಶ್ ಕೆ. ಪಿ.**

ಹವಾಮಾನ ಬದಲಾವಣೆಯ ವಿಷಯವನ್ನು ಒಂದು ಬಹುಮುಖ್ಯ ಪರಿಸರದ ಸವಾಲು ಎಂದು ಪರಿಗಣಿಸಬೇಕಿದೆ. ತೀವ್ರವಾದ ಕೈಗಾರೀಕರಣ, ಪಳೆಯುಳಿಕೆಗಳ ಉರುವಲು ಬಳಕೆ, ಭೂಮಿ ಹಾಗೂ ಅರಣ್ಯಸಂಪತ್ತಿನ ಅತಿ ಬಳಕೆಯೇ ಪ್ರಮುಖವಾದವುಗಳಾಗಿವೆ. ಹಾಗೆಯೇ ಹವಾಮಾನ ಬದಲಾವಣೆಯು ಕೃಷಿ ಹಾಗೂ ಜಲಸಂಪನ್ಮೂಲಗಳ ಮೇಲೆ ಪ್ರತಿಕೂಲವಾಗಿ ಪ್ರಭಾವ ಬೀರುವುದರಲ್ಲಿ ಸಂದೇಹವೇ ಇಲ್ಲ. ಹವಾಮಾನ ವೈಪರೀತ್ಯದಿಂದಾಗಿ, ಭಾರತವೂ ಸೇರಿದಂತೆ, ಅನೇಕ ದೇಶಗಳ ಕೃಷಿ ಹುಟ್ಟುವಳಿಯಲ್ಲಿ ಏರುಪೇರು ಆಗಲು ಸಾಧ್ಯ. ಮೂಲಭೂತವಾಗಿ ಗೋಧಿ, ಅಕ್ಕಿ ಹಾಗೂ ಬೇಳೆಕಾಳುಗಳಂತಹ ಕೆಲವು ಬೆಳೆಗಳ ಇಳುವರಿ ಕಡಿಮೆಯಾಗುತ್ತದೆ. ಆಹಾರ ಉತ್ಪಾದನೆಯಲ್ಲಿ ಭಾರತದ ಸ್ವಾವಲಂಬನೆಗೆ ಇರುವ ಪ್ರಮುಖ ಸವಾಲಾಗಿ ಪರಿಣಮಿಸಿದೆ. ಇದು ಜಾಗತಿಕ ಆಹಾರ ಭದ್ರತೆಯ ಮೇಲೆ ಭೀಕರ ಪರಿಣಾಮ ಬೀರಿ, ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ನೀರಿನ ಅಭಾವ ಹೆಚ್ಚಾಗಿರುವುದರ ಮೂಲಕ ಹವಾಮಾನ ಬದಲಾವಣೆ ಮತ್ತೊಂದು ಪರಿಣಾಮ ಬೀರುತ್ತದೆ. ಭಾರತದ ಬಹುತೇಕ ಜನವಿಭಾಗಗಳು ಜನಸಂಖ್ಯೆ ಹವಾಗುಣವನ್ನೇ ಅವಲಂಬಿಸಿದ್ದು, ಕೃಷಿ, ಅರಣ್ಯ, ಮೀನುಗಾರಿಕೆಯನ್ನೇ ಬದುಕಿನ ಆಧಾರವಾಗಿ ಅವಲಂಬಿಸಿದ್ದು ಹವಾಮಾನ ವೈಪರೀತ್ಯದಿಂದಾಗಿ, ತಾಪಮಾನ ಹೆಚ್ಚು ಮಳೆ ಕಡಿಮೆಯಾಗಲಿದೆ. ಕಡಿಮೆ ಮಳೆ ಹಲವಾರು ರೀತಿಯ ಸಮಸ್ಯೆಗಳಿಗೆ ಕಾರಣವಾಗಲಿದೆ.




ಕಡಿಮೆಯಾಗಲಿದೆ. ಕಡಿಮೆ ಮಳೆ ಹಲವಾರು ರೀತಿಯ ಸಮಸ್ಯೆಗಳಿಗೆ ಕಾರಣವಾಗಲಿದೆ. ಹವಾಮಾನ ಬದಲಾವಣೆಯು ಆಹಾರ ಭದ್ರತೆಯ ಮೇಲೆ ಮುಂದಿನ ದಿನಗಳಲ್ಲಿ ಪ್ರಭಾವ ಬೀರಲಿದೆ. ಈಗಾಗಲೇ ಅದರ ಪ್ರಭಾವ ಅನುಭವಿಸುತ್ತಿದ್ದೇವೆ! ಭಾರತದ ಕೃಷಿ ಮುಂಗಾರು ಮಳೆಯನ್ನು ಆಧರಿಸಿದೆ. ಆದರೆ ಹವಾಮಾನ ಬದಲಾವಣೆಯಿಂದ ಕೃಷಿ ಪದ್ಧತಿಗಳ ಮೇಲೆ ಪರಿಣಾಮವುಂಟಾಗಿ ಉತ್ಪಾದನೆ ಕುಂಠಿತವಾಗಬಹುದು. ನೀರಾವರಿ ಇಲ್ಲದ ಪ್ರದೇಶಗಳಲ್ಲಿ ಬೆಳೆಯ ಪ್ರಮಾಣ ಕುಸಿಯಬಹುದು. ೨೦೪೦ರ ಹೊತ್ತಿಗೆ ತಾಪಮಾನವು ೧.೨ಡಿಗ್ರಿ ಸೆಂಟಿಗ್ರೇಡ್‌ನಷ್ಟು ಏರಿಕೆ ಕಾಣಬಹುದು. ಈ ಶತಮಾನದ ಕೊನೆಯ ವೇಳೆಗೆ ಉಷ್ಣಾಂಶ ೫.೪ ಡಿಗ್ರಿ ಸೆಂಟಿಗ್ರೇಡ್‌ನಷ್ಟು ಹೆಚ್ಚಾಗಬಹುದು. ಇದರಿಂದಾಗಿ ಜನಸಂಖ್ಯೆಗೆ ಕಡಿಮೆ ಆಹಾರ ದೊರಕುತ್ತದೆ. ಉಷ್ಣಾಂಶದಲ್ಲಿ ವ್ಯತ್ಯಾಸವಾದರೆ ಇಳುವರಿ ಕಡಿಮೆಯಾಗುತ್ತಿದೆ. ಹವಾಮಾನ ಬದಲಾವಣೆಯಿಂದ ಜನರ ಕುಡಿಯುವ ಹಾಗೂ ಕೃಷಿ ಅಗತ್ಯ ಪೂರೈಕೆಯ ನೀರಿಗೆ ತೊಂದರೆಯಾಗುತ್ತಿದೆ. ಒಟ್ಟಾರೆಯಾಗಿ, ಇಂದು ಹವಾಮಾನ ಬದಲಾವಣೆಯು ಅಭಿವೃದ್ಧಿ ಹೊಂದಿದ ಹಾಗೂ ಅಭಿವೃದ್ಧಿಶೀಲ ದೇಶಗಳ ಜೀವನ ವಿಧಾನ ಹಾಗೂ ಗ್ರಾಹಕ ರೀತಿಯಲ್ಲಿ ಬದಲಾವಣೆ ಆಗಬೇಕಿದೆ. ಹವಾಮಾನ ಬದಲಾವಣೆಯು ಇನ್ನೂ ಕೇವಲ ಪರಿಸರದ ವಿಷಯವಾಗಿ ಉಳಿದಿಲ್ಲ. ಇದು ಜಗತ್ತಿನ ತಾಳಿಕೆ–ಹೊಗಳಿಕೆಯ ವಿಷಯದ ಸವಾಲಾಗಿ ಪರಿಣಮಿಸಿದೆ. ಇದರ ವಿರುದ್ಧ ಹೋರಾಟವು ಕೇವಲ ಸರ್ಕಾರದ ಕೆಲಸವಲ್ಲ. ಬದಲಾಗಿ, ಜನರ ಕೆಲಸ ಸಹ ಆಗಿದೆ. ಹವಾಮಾನ ಬದಲಾಗುತ್ತಿದೆ. ಈ ಭೂಗ್ರಹದ ತಾಪಮಾನ ದಿನೇದಿನೇ ಸಹನೆಯ ಮಟ್ಟ ಮೀರುತ್ತಿದೆ. ಪ್ರಾಕೃತಿಕ ವಿಕೋಪಗಳ ಸಂಖ್ಯೆ ಹೆಚ್ಚುತ್ತಿದೆ. ಇವೆಲ್ಲವು ಜಾಗತಿಕ ತಾಪಮಾನ ಏರುವಿಕೆಯ ಪರಿಣಾಮಗಳೆಂದು ಹೇಳಲಾಗುತ್ತಿದೆ. ಇದಕ್ಕೆ ಹೆಚ್ಚುತ್ತಿರುವ ಕಾರಣ ಹಸಿರು ಮನೆ ಅನಿಲಗಳು. ಈ ಹಸಿರು ಮನೆ ಅನಿಲಗಳ ಹೆಚ್ಚಳಕ್ಕೆ ಮನುಷ್ಯರ ದುಬಾರಿ ಹಾಗೂ ವ್ಯಕ್ತಿ ಜೀವನ ಶೈಲಿ.

**ಕರ್ನಾಟಕದ ಪರಿಸ್ಥಿತಿ**

ಕರ್ನಾಟಕದ ಪರಿಸ್ಥಿತಿ ನೋಡಿದಾಗ ೧೯೦೧ರಿಂದ ೧೯೫೦ರವರೆಗಿದ್ದ ಸರಾಸರಿ ೧೨೦೫ ಮಿಲಿಮೀಟರ್ ಮಳೆಯು ೧೯೫೦ರಿಂದ ೨೦೧೪ರವರೆಗೆ ೧೧೪೦ ಮಿಲಿಮೀಟರ್‌ಗೆ ಇಳಿದಿದೆ. ಕೆಲವು ಜಿಲ್ಲೆಗಳಲ್ಲಿ ಸ್ವಲ್ಪ ಪ್ರಮಾಣ ಕಡಿತವಾದರೆ, ಇನ್ನು ಕೆಲವು ಜಿಲ್ಲೆಗಳಲ್ಲಿ ಅಧಿಕ ಪ್ರಮಾಣದಲ್ಲಿ ಕಡಿತವಾಗಿದೆ. ಕೊಡಗು, ಚಿಕ್ಕಮಗಳೂರು, ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮಳೆ ಕಡಿಮೆಯಾಗುತ್ತಿದೆ. ಅಲ್ಲದೆ, ಕೆಲವು ಜಿಲ್ಲೆಗಳಲ್ಲಿ ವಾರ್ಷಿಕ ಸರಾಸರಿಯಲ್ಲಿನ ಮಳೆಯಲ್ಲಿನ ಹೆಚ್ಚಳಿಕೆ ಕಂಡುಬಂದಿದೆ. ಅಂದರೆ ಬೆಂಗಳೂರು, ತುಮಕೂರು, ಹಾಸನ ಜಿಲ್ಲೆಗಳಲ್ಲಿ ಮಳೆ ಪ್ರಮಾಣ ಏರಿಕೆಯಾಗುತ್ತಿದೆ. ಒಟ್ಟಾರೆ ರಾಜ್ಯದಲ್ಲಿ ನೈಋತ್ಯ ಮಾರುತದ ಮಳೆ ಕಡಿಮೆಯಾಗಿ ಬೇಸಿಗೆಯ ಮಳೆ ಮತ್ತು ಈಶಾನ್ಯ ಮಾರುತದ ಮಳೆ ಹೆಚ್ಚಾಗುತ್ತಿದೆ. ಇದರಿಂದ ಬೆಳೆಯ ಆಯ್ಕೆ, ಅವಧಿ ಹಾಗೂ ಕೆಲವು ಬೆಳೆಗಳ ಇಳುವರಿಯಲ್ಲಿ ಏರುಪೇರಾಗಿದೆ. ಬೆಳೆಗಳು ಹೊಂದಿಕೊಳ್ಳುವ ಶಕ್ತಿ ಹೆಚ್ಚು ಕಡಿಮೆಯಾಗುತ್ತಿದೆ. ಇದರಿಂದ ಬಿತ್ತನೆ ಕಾಲ ೧೫ ರಿಂದ ೩೦ ದಿನಗಳು ಹಿಂದು ಮುಂದಾಗುತ್ತದೆ. ಬೆಳೆ ಬೆಳೆಯುವ ಅವಧಿಯಲ್ಲಿ ಮಣ್ಣಿನ ತೇವಾಂಶದ ಪ್ರಮಾಣದಲ್ಲಿ ಏರುಪೇರಾಗುತ್ತಿದೆ.

ಇದರ ಪರಿಣಾಮವಾಗಿ ಒಟ್ಟಾರೆ ಬೆಳೆ ಉತ್ಪಾದನೆ ಕುಂಠಿತವಾಗುತ್ತಿದೆ. ವಾತಾವರಣದ ತಾಪಾಂಶದಲ್ಲಿನ ಗರಿಷ್ಠ ಮತ್ತು ಕನಿಷ್ಠ ಉಷ್ಣಾಂಶದಲ್ಲಿ ಅತೀ ಹೆಚ್ಚು ಅಥವಾ ಅತೀ ಕಡಿಮೆ ಕಂಡುಬರುತ್ತಿದೆ. ಇದು ಬೆಳೆಗಳಿಗೆ ಹೆಚ್ಚು ಹಾನಿಯನ್ನುಂಟುಮಾಡುತ್ತದೆ. ಈ ವ್ಯತ್ಯಾಸಗಳ ಪರಿಣಾಮವಾಗಿ ಬೆಳೆಗಳಿಗೆ ಕೀಟ ಬಾಧೆ ಹಾಗೂ ರೋಗಗಳ ಬಾಧೆ ಹೆಚ್ಚಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಬೆಳೆ ಅವಧಿ ಹೆಚ್ಚು ಪ್ರಮಾಣದ ಮಳೆ ಬೀಳುವ ಕಡೆ ಹಾನಿಗೊಳಗಾಗುತ್ತಿವೆ.

ಈ ಹವಾಮಾನ ಬದಲಾವಣೆ ಪರಿಣಾಮವಾಗಿ ಸಾಂಪ್ರದಾಯಿಕ ಬೆಳೆಗಳ ವಿಸ್ತರಣೆ ಕುಂಠಿತವಾಗಿದೆ. ಉದಾಹರಣೆಗೆ ಬೆಳಗಾವಿ ಮತ್ತು ತುಮಕೂರು ಜಿಲ್ಲೆಗಳಲ್ಲಿ ತೊಗರಿ ಬೆಳೆಯ ವಿಸ್ತರಣೆ ಕಡಿಮೆಯಾಗಿದ್ದು, ಬೀದರ್ ಮತ್ತು ಕಲಬುರ್ಗಿ ಜಿಲ್ಲೆಗಳಲ್ಲಿ ಹೆಚ್ಚಾಗಿದೆ. ಈ ರೀತಿಯ ಅನಿರೀಕ್ಷಿತ ಬದಲಾವಣೆಗಳನ್ನು ಎದುರಿಸುವ ಶಕ್ತಿ ಅಭಿವೃದ್ಧಿ ದೇಶಗಳಿಗೆ ಇದ್ದು, ಭಾರತದಂತಹ ಅಭಿವೃದ್ಧಿಯಾಗುತ್ತಿರುವ ದೇಶಗಳಿಗೆ ಮಾರಕವಾಗಿವೆ. ಈ ರೀತಿಯ ಅನಿರೀಕ್ಷಿತ ಬದಲಾವಣೆಗಳನ್ನು ಎದುರಿಸಲು ಸೂಕ್ತ ಮಾರ್ಗೋಪಾಯಗಳನ್ನು ಹುಡುಕಿ ದೇಶದ ಎಲ್ಲಾ ಕ್ಷೇತ್ರದ ಸಮುದಾಯ ದವರನ್ನು ಜಾಗೃತಿಗೊಳಿಸುವ ಅಗತ್ಯವಿದೆ. ಈ ಬದಲಾವಣೆಯನ್ನು ಎದುರಿಸಲು ನೆರವಾಗುವ ನಿರ್ದಿಷ್ಟವಾದ ಒಂದು ಪರಿಹಾರ ಮಾರ್ಗವಿಲ್ಲ. ಆದ್ದರಿಂದ ಸಮಸ್ಯೆಗಳನ್ನು ಅರಿತು ಅವುಗಳ ಪ್ರಮಾಣ ತೀಕ್ಷ್ಣತೆ ಪುನರಾವರ್ತನೆ ಇತ್ಯಾದಿ ಗುಣಗಳನ್ನು ಅರಿತು ಸಮಸ್ಯೆಗಳನ್ನು ವಿಂಗಡಿಸಿ ತಕ್ಕ ಸೂಕ್ತ ಪರಿಹಾರ ಕಂಡುಹಿಡಿದು ಅವುಗಳನ್ನು ಅಳವಡಿಸಿಕೊಳ್ಳುವುದರಿಂದ ಹವಾಮಾನದ ಬದಲಾವಣೆಯಿಂದ ಆಗುವ ತೊಂದರೆಗಳನ್ನು ಸ್ವಲ್ಪಮಟ್ಟಿಗೆ ತಗ್ಗಿಸಬಹುದು. ಅನಂತರದ ದಿನಗಳಲ್ಲಿ ಈ ಬದಲಾವಣೆಯ ಅಳವಡಿಕೆ ಕೃಷಿ ಕ್ಷೇತ್ರದಲ್ಲಿ ಒಳ್ಳೆಯದೇ ಆಗಬಹುದು.

**ಭಾರತದ ಪರಿಸ್ಥಿತಿ ಮತ್ತು ಆಹಾರ ಭದ್ರತೆ**

ಮೋಡಗಳ ಸಾಂದ್ರೀಕರಣ ಕೃಷಿ ಉತ್ಪಾದನೆಯ ಮೇಲೆ ಮಹತ್ವದ ಪರಿಣಾಮ ಬೀರುತ್ತದೆ. ವಾತಾವರಣದಲ್ಲಿ ಹೆಚ್ಚುತ್ತಿರುವ ಇಂಗಾಲದ ಡೈಆಕ್ಸೈಡ್ ಸಸ್ಯದ ಬೆಳವಣಿಗೆಯ ಮೇಲೆ ದುಷ್ಪರಿಣಾಮ ಬೀಳುತ್ತದೆ. ಸ್ಥಳೀಯ ಸರಾಸರಿ ತಾಪಮಾನದಲ್ಲಿ ೧ರಿಂದ ೨ ಡಿಗ್ರಿ ಸೆ.ನಷ್ಟು ತಾಪಮಾನ ಹೆಚ್ಚಿದರೆ ಬೆಳೆಗಳ ಉತ್ಪಾದನೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ.

ಭಾರತಕ್ಕೆ ಸಂಬಂಧಿಸಿದಂತೆ ಹವಾಮಾನ ಸಮಸ್ಯೆಯ ಕುರಿತು ಚರ್ಚಿಸಿದಾಗ ಮುಂದೆ ಸಂಭವಿಸಬಹುದಾದ ಸಮಸ್ಯೆಯ ಪ್ರಮಾಣ ಕೋಟಿಗಳಷ್ಟು. ಭೂಮಿಯ ಮೇಲ್ಪದರದ ತಾಪಮಾನ ೨ರಿಂದ ೫ ಡಿಗ್ರಿ ಸೆಲ್ಸಿಯಸ್ ಏರಿಕೆಯಾಗಲಿದೆ. ವಾರ್ಷಿಕ ಮಳೆಯ ಪ್ರಮಾಣದಲ್ಲಿ ಶೇ. ೨೦ರಷ್ಟು ಹೆಚ್ಚಳವಾಗಿದೆ. ಹೀಗೇ ಆದರೆ ಮಳೆ ಬೀಳುವ ಪ್ರದೇಶಗಳಲ್ಲಿ ಇನ್ನೂ ಹೆಚ್ಚು ಮಳೆ ಬೀಳಲಿವೆ. ಒಣ ಪ್ರದೇಶಗಳು ಮತ್ತಷ್ಟು ಬಿಸಿಯಾಗಲಿವೆ. ಹವಾಮಾನದಲ್ಲಿ ಇಂತಹ ಬದಲಾವಣೆಯಾದಾಗ ಅದರಿಂದ ಧಾನ್ಯಗಳು, ತರಕಾರಿಗಳು ಮತ್ತು ಇದರಿಂದ ಆದಾಯದಲ್ಲಿ ಆಗುವ ನಿವ್ವಳ ನಷ್ಟ ಶೇ. ೯ರಿಂದ ೨೫ರಷ್ಟು. ಅರಣ್ಯ ಇಲಾಖೆಯ ಅಂದಾಜಿನಂತೆ ೨೦೮೫ರ ಒಳಗೆ ಶೇ. ೬೮–೭೭ರಷ್ಟು ಅರಣ್ಯ ಪ್ರದೇಶಗಳ ಸ್ವರೂಪವೇ ಬದಲಾಗುವುದರಿಂದ ದೊಡ್ಡ ಪ್ರಮಾಣದಲ್ಲಿ ಅರಣ್ಯ ಹಾಗೂ ಜೀವ ಸಂಕುಲ ನಾಶವಾಗಲಿವೆ.

ಇಂದು ವಿಶ್ವದ ಎಲ್ಲರ ಬಾಯಲ್ಲೂ ಒಂದೇ ಮಾತು. ಅದು ಜಾಗತಿಕ ತಾಪಮಾನ, ಮಾನವನ ವಿವಿಧ ಕ್ರಿಯಾ ಚಟುವಟಿಕೆಗಳ ಪರಿಣಾಮವಾಗಿ ವಾತಾವರಣದಲ್ಲಿ ಉಷ್ಣತೆ ಏರುತ್ತಿರುವುದು ತುಂಬ ಆತಂಕಕಾರಿಯಾದುದು. ಇಂದಿನ ಜಾಗತಿಕ ವಿಷಯದಲ್ಲಿ ಎಲ್ಲರನ್ನು ದಿಗ್ಭ್ರಮೆಗೊಳಿಸುತ್ತಿರುವ ಅಂಶಗಳೆಂದರೆ ಭೂಗೋಳದ ಬಿಸಿ ಏರುವಿಕೆ.

ಕಳೆದ ಒಂದು ಶತಮಾನದಲ್ಲಿ ಆದ ತಾಪಮಾನ ಇಂದು ಕೇವಲ ಎರಡು ದಶಕದಲ್ಲಿ ಏರಿದೆ ಎಂದರೆ, ಅದು ಎಂತಹವರನ್ನೂ ಅಚ್ಚರಿಗೊಳಿಸುತ್ತದೆ. ಇದಕ್ಕೆ ಕಾರಣ ಗೋಳದ ಬಿಸಿ ಏರುತ್ತಿರುವುದು. ೨೦೪೦ರ ಹೊತ್ತಿಗೆ ಆರ್ಕಟಿಕ್ ಸಾಗರದ ಮಂಜುಗಡ್ಡೆಗಳು ಬೇಸಿಗೆಯಲ್ಲಿ ಕರಗಿ ಸಾಗರದ ನೀರಿನ ಮಟ್ಟ ಏರಿ ಕೆಳಮಟ್ಟದಲ್ಲಿನ ಭೌಗೋಳಿಕ ಪ್ರದೇಶಗಳು ಮುಳುಗುವ ಸಾಧ್ಯತೆಗಳಿವೆ. ಒಂದು ಸಮೀಕ್ಷೆಯಂತೆ ವರ್ಷವೊಂದಕ್ಕೆ ಗೋಳದಲ್ಲಿನ ಸಮುದ್ರ ಸಾಗರಗಳ ನೀರಿನ ಮಟ್ಟ ಒಂದರಿಂದ ಮೂರು ಮಿಲಿ ಮೀಟರ್‌ಗಳಷ್ಟು ಏರುತ್ತಿದೆ.

ವಾತಾವರಣದಲ್ಲಿನ ಕೆಲವೊಂದು ಅನಿಲಗಳಾದ ಇಂಗಾಲದ ಡೈಆಕ್ಸೈಡ್, ಮಿಥೇನ್, ನೈಟ್ರಿಕ್ ಆಕ್ಸೈಡ್, ಕ್ಲೋರೊಫ್ಲೋರೊ ಕಾರ್ಬನ್ ಮುಂತಾದುವು ತೇವಾಂಶದ ಜೊತೆಯಲ್ಲಿ ಸೌರ ಶಕ್ತಿಯನ್ನು ಹೀರಿಕೊಂಡು ಅಂತರಿಕ್ಷದಲ್ಲಿಯೇ ಉಳಿದುಬಿಡುತ್ತವೆ. ಅದರಿಂದಾಗಿ ವಾತಾವರಣದ ಬಿಸಿ ಏರುತ್ತಿದೆ. ಇದನ್ನೇ ನಾವು ಹಸಿರು ಮನೆಯ ಅನಿಲಗಳೆಂದು ಹೇಳುವುದು. ಇಂಗಾಲದ ನಂತರ ಬಿಸಿ ಏರಿಸುವಲ್ಲಿ ಮಿಥೇನ್ ಪ್ರಮುಖ ಪಾತ್ರವಹಿಸುತ್ತದೆ. ಮಿಥೇನ್ ಇಂಗಾಲಾಮ್ಲ ಹೀರುವ ಬಿಸಿಯ ೪೦-೬೦ರಷ್ಟು ಹೆಚ್ಚು ಶಾಖವನ್ನು ಹೀರಬಲ್ಲದು.

ಆಧುನಿಕ ನಾಗರಿಕತೆಯ ಅಳವಡಿಕೆಯಿಂದ ಹೆಚ್ಚು ಹೆಚ್ಚು ಇಂಧನ ಉರಿಸುವುದರಿಂದ ಇಂಗಾಲದ ಅಂಶವುಳ್ಳ ಹಲವು ರಾಸಾಯನಿಕ ವಸ್ತುಗಳನ್ನು ಮಾನವ ವಾತಾವರಣಕ್ಕೆ ಸೇರಿಸುತ್ತಿದ್ದಾನೆ. ಹಸಿರು ಮನೆ ಅನಿಲಗಳ ಪ್ರಮಾಣ ವಾತಾವರಣದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಿದೆ. ಈ ಅನಿಲಗಳು ವಾತಾವರಣದಲ್ಲಿ ಸೂರ್ಯನ ಕಿರಣಗಳನ್ನು ಮತ್ತು ಭೂಮಿಯಿಂದ ಹೊರ ಹೋಗುವ ಶಾಖಾಂಶವನ್ನು ತಮ್ಮಲ್ಲಿ ಹಿಡಿದಿಟ್ಟುಕೊಂಡು ವಾತಾವರಣದಲ್ಲಿನ ಉಷ್ಣಾಂಶವನ್ನು ಹೆಚ್ಚಿಸುವುದರಿಂದ ಜಾಗತಿಕ ತಾಪಮಾನ ಏರುತ್ತಲೇ ಇದೆ. ಈ ತಾಪಮಾನದ ಏರಿಕೆ ನೂರು ವರ್ಷಗಳಲ್ಲಿ ಕೇವಲ ಒಂದು ಡಿಗ್ರಿ ಏರಿದ್ದು, ಕಳೆದ ೨೦ ವರ್ಷಗಳಲ್ಲಿ ಒಂದೂವರೆ ಡಿಗ್ರಿ ಸೆಂಟಿಗ್ರೇಡ್‌ಗೆ ಏರಿದೆ. ಅಂದರೆ ತಾಪಮಾನದ ಏರಿಕೆ ಇತ್ತೀಚಿನ ದಿನಗಳಲ್ಲಿ ತೀವ್ರಗತಿಯಲ್ಲಿ ಏರುತ್ತಿದೆ. ಈ ತಾಪಮಾನದ ಏರಿಕೆಯಿಂದ ಒತ್ತಡದಲ್ಲಿ ಇಳಿಕೆಯಾಗಿ ಸ್ಥಳದಿಂದ ಸ್ಥಳಕ್ಕೆ ಒತ್ತಡದ ವ್ಯತ್ಯಾಸ ಉಂಟಾಗುತ್ತದೆ.

ಈ ಒತ್ತಡದ ವ್ಯತ್ಯಾಸದಿಂದ ರಭಸವಾದ ಗಾಳಿಯು ಒಂದು ಕಡೆಯಿಂದ ಮತ್ತೊಂದು ಕಡೆ ಚಲಿಸುತ್ತದೆ. ಈ ರೀತಿಯ ಅನಿರೀಕ್ಷಿತ ಪ್ರಮಾಣದ ಗಾಳಿಯು ಭೂಮಿಯ ಎಲ್ಲಾ ಭಾಗದಲ್ಲೂ ಬೀಸುವುದರಿಂದ ಯಾವಾಗ ಎಷ್ಟು ಪ್ರಮಾಣದ ಗಾಳಿ ಬೀಸುತ್ತದೆ, ಎಷ್ಟು ಮಳೆ ತರುತ್ತದೆ, ವಾತಾವರಣ ಏರುಪೇರು ಎಷ್ಟು ಆಗುತ್ತದೆ ಎನ್ನುವುದನ್ನು ಊಹಿಸುವುದು ಅಸಾಧ್ಯ.

ನಮ್ಮ ದೇಶದ ಕೃಷಿ ಒಂದು ನಿರ್ದಿಷ್ಟ ವಾತಾವರಣಕ್ಕೆ ಹೊಂದಿಕೊಂಡಿದ್ದು, ಇತ್ತೀಚಿನ ವಾತಾವರಣದಲ್ಲಿ ಆಗುವ ಅನಿರೀಕ್ಷಿತ ಬದಲಾವಣೆಗೆ ಹೊಂದಿಕೊಳ್ಳಲಾಗದೆ ಕೃಷಿ ಮತ್ತು ಕೃಷಿಪೂರಕ ಉದ್ದಿಮೆಗಳು ತೊಂದರೆಗೊಳಗಾಗಿವೆ. ಈ ರೀತಿಯ ಬದಲಾವಣೆಯು ಒಂದು ನಿರಂತರ ಕ್ರಿಯೆಯಾದುದರಿಂದ ಕೃಷಿಯು ದಿನದಿಂದ ದಿನಕ್ಕೆ ಕಷ್ಟವಾಗುತ್ತಿದೆ.

**ಹವಾಮಾನದಿಂದ ಆಗುವ ಪರಿಣಾಮಗಳು**

ಕೆಲವು ಕಡೆ ಬಿಸಿಲಿನ ಅವಧಿ ಹೆಚ್ಚಾಗಿ ಬೆಳೆಗಳನ್ನು ಬೆಳೆಯುವ ಅವಧಿ ಹೆಚ್ಚಾಗುತ್ತಿದೆ. ಕೆಲವು ಬೆಳೆಗಳು ಹೆಚ್ಚಿನ ಶಾಖವನ್ನು ತಡೆಯಲಾಗದೆ ಇಳುವರಿ ಕುಂಠಿತವಾಗುತ್ತಿದೆ. ಚಳಿ ಪ್ರದೇಶದಲ್ಲಿ ಕೃಷಿಭೂಮಿ ಉತ್ಪಾದನೆಗಾಗಿ ವಿಸ್ತಾರಗೊಳ್ಳುತ್ತಿದೆ. ವಾತಾವರಣದಲ್ಲಿನ ಶಾಖ ಹೆಚ್ಚಾಗಿ ಸಮುದ್ರದ ನೀರಿನ ಮೊತ್ತ ದೊಡ್ಡದಾಗಿ ಮತ್ತು ಕೆಲವು ಕಡೆ ನೀರ್ಗಲ್ಲು ಕರಗಿ ಸಮುದ್ರದ ಮಟ್ಟ ಹೆಚ್ಚಾಗಿ ತಗ್ಗು ಪ್ರದೇಶಗಳು ಮುಳುಗುವ ಸಾಧ್ಯತೆ ಇದ್ದು, ಕೃಷಿ ಭೂಮಿ ಕಡಿಮೆಯಾಗುತ್ತಿದೆ. ಹವಾಮಾನದಲ್ಲಿ ತೀಕ್ಷ್ಣ ಬದಲಾವಣೆ, ವಿಪರೀತ ಏರಿಳಿತದ, ಋತುಮಾನದಲ್ಲಿ ಬದಲಾವಣೆ, ಮಳೆಗಾಲದ ಆರಂಭ ಮತ್ತು ಅಂತ್ಯದಲ್ಲಿ ಬದಲಾವಣೆ, ಮಳೆ ವಿತರಣೆಯಲ್ಲಿ ಏರುಪೇರು, ಅಧಿಕ, ಅನಿರೀಕ್ಷಿತ ಹಾಗೂ ತೀವ್ರ ಚಂಡಮಾರುತಗಳು, ದೀರ್ಘಕಾಲದ ಬರಗಾಲ, ಭೂಮಿಯಲ್ಲಿನ ನೀರಿನ ಕೊರತೆ ಈ ರೀತಿಯ ಹತ್ತು ಹಲವು ತೊಂದರೆಗಳು ಕೃಷಿಗೆ ತೊಡಕಾಗಿವೆ.

**ಕೃಷಿಯಲ್ಲಿ ಮಾಡಿಕೊಳ್ಳಬೇಕಾದ ಬದಲಾವಣೆಗಳು**

ಮಣ್ಣು ಹಾಗೂ ನೀರಿನ ನಿರ್ವಹಣೆ ಕಡೆ ಗಮನ ಕೊಡಬೇಕಾಗಿದೆ. ಮಳೆ ಬಂದಾಗಲೆಲ್ಲಾ ಬಿದ್ದ ಮಳೆಯ ನೀರನ್ನು ಭೂಮಿಗೆ ಇಂಗಿಸುವ ಮತ್ತು ಹೆಚ್ಚಾದ ನೀರನ್ನು ಹಿಡಿದಿಡುವ ಕೃಷಿ ಹೊಂಡಗಳನ್ನು ನಿರ್ಮಾಣ ಮಾಡಿಕೊಳ್ಳಬೇಕು. ದೇಶದಲ್ಲಿ ಬೇಸಾಯ ಮಾಡುತ್ತಿರುವ ಭೂಮಿಯ ಶೇ. ೬೦ ಭಾಗ ಖುಷ್ಕಿ ಆಗಿರುವುದರಿಂದ ಖುಷ್ಕಿ ಭೂಮಿಯಲ್ಲಿ ಉತ್ಪಾದನೆ ಹೆಚ್ಚಿಸುವ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳಬೇಕು. ಹವಾಮಾನ ಮತ್ತು ಮಳೆ ಎದುರಿಸುವ ಸುಧಾರಿಸಿದ ಬಿತ್ತನೆ ಬೀಜಗಳನ್ನು ಬಳಕೆ ಮಾಡಬೇಕು. ಖುಷ್ಕಿ ಎಂದು ತಾತ್ಸಾರ ಮಾಡದೆ ಬೆಳೆಗಳಿಗೆ ಬೇಕಾದ ಪೋಷಕಾಂಶಗಳನ್ನು ನೀಡಿದಾಗ ಬೆಳೆ ಚೆನ್ನಾಗಿ ಬೆಳೆದು ಆಳವಾಗಿ ಬೇರುಬಿಟ್ಟು ಮಳೆ ಏರುಪೇರಾದರೂ ಸಹಿಸುವ ಶಕ್ತಿ ಉಂಟಾಗುತ್ತದೆ.

ಒಂದೇ ಬೆಳೆ ಬೆಳೆಯುವುದಕ್ಕಿಂತ ಮಿಶ್ರಬೆಳೆ ಪದ್ಧತಿಯನ್ನು ಅನುಸರಿಸುವುದರಿಂದ ಒಂದು ಬೆಳೆ ಪರಿಸ್ಥಿತಿಯನ್ನು ಎದುರಿಸಲು ವಿಫಲವಾದರೆ ಇನ್ನೊಂದು ಬೆಳೆ ಆದಾಯ ಕೊಡುತ್ತದೆ. ಸಾಮಾನ್ಯವಾಗಿ, ನಮ್ಮಲ್ಲಿ ನೈರುತ್ಯ ಮುಂಗಾರು ಏಪ್ರಿಲ್ ಮಧ್ಯ ಭಾಗದಲ್ಲಿ ಬರುವುದುಂಟು. ಅಂತಹ ಸಂದರ್ಭದಲ್ಲಿ ಖುಷ್ಕಿ ಭೂಮಿಯಲ್ಲಿ ಮೊದಲು ಎಳ್ಳು, ಕಡಲೆ, ಹಲಸಂದೆ, ಆಲೂಗಡ್ಡೆ ಮುಂತಾದ ಬೆಳೆಗಳನ್ನು ಬೆಳೆದು ಅವು ಕಟಾವು ಆದ ತಕ್ಷಣ ಮತ್ತೊಂದು ಬೆಳೆಯನ್ನು ಬೆಳೆಯುವುದು ಒಳ್ಳೆಯದು. ನೀರಾವರಿ ಪ್ರದೇಶದಲ್ಲಿ ಹೆಚ್ಚು ನೀರನ್ನು ನಿಲ್ಲಿಸುವ ಭತ್ತವನ್ನು ಬೆಳೆಯುವುದರಿಂದ ಸ್ವಲ್ಪ ಪ್ರಮಾಣದಲ್ಲಿ ಮಿಥೇನ್ ಬಿಡುಗಡೆಯಾಗಿ ವಾತಾವರಣವನ್ನು ಕಲುಷಿತಗೊಳಿಸುತ್ತದೆ. ಆದುದರಿಂದ ಕಡಿಮೆ ನೀರನ್ನು ಉಪಯೋಗಿಸಿ ಭತ್ತ ಬೆಳೆಯುವ ತಾಂತ್ರಿಕತೆಯನ್ನು ಅಳವಡಿಸಿಕೊಳ್ಳಬೇಕು.

೧. ಸಮಗ್ರ ಕೃಷಿ ಎಂಬುದು ನಮ್ಮಲ್ಲಿ ಸಾಂಪ್ರದಾಯಿಕವಾಗಿ ಅನುಸರಿಸುತ್ತಾ ಬಂದಿರುವ ಕ್ರಮ. ಇರುವ ಜಮೀನಿನಲ್ಲೇ ಆಹಾರದ ಬೆಳೆಗಳು, ಬೇಳೆಕಾಳು ಬೆಳೆಗಳು, ಎಣ್ಣೆಕಾಳು ಬೆಳೆಗಳು, ತರಕಾರಿ, ಜಮೀನಿನ ಸುತ್ತ ಹಣ್ಣಿನ ಬೆಳೆಗಳು, ರಾಸುಗಳಿಗೆ ಮೇವನ್ನು, ನಮಗೆ ಉರುವಲನ್ನು, ಹಣ್ಣನ್ನು ಒದಗಿಸುವ ಹಲಸು, ಸೀಬೆ, ನೇರಳೆ ಮುಂತಾದ ಬೆಳೆಗಳನ್ನು ಬೆಳೆಯುವುದರ ಜೊತೆಗೆ ಹಾಲು ಕೊಡುವ ಹಸು, ಸ್ವಲ್ಪ ಪ್ರಮಾಣದಲ್ಲಿ ಕೋಳಿ, ಆಡು, ಕುರಿ, ಹಂದಿ ಮುಂತಾದವುಗಳ ಪೈಕಿ ಒಂದನ್ನು ಅಳವಡಿಸಿಕೊಂಡು ಸಮಗ್ರ ಕೃಷಿಕ್ರಮ ಕೈಗೊಂಡರೆ ವಾತಾವರಣದಲ್ಲಿ ಏರುಪೇರು ಆದಾಗ ಒಂದಲ್ಲಾ ಒಂದು ಉದ್ದಿಮೆಯಿಂದ ರೈತರ ಆರ್ಥಿಕ ಸ್ಥಿತಿ ಉತ್ತಮಗೊಳ್ಳುತ್ತದೆ.

೨. ಜಮೀನಿನ ಸ್ವಲ್ಪ ಭಾಗದಲ್ಲಿ ನಾವು ಅರಣ್ಯವನ್ನು ಬೆಳೆಸಿದಾಗ ಅದು ಬೀಸುವ ಗಾಳಿಯನ್ನು ತಡೆಯುತ್ತದೆ. ಸೂರ್ಯನ ಕಿರಣಗಳನ್ನು ತಡೆ ಹಿಡಿದು ತಂಪು ನೀಡುತ್ತದೆ. ಬೇರು ಭದ್ರವಾಗಿ ಊರಿ ಮೇಲ್ಮಣ್ಣು ಕೊಚ್ಚಿಹೋಗದಂತೆ ತಡೆಹಿಡಿಯುತ್ತದೆ. ಬಿದ್ದ ಮಳೆ ನೀರು ಇಂಗಲು ನೆರವಾಗುತ್ತದೆ. ರಾಸುಗಳಿಗೆ ಬೇಕಾದ ಮೇವನ್ನು ನಮಗೆ ಬೇಕಾದ ಹಣ್ಣು-ಹಂಪಲನ್ನು ಹಸಿರೆಲೆ ಗೊಬ್ಬರವನ್ನು, ಹಕ್ಕಿ-ಪಕ್ಷಿಗಳು ಕೂರುವುದರಿಂದ ಬೆಳೆಗಳಿಗೆ ಬೀಳುವ ಕ್ರಿಮಿ ಕೀಟಗಳನ್ನು ನಿಯಂತ್ರಿಸಲು ಕೃಷಿ ಅರಣ್ಯ ಬಹು ಉಪಯೋಗಕಾರಿ. ಇದು ಹಸಿರು ಮನೆ ಅನಿಲಗಳ ಅನಾಹುತವನ್ನು ತಡೆಯಲು ನೆರವಾಗುತ್ತದೆ.

೩. ಕಳೆದ ಎರಡೂವರೆ ದಶಕಗಳಿಂದ ಕೃಷಿ ಉತ್ಪನ್ನ ಕುಂಠಿತವಾಗಿ ಮುಂದಿನ ದಿನಗಳಲ್ಲಿ ಆಹಾರದ ಸಮಸ್ಯೆ ಉದ್ಭವಿಸಬಹುದೆಂಬ ಸೂಚನೆ ವಿಶ್ವಸಂಸ್ಥೆಯಿಂದ ಅನೇಕ ರಾಷ್ಟ್ರಗಳಿಗೆ ಬಂದಿದೆ. ಇದನ್ನು ತಪ್ಪಿಸಲು ಈಗ ತಿಳಿಸಿದ ಎಲ್ಲಾ ಆಧುನಿಕ ಬೇಸಾಯಗಳನ್ನು ಅನುಸರಿಸಲು ನೆರವಾಗಲು ರೈತರಿಗೆ ಈಗಾಗಲೇ ಕೇಂದ್ರ ಸರ್ಕಾರ ರಾಷ್ಟ್ರೀಯ ಆಹಾರ ಭದ್ರತಾ ಯೋಜನೆ, ಕೃಷಿ ವಿಕಾಸ ಯೋಜನೆ, ಕೃಷಿ ಯಾಂತ್ರೀಕರಣ ಯೋಜನೆ, ಬೇಳೆಕಾಳು ಮತ್ತು ಎಣ್ಣೆಕಾಳು ಅಭಿವೃದ್ಧಿ ಯೋಜನೆ ಮುಂತಾದ ಅನೇಕ ಯೋಜನೆಗಳ ಮೂಲಕ ರೈತರಿಗೆ ಬೇಕಾದ ಬಿತ್ತನೆ, ಗೊಬ್ಬರ, ಔಷಧಿ, ಯಂತ್ರೋಪಕರಣಗಳನ್ನು ನೀಡುತ್ತಿದೆ. ಇದನ್ನೆಲ್ಲ ರೈತರು ಉಪಯೋಗಿಸಿಕೊಂಡು ಕೃಷಿ ಉತ್ಪನ್ನವನ್ನು ಹೆಚ್ಚಿಸಬೇಕಿದೆ.

೪. ಹವಾಮಾನದ ಏರುಪೇರಿನಿಂದ ವಿಶೇಷವಾಗಿ ದೀರ್ಘಾವಧಿಯ ತೋಟದ ಬೆಳೆಗಳು ಸಂಕಷ್ಟಕ್ಕೆ ಸಿಲುಕಿವೆ. ತಾಪಮಾನವನ್ನು ಎದುರಿಸಲಾರದೆ ಇಳುವರಿ ಕುಂಠಿತವಾಗುತ್ತಿದೆ. ಬರುತ್ತಿರುವ ಉತ್ಪನ್ನಗಳು ಕಳಪೆ ಗುಣಮಟ್ಟದ್ದಾಗಿವೆ. ತೆಂಗು, ಅಡಿಕೆ, ಕಾಫಿ, ಸಂಬಾರು ಬೆಳೆಗಳು, ಅನೇಕ ರೋಗ ಮತ್ತು ಕೀಟಗಳ ಬಾಧೆಗೆ ಒಳಗಾಗುತ್ತಿವೆ. ಅಕಾಲದಲ್ಲಿ ಹೂವು ಬಿಡುವುದು, ಫಲ ನೀಡುವುದು ಪ್ರಾರಂಭವಾಗಿದೆ. ಉದಾಹರಣೆಗೆ, ಮಾವಿನ ಬೆಳೆಯನ್ನೇ ತೆಗೆದುಕೊಂಡರೆ ನವೆಂಬರ್- ಡಿಸೆಂಬರ್ ವೇಳೆಗೆ ಹೂ ಅರಳಿ ಮಾರ್ಚ್ ಕೊನೆ ವೇಳೆಗೆ ಉತ್ತಮ ಹಣ್ಣು ದೊರೆಯಬೇಕು. ಕಾಲವಲ್ಲದ ಕಾಲದ ಮಳೆಯಿಂದ ಹೂವಾಡುವಿಕೆ ಮುಂದಕ್ಕೆ ಹೋಗಿ, ಹಣ್ಣು, ಮಳೆಗಾಲಕ್ಕೆ ಸಿಕ್ಕಿ ಮಾವಿನ ಬೆಳೆಗಾರರು ಪರಿತಪಿಸುತ್ತಿದ್ದಾರೆ.

ಅಡಿಕೆ, ತೆಂಗಿನಲ್ಲಿ ಉಷ್ಣತೆ ಸಹಿಸಲಾರದೆ ಹೀಚುಗಳು ಉದುರುವುದು, ಕಟ್ಟಿದ ಕಾಯಿಗಳು ಬೇಗ ಮಾಗದಿರುವುದು, ಬೆಳವಣಿಗೆಯಲ್ಲೂ ಕುಂಠಿತವಾಗುವುದು ಕಂಡು ಬರುತ್ತಿವೆ. ದಾಳಿಂಬೆ, ಸಪೋಟ, ಮೂಸಂಬಿ ಮುಂತಾದ ಹಣ್ಣಿನ ಬೆಳೆಗಳಿಗೆ ರೋಗ ಕೀಟಗಳ ಕಾಟ ಅಧಿಕವಾಗಿವೆ. ಇವುಗಳಿಗೆಲ್ಲ ಕಾರಣ ಹವಾಮಾನದ ವೈಪರೀತ್ಯ.

ಹೀಗೆ ಹೇಳುತ್ತಾ ಹೋದರೆ ತಾಪಮಾನದ ವ್ಯತ್ಯಾಸದಿಂದ ಹವಾಮಾನವು ವ್ಯತ್ಯಾಸವಾಗಿ ಇಡೀ ಭೂಗೋಳ ನಲುಗುತ್ತಿದೆ ಎಂದರೆ ತಪ್ಪಲ್ಲ. ಆದರೂ ಇದನ್ನೆಲ್ಲಾ ಎದುರಿಸಲು ರೈತರಿಗೆ ನೆರವಾಗಲು ರಾಷ್ಟ್ರೀಯ ತೋಟಗಾರಿಕಾ ಮಿಷನ್, ರಾಷ್ಟ್ರೀಯ

ತೋಟಗಾರಿಕಾ ಮಂಡಳಿ, ವಿವಿಧ ಹಣ್ಣಿನ ಬೇಸಾಯಗಳ ಅಭಿವೃದ್ಧಿ ಯೋಜನೆಗಳ ಮೂಲಕ ರೈತರ ನೆರವಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶ್ರಮಿಸುತ್ತಿವೆ.

ರೈತರು ಈ ನೆರವನ್ನು ಪಡೆದು ಭೂಮಿಯಲ್ಲಿನ ಫಲವತ್ತತೆಯನ್ನು ಹೆಚ್ಚಿಸಿಕೊಂಡು ತೇವಾಂಶ ಹಿಡಿದಿಟ್ಟುಕೊಳ್ಳುವಂತಹ ಕ್ರಮಗಳನ್ನು ಕೈಗೊಂಡು ಆಯಾ ಬೆಳೆಗೆ ಸೂಕ್ತವಾದ ಪೋಷಕಾಂಶಗಳನ್ನು ನೀಡುವುದರಿಂದ ಬೆಳೆಗಳನ್ನು ಸುಧಾರಿಸಲು ಮತ್ತು ಉತ್ಪಾದನೆಯನ್ನು ಕಾಪಾಡಿಕೊಳ್ಳಲು ಸಹಾಯವಾಗುತ್ತದೆ.

೫. ರೇಷ್ಮೆ ಉತ್ಪಾದನೆಯಲ್ಲಿ ಭಾರತ ಎರಡನೇ ಸ್ಥಾನದಲ್ಲಿದೆ. ಇಲ್ಲಿನ ವೈವಿಧ್ಯಮಯ ಮಣ್ಣು, ಹವಾಗುಣ ಹಿಪ್ಪುನೇರಳೆಗೆ ಹೇಳಿಮಾಡಿಸಿದಂತಿರುವ ಕರ್ನಾಟಕದ ರೇಷ್ಮೆಯಂತೂ ಜಗತ್ಪ್ರಸಿದ್ಧ. ಇಂತಹ ಬೆಳೆ ಇಂದು ತಾಪಮಾನಕ್ಕೆ ಸಿಲುಕಿ ಗುಣಮಟ್ಟದ ಗೂಡಿನ ಉತ್ಪಾದನೆ ಕಷ್ಟವಾಗಿದೆ. ಗೂಡಿನ ನೂಲಿನ ಎಳೆಗಳ ಉದ್ದ ಕಡಿಮೆಯಾಗಿದೆ. ಇದಕ್ಕೆಲ್ಲ ಕಾರಣ ಹಿಪ್ಪುನೇರಳೆ ತೋಟಕ್ಕೆ ಬೇಕಾದ ಹಿತ–ಮಿತವಾದ ವಾತಾವರಣ ತಾಪಮಾನದಲ್ಲಿ ಏರುಪೇರು ಆಗಿರುವುದು. ಹುಳು ಸಾಕುವ ಮನೆಯಲ್ಲೂ ಕೂಡ ಹುಳುಗಳು ಉಷ್ಣತೆ ತಡೆಯಲಾರದೆ, ಹೆಚ್ಚು ಬೆವರುವುದು, ಹಾಸಿಗೆಗಳು ಕಲುಷಿತವಾಗುವುದು, ರೋಗಕ್ಕೆ ತುತ್ತಾಗುವುದು, ಸರ್ವೇಸಾಮಾನ್ಯವಾಗಿದೆ. ಗುಣಮಟ್ಟದ ಗೂಡು ಮತ್ತು ನೂಲು ಉತ್ಪಾದನೆಗೆ ಇದು ಕಂಟಕವಾಗಿದೆ.

೬. ವಿಶ್ವದಲ್ಲಿ ಅತೀ ಹೆಚ್ಚು ಸಾಕುಪ್ರಾಣಿಗಳನ್ನು ಹೊಂದಿರುವ ದೇಶ ಭಾರತ. ಇದರಲ್ಲಿ ಮೆಲುಕು ಹಾಕುವ ಪ್ರಾಣಿಗಳು ಮಿಥೇನ್ ಅನಿಲವನ್ನು ವಾತಾವರಣಕ್ಕೆ ಬಿಡುತ್ತವೆ. ಇದರಿಂದ ಅವು ಸೇವಿಸುವ ಒಟ್ಟು ಶಕ್ತಿಯ ಶೇ. ೮೧ರಷ್ಟು ನಷ್ಟವಾಗಿರುತ್ತದೆ. ಮೆಲುಕು ಹಾಕುವ ಪ್ರಾಣಿಗಳ ಮಿಥೇನ್‌ಅನ್ನು ಕಡಿಮೆ ಮಾಡುವ ಪ್ರಯತ್ನ ನಡೆಯುತ್ತಲೇ ಇದೆ. ಇದನ್ನು ಕಡಿಮೆ ಮಾಡಿ ಪಶುಗಳಲ್ಲಿನ ಉತ್ಪಾದನೆಯನ್ನು ಹೆಚ್ಚಿಸಬೇಕಾಗಿದೆ.

೭. ಭಾರತ ಹಸಿರು ಕ್ರಾಂತಿಯನ್ನು ಕಂಡಿದೆ. ಹಾಲಿನ ಉತ್ಪಾದನೆಯಿಂದ ಬಿಳಿ ಕ್ರಾಂತಿಯನ್ನೂ ಕಂಡಿದೆ. ಈಗ ಮೀನಿನ ಉತ್ಪಾದನೆಯಿಂದ ನೀಲಿಕ್ರಾಂತಿ ಕಾಣಬೇಕಿದೆ. ಮೀನು ಕೇವಲ ಆಹಾರ ಪದಾರ್ಥವಲ್ಲ. ಅನೇಕ ಔಷಧೀಯ ಗುಣಗಳುಳ್ಳ ಪ್ರಾಣಿಯೂ ಹೌದು. ಜಾಗತಿಕ ತಾಪಮಾನಕ್ಕೆ ಮತ್ತು ಹವಾಮಾನ ವೈಪರೀತ್ಯಕ್ಕೆ ಉದ್ದಿಮೆ ಮೀನುಗಾರಿಕೆ ಹೆಚ್ಚು ತೊಂದರೆಗೀಡಾಗಿದೆ.

ಸಮುದ್ರದಲ್ಲಿನ ತಾಪಮಾನ ಹೆಚ್ಚಾಗಿ ಕರಾವಳಿ ಪ್ರದೇಶದಲ್ಲಿನ ಅನೇಕ ಮೀನುಗಾರರು ವಲಸೆ ಹೋಗಿದ್ದಾರೆ. ಸಾಗರ ಅಂಚಿನಲ್ಲಿ ನೀರಿನಲ್ಲಿರುವ ಶಾಖವನ್ನು ತಡೆಯಲಾರದೆ ಕೆಲವು ಮೀನುಗಳು ಆಳದ ಕಡೆಗೆ ವಲಸೆ ಹೋಗಿವೆ. ಆದರೆ ಆ ಭಾಗದಲ್ಲಿನ ಸಣ್ಣ ಮೀನುಗಳು ಶಾಖ ತಡೆಯಲಾರದೆ ಸತ್ತು ತೇಲುತ್ತಿವೆ. ಮೀನುಗಾರರಿಗೆ ಮೀನಿನ ತಾನ ಪತ್ತೆ ಹಿಡಿಯುವುದು ಕಷ್ಟವಾಗಿದೆ. ಕೆಲವು ಕಡೆ ಸಮುದ್ರದ ಅಲೆಗಳಲ್ಲಿ ಏರಿಕೆ ಕಂಡುಬಂದಿದ್ದು, ಸಾಂಪ್ರದಾಯಿಕ ಮೀನುಗಳಿರುವ ಕಡೆ ಇಲ್ಲವಾಗಿವೆ.

**ಒಟ್ಟಾರೆ ಅನಾಹುತಗಳನ್ನು ತಗ್ಗಿಸುವ ಮಾರ್ಗೋಪಾಯಗಳು**

ಮೊದಲು ಕಾಲದ ಬದಲಾವಣೆಗೆ ನಮ್ಮನ್ನು ನಾವು ಹೊಂದಿಸಿಕೊಳ್ಳಬೇಕು. ಋತುಮಾನದಲ್ಲಿ ಆಗುವ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳಬೇಕು. ಮಳೆಯಲ್ಲಾಗುವ ಏರುಪೇರನ್ನು ತಿಳಿದುಕೊಳ್ಳಬೇಕು. ಮಳೆಗಾಲ ಮತ್ತು ಮಳೆಯ ಪ್ರಮಾಣದ ಬದಲಾವಣೆಯಿಂದ ಈಗ ಅನುಸರಿಸುತ್ತಿರುವ ಕೃಷಿಪದ್ಧತಿ ಸಾಧ್ಯವೇ ಎಂದು ತಿಳಿದು ಬದಲಾವಣೆಗೆ ತಕ್ಕಂತೆ ಕೃಷಿ ಚಟುವಟಿಕೆಯನ್ನು ಮತ್ತು ಬೆಳೆಯುವ ಬೆಳೆಯನ್ನು ಬದಲಾಯಿಸಿಕೊಳ್ಳಬೇಕು. ಕಡಿಮೆ ನೀರಿನ ಬೇಡಿಕೆಯುಳ್ಳ ಬೆಳೆಗಳನ್ನು ಆರಿಸಿಕೊಳ್ಳಬೇಕು. ಅನವಶ್ಯಕವಾಗಿ ಖರ್ಚುಮಾಡುವ ಶಕ್ತಿಯ ಪ್ರಮಾಣವನ್ನು ತಗ್ಗಿಸಬೇಕು. ವಾತಾವರಣಕ್ಕೆ ಬಿಡುವ ಇಂಗಾಲಾಂಶದ ಅನಿಲಗಳ ಪ್ರಮಾಣವನ್ನು ತಗ್ಗಿಸಬೇಕು, ಹಸಿರು ಪಸರಿಸುವಂತೆ ಮಾಡಬೇಕು. ಬರದ ಪರಿಸ್ಥಿತಿ ಹಾಗೂ ಅಧಿಕ ರಸಗೊಬ್ಬರದ ರೂಪ, ಪ್ರಮಾಣ ಉಪಯೋಗಿಸುವ ವಿಧಾನ, ಸಾವಯವ ಕೃಷಿಯ ಅಳವಡಿಕೆ, ಕಡಿಮೆ ನೀರಿನ ಬೇಡಿಕೆಯ ಬೆಳೆ ಆಯ್ಕೆ, ದನಕರುಗಳ ಸಾಕಾಣಿಕೆ ಇತ್ಯಾದಿ ಹಲವು ಹತ್ತು ರೀತಿಯಿಂದ ಹವಾಮಾನದ ಬದಲಾವಣೆಯಿಂದ ಆಗುವ ತೊಂದರೆಯ ಪ್ರಮಾಣವನ್ನು ತಗ್ಗಿಸಬಹುದು. ಇದರ ಜೊತೆಗೆ ಮಳೆಯ ನೀರನ್ನು ಸಂರಕ್ಷಿಸುವುದು, ಅಕಾಲದಲ್ಲಿ ಬಿದ್ದ ಮಳೆಯ ನೀರನ್ನು ಸಮರ್ಥ ರೀತಿಯಲ್ಲಿ ಶೇಖರಿಸಿ ಸೂಕ್ತ ರೀತಿಯಲ್ಲಿ ಬಳಸುವುದು, ನೀರು ಹೆಚ್ಚು ಆವಿಯಾಗದಂತೆ ನೋಡಿಕೊಳ್ಳುವುದು ಅಲ್ಪ ಕಾಲಿಕ ವ್ಯವಸ್ಥೆಗಳು, ನೀರು ಇಂಗಿಸುವ ಸುಲಭ ಮಾರ್ಗೋಪಾಯಗಳನ್ನು ಅಳವಡಿಸಿಕೊಳ್ಳುವುದು, ಕಡಿಮೆ ಮಳೆಯಾಗುವ ಪ್ರದೇಶಗಳಲ್ಲಿ ಖುಷ್ಕಿ ಬೇಸಾಯಕ್ಕೆ ಆದ್ಯತೆ ಕೊಡುವುದು, ವೈಜ್ಞಾನಿಕ ರೀತಿಯಲ್ಲಿ ಬೇಸಾಯ ಪದ್ಧತಿಗಳನ್ನು ಅಳವಡಿಸಿಕೊಳ್ಳುವುದು ಇತ್ಯಾದಿ ದೀರ್ಘಕಾಲಿಕ ವ್ಯವಸ್ಥೆಗಳು.

ಭಾರತ ಕೃಷಿ ಪ್ರಧಾನವಾದ ದೇಶವಾಗಿದ್ದು, ಶೇ. ೭೦ರಷ್ಟು ಮಂದಿ ಮಳೆಯಾಧಾರಿತ ಕೃಷಿಯನ್ನೇ ಅವಲಂಬಿಸಿದ್ದಾರೆ. ಆದ್ದರಿಂದ ನಮ್ಮ ದೇಶದಲ್ಲಿ ಹವಾಮಾನ ಬದಲಾವಣೆಯಿಂದಾಗುವ ತೊಂದರೆಗಳನ್ನು ಸೂಕ್ತ ರೀತಿಯಲ್ಲಿ ಎದುರಿಸಲು ಎಲ್ಲ ವರ್ಗದ ಜನರೂ ಸಹಕರಿಸಿ ದೇಶದ ಆರ್ಥಿಕ ವ್ಯವಸ್ಥೆಯನ್ನು ಬಲಪಡಿಸಬೇಕಾಗಿದೆ.

೧. ಭಾರತ ಸರ್ಕಾರವು ರಾಷ್ಟ್ರೀಯ ಮಧ್ಯಮಾವಧಿ ಹವಾಮಾನ ಮುನ್ಸೂಚನಾ ಜಾಲದ ಅಡಿಯಲ್ಲಿ ಭಾರತದಲ್ಲಿರುವ ೧೨೭ ಕೃಷಿವಲಯಗಳ ಎಲ್ಲಾ ರೈತರಿಗೆ ಮುಂದಿನ ನಾಲ್ಕು ದಿನಗಳ ವಾತಾವರಣದ ಮುಖ್ಯ ಅಂಶಗಳಾದ ಮಳೆಯ ಪ್ರಮಾಣ, ಉಷ್ಣಾಂಶ, ಗಾಳಿಯ ದಿಕ್ಕು ಮತ್ತು ವೇಗದ ಏರಿಳಿತದ ಬಗ್ಗೆ ಮುನ್ಸೂಚನೆಗಳನ್ನು ಎಲ್ಲಾ ಕೇಂದ್ರಗಳಿಗೆ ವಾರಕ್ಕೆ ಎರಡು ಬಾರಿ ಒದಗಿಸುತ್ತವೆ. ಇದರ ಆಧಾರದ ಮೇಲೆ ಸ್ಥಳೀಯ ಕೇಂದ್ರದಲ್ಲಿ ಲಭ್ಯವಿರುವ ಹಿಂದಿನ ಅಂಕಿ ಅಂಶಗಳು, ವಾತಾವರಣದಲ್ಲಿನ ಹಾಲಿ ಸ್ಥಿತಿಗಳು ಮತ್ತು ನೋಯಿಡಾದಿಂದ (ಉತ್ತರ ಪ್ರದೇಶ) ಬರುವ ಮಾಹಿತಿಯನ್ನು ಕ್ರೋಢೀಕರಿಸಿ ಸ್ಥಳೀಯ ಕೃಷಿ ವಲಯಕ್ಕೆ ಸೂಕ್ತವಾದ ಮುನ್ಸೂಚನೆಯನ್ನು ಪ್ರತಿ ಕೃಷಿವಲಯದಿಂದ ಮಾಧ್ಯಮಕ್ಕೆ ಬಿಡುಗಡೆ ಮಾಡುತ್ತಾರೆ.

೨. ಈ ಮುನ್ಸೂಚನೆ ವರದಿಯಲ್ಲಿ ಹಿಂದಿನ ಒಂದು ವಾರದ ಹವಾಮಾನದ ಪರಿಸ್ಥಿತಿ ಬೆಳೆಯಂತಹ ಹಾಗೂ ಮುಂದಿನ ನಾಲ್ಕು ದಿನಗಳಲ್ಲಿ ವಾತಾವರಣದ ಪರಿಸ್ಥಿತಿಯ ಬಗ್ಗೆ ಮುನ್ಸೂಚನೆ ಮತ್ತು ಹಾಲಿ ಪರಿಸ್ಥಿತಿ, ಮುಂದಿನ ಹವಾಮಾನ ಪರಿಸ್ಥಿತಿ ಅರಿತು ರೈತರು ಕೈಗೊಳ್ಳಬೇಕಾದ ಕೃಷಿ ಕಾರ್ಯಕ್ರಮಗಳ ಬಗ್ಗೆಯೂ ಮಾಹಿತಿ ಇರುತ್ತದೆ. ಇದರಿಂದಾಗುವ ಪ್ರಯೋಜನಗಳೆಂದರೆ ಮಳೆಯನ್ನಾಧರಿಸಿ ಕೃಷಿ ಕೆಲಸಗಳನ್ನು ಕಾಲಕ್ಕೆ ತಕ್ಕಂತೆ ಪ್ರಾರಂಭಿಸಲು ಸಲಹೆ, ತೇವಾಂಶದ ಆಧಾರದ ಮೇಲೆ ಬೆಳೆ ನಿರ್ಧರಿಸಲು ಸಲಹೆ, ಬೇಸಾಯದ ನಡುವೆ ಒಣ ಹವೆ ಮುಂದುವರಿದರೆ ಅನುಸರಿಸಬೇಕಾದ ಅಂತರಬೇಸಾಯಗಳ ಬಗ್ಗೆ ಸಲಹೆ, ಗೊಬ್ಬರ ಹಾಗೂ ಕ್ರಿಮಿನಾಶಕಗಳ ಬಳಕೆಯ ಬಗ್ಗೆ ಸೂಕ್ತ ಸಲಹೆ, ಕೊಯ್ಲು ಮತ್ತು ಸಂಸ್ಕರಣೆ ಅವಧಿಯಲ್ಲಿ ಬೆಳೆಯನ್ನು ಮಳೆಯಿಂದಾಗುವ ಹಾನಿಯನ್ನು ತಡೆಯಲು ಸಲಹೆ ಮುಂತಾದ ಅಂಶಗಳನ್ನೊಳಗೊಂಡಿರುತ್ತದೆ.

೩. ಆದರೆ ಇವೆಲ್ಲವೂ ಕೆಲವೊಮ್ಮೆ ಏರುಪೇರಾಗುತ್ತದೆ. ನಮ್ಮ ರೈತ ಸಹೋದರ–ಸಹೋದರಿಯರಿಗೆ, ಕ್ಷೇತ್ರ ಕಾರ್ಯಕರ್ತರಿಗೆ, ಕೃಷಿ ವಿಜ್ಞಾನಿಗಳಿಗೆ ಬೇಕಾಗಿರುವುದು ನಿರ್ದಿಷ್ಟ ಮತ್ತು ಪಾರದರ್ಶಕ ಮಾಹಿತಿ ಹಾಗೂ ಅಂಕಿ ಅಂಶಗಳು. ನಮಗೆ ಈಗ ದೊರೆಯುತ್ತಿರುವುದರಲ್ಲಿ ಮುಂದೆ ಆಗುವುದನ್ನು ಅಂದಾಜು ಮಾಡುವ ಬಗ್ಗೆ ಪರಿಪೂರ್ಣತೆ ಹಾಗೂ ಕ್ರೋಢೀಕರಿಸಿದ ಮಾಹಿತಿಗಳು ಇಲ್ಲ.

ವಿವಿಧ ಮೂಲಗಳಿಂದ ಹವಾಮಾನ ಬದಲಾವಣೆ ಕುರಿತು ವಿವರಗಳು ದೊರೆಯುತ್ತಿಲ್ಲ. ಪವನಶಾಸ್ತ್ರದ ಇಲಾಖೆಯವರ ಅಂಕಿ ಅಂಶಗಳು, ಹಿಮಬಂಡೆಗಳನ್ನು ಕುರಿತ ಮಾಹಿತಿ, ಸಮುದ್ರ–ಸಾಗರಗಳ ಜಲಸಂಗ್ರಹಣ ಪ್ರದೇಶಗಳು, ಅರಣ್ಯ ಹೊದಿಕೆ, ಮರಗಿಡಗಳು, ಹುಲ್ಲಿನ ಹೊದಿಕೆ, ಗಣಿಗಳು, ಖನಿಜಗಳು, ಕಲುಷಿತಗೊಳಿಸುವ ಮೂಲಗಳು, ಅಂದರೆ ಕೈಗಾರಿಕೆಯಿಂದ ಆಗುತ್ತಿರುವ ಹಾನಿ ಇವ್ಯಾವುವೂ ನಮಗೆ ಲಭ್ಯವಿಲ್ಲ. ಹಾಗಾಗಿ ಈಗ ಒದಗಿಸುತ್ತಿರುವ ಅಂಕಿ ಅಂಶಗಳು ಮತ್ತು ಮಾಹಿತಿ ಅಷ್ಟು ಉಪಯುಕ್ತವಲ್ಲ. ಸಾಗರದ ಒತ್ತಡ ಕುಸಿದು ಏರ್ಪಡುವ ವಾತಾವರಣದ ಬಗ್ಗೆ ದೊರೆಯುವ ಮಾಹಿತಿ, ಏನಿದ್ದರೂ ಅವು ಸಾಕಷ್ಟು ಹಾನಿ ಅನಾಹುತಗಳನ್ನು ಮಾಡಿದ ನಂತರ ದೊರೆಯುತ್ತವೆ. ಭೂಕಂಪ, ಪ್ರಳಯ, ಆಲಿಕಲ್ಲು ಮಳೆ, ಚಂಡಮಾರುತ ಮುಂತಾದವುಗಳ ಬಗ್ಗೆಯೂ ಘಟನೆ ನಡೆದ ನಂತರ ಮಾಹಿತಿ ದೊರೆಯುತ್ತದೆ. ಅತಿಯಾದ ಅವಲಂಬನೆಯ ಅರ್ಥವ್ಯವಸ್ಥೆಯಿಂದ ಹೊರಬರುವ ಪ್ರಯತ್ನ ನಡೆಯಬೇಕು, ಪ್ಯಾರಿಸ್ ಒಪ್ಪಂದದ ಪ್ರತಿಯೊಂದು ಅಕ್ಷರವನ್ನೂ ಕಟ್ಟುನಿಟ್ಟಾಗಿ ಅನುಷ್ಠಾನಕ್ಕೆ ತರುವುದು ಎಲ್ಲ ದೇಶಗಳ ಜವಾಬ್ದಾರಿ.

**ಡಾ|| ಸುರೇಶ್ ಕೆ. ಪಿ.**
ಸಹ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ನ್ಯಾಷನಲ್ ಡಿಗ್ರಿ ಕಾಲೇಜು
ಬಸವನಗುಡಿ, ಬೆಂಗಳೂರು – ೫೬೦ ೦೦೪







**ಲೇಖಕರು : ಡಾ|| ಶಿವಾನಂದ ಎಂ. ಜಾಮದಾರ**
ಪುಟಗಳು : ೧೯೬ ಬೆಲೆ : ರೂ. ೫೦೦/-
**ಪ್ರಕಾಶಕರು : ಮನೋಹರ ಗ್ರಂಥಮಾಲಾ**
ಲಕ್ಷ್ಮೀ ಭವನ, ಸುಭಾಷ್ ರಸ್ತೆ, ಧಾರವಾಡ – ೫೮೦ ೦೦೧

# ತಾರತಮ್ಯ : ಮಹತ್ವದ ಮಾಹಿತಿಯ ಗೆಜೆಟಿಯರ್

**ಡಾ||** ಶಿವಾನಂದ ಎಂ. ಜಾಮದಾರ ಆಡಳಿತಾಧಿಕಾರಿಯಾಗಿ ಕೆಲಸ ಮಾಡಿ ನಿವೃತ್ತರಾಗಿದ್ದಾರೆ. ಕರ್ನಾಟಕದ ಪ್ರಾಮಾಣಿಕ ಅಧಿಕಾರಿಗಳಲ್ಲಿ ಅವರೂ ಒಬ್ಬರಾಗಿದ್ದರು. ಇತ್ತೀಚೆಗೆ ಅವರು ಬರೆದ 'ತಾರತಮ್ಯ' ಎಂಬ ಪುಸ್ತಕ ಉತ್ತರ ಕರ್ನಾಟಕ ಏಕೆ, ಹೇಗೆ, ಯಾರಿಂದ ಹಿಂದುಳಿದ ಪ್ರದೇಶವಾಗಿ ದಯನೀಯ ಸ್ಥಿತಿ ಅನುಭವಿಸುತ್ತಿದೆ ಎಂಬ ಪ್ರಶ್ನೆಗಳಿಗೆ ವೈಜ್ಞಾನಿಕ ಉತ್ತರ ನೀಡುವ ಯತ್ನ ಮಾಡಿದೆ. ಶಿವಾನಂದ ಜಾಮದಾರರ ಈ ನಾಡಿನ ಅಭಿವೃದ್ಧಿಯ ಬಗ್ಗೆ ಜಿಜ್ಞಾಸೆ ಇದ್ದವರು. ಇದು ರಾಜಕೀಯ ನಾಯಕರು ಮುಂತಾದವರೆಲ್ಲ ಗಮನಿಸಲೇಬೇಕಾದ ಕೃತಿ. ಅಂಕಿ-ಸಂಖ್ಯೆಗಳು ಮತ್ತು ಚಿತ್ರಗಳ ಸಹಿತ ಆರ್ಟ್ ಪೇಪರಿನಲ್ಲಿ ಮುದ್ರಿತವಾಗಿರುವುದು ಇದರ ಹೆಗ್ಗಳಿಕೆ.

ಪಾಟೀಲ ಪುಟ್ಟಪ್ಪನವರು ಈ ಪುಸ್ತಕಕ್ಕೆ ಮುನ್ನುಡಿ ಬರೆದಿದ್ದಾರೆ. ಏಕೀಕರಣದ ಚಳುವಳಿಯೊಂದಿಗೆ ಹೊಕ್ಕುಳ ಬಳ್ಳಿ ಸಂಬಂಧ ಹೊಂದಿರುವ ಇವರು ಏಕೀಕರಣದ ಹೋರಾಟದಲ್ಲಿ ಮುಚ್ಚಿಹೋಗಿದ್ದ ಕೆಲವು ಘಟನೆಗಳನ್ನು ತೆರೆದಿಟ್ಟಿದ್ದಾರೆ. ಸೈಮನ್ ಕಮಿಶನ್‌ಗೆ ಸರ್ ಸಿದ್ಧಪ್ಪ ಕಂಬಳಿಯವರು ಕರ್ನಾಟಕ ರಾಜ್ಯದ ಬೇಡಿಕೆಯನ್ನು ಸಲ್ಲಿಸದೇ ಇದ್ದಿದ್ದರೆ ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂಬ ದಯನೀಯ ಕೂಗು ಇಂದು ಇರುತ್ತಿರಲಿಲ್ಲ. ಏಕೀಕರಣ ಹೋರಾಟಕ್ಕೆ 'ಕುದಿ' ಬಂದಾಗ ಹಿಂದೆ ಸರಿದವರು ಯಾರು ಎಂಬ ಪ್ರಶ್ನೆಗೆ ಉತ್ತರ ಹೇಳುತ್ತಲೇ ಹೋರಾಟದ ಒಳರಾಜಕೀಯವನ್ನು ಬಿಚ್ಚಿಟ್ಟಿದ್ದಾರೆ. ಅಖಂಡ (ಅಪೂರ್ಣ) ಕರ್ನಾಟಕ ಸರಳವಾಗಿ ರೂಪುಗೊಂಡಿಲ್ಲ ಎಂಬುದನ್ನು ಮನಗಾಣಲು ಹೊಸ ತಲೆಮಾರು ಇಲ್ಲಿಯ ವಿವರಣೆಯನ್ನು ಗಮನಿಸಬೇಕು. ಲೇಖಕರು ತಮ್ಮ ಮೂರು ದಶಕಕ್ಕೂ ಹೆಚ್ಚಿನ ಕಾಲದ ಆಡಳಿತದ ಅನುಭವದಲ್ಲಿ ಉತ್ತರ ಕರ್ನಾಟಕಕ್ಕೆ ಆದ ಅನ್ಯಾಯಕ್ಕೆ ಧರ್ಮ, ರಾಜಕೀಯ, ಜಾತಿ, ವೈಯಕ್ತಿಕತೆ ಮುಂತಾದುವು ಹೇಗೆ ಕಾರಣವಾಗಿವೆ ಎಂಬುದನ್ನು ಯಾರ ಮುಲಾಜೂ ಇಲ್ಲದೆ ವಿವರಿಸಿದ್ದಾರೆ.

ಕರ್ನಾಟಕ ಸರಕಾರ ೧೯೮೦ರಲ್ಲಿ ಜಿಲ್ಲಾವಾರು ಅಭಿವೃದ್ಧಿ ಅಧ್ಯಯನಕ್ಕಾಗಿ ಆಯೋಗವೊಂದನ್ನು ನೇಮಿಸಿತ್ತು. ಆದರೆ ಇದು ಚರ್ಚೆಗೆ ಬರಲೇ ಇಲ್ಲ. ಉತ್ತರ ಕರ್ನಾಟಕದ ಹಿಂದುಳಿದಿರುವಿಕೆಯ ಬಗ್ಗೆ ಶಾಸನ ಸಭೆಯಲ್ಲಿ ಮೊಟ್ಟಮೊದಲಿಗೆ ಧ್ವನಿ ಎತ್ತಿದವರು ಹುನಗುಂದ ಶಾಸಕ ಶಿವಸಂಗಪ್ಪ ಕಡಪಟ್ಟಿ. ಉತ್ತರ ಕರ್ನಾಟಕದವರು 'ಮಲಮಕ್ಕಳಲ್ಲ' ಎಂದು ಶಾಸನ ಸಭೆಯಲ್ಲಿ ಹೇಳಿ ಕೃಷ್ಣೆ ಹಾಗೂ ಕಾವೇರಿ ಕೊಳ್ಳದ ಯೋಜನೆಗಳಿಗೆ ಏಕೀಕರಣದ ನಂತರ ವೆಚ್ಚ ಮಾಡಿದ ಹಣದ ಮಾಹಿತಿ ಕೇಳಿದರು. ಅದಕ್ಕೆ ಪ್ರತಿಕ್ರಿಯಿಸಿದ ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಡೆ ಕಡಪಟ್ಟಿಯವರನ್ನು 'ಪ್ರಾದೇಶಿಕ ಅಸಮತೋಲನ ಸಮಿತಿ' ಅಧ್ಯಕ್ಷರನ್ನಾಗಿ ಮಾಡಿ ಕೈತೊಳೆದುಕೊಂಡರು. ನಂತರ ಬಂದ ವೀರೇಂದ್ರ ಪಾಟೀಲರ ಸರಕಾರ ಈ ವರದಿಯನ್ನು ಒಪ್ಪಿಕೊಂಡಿತು. ನಂತರ ಮಹಿಷಿ ವರದಿ 'ಕನ್ನಡಿಗರಿಗೆ ಉದ್ಯೋಗ' ಎಂದು ಘೋಷಿಸಿತು. ಕೊನೆಗೆ ನಂಜುಂಡಪ್ಪ ವರದಿ ಪ್ರಾದೇಶಿಕ ಅಸಮತೋಲನದ ಬಗ್ಗೆ ವರದಿ ನೀಡಿತು. ಇದೇ ಸಂದರ್ಭದಲ್ಲಿ ಎಚ್. ಕೆ. ಪಾಟೀಲರು ಕರ್ನಾಟಕದ ಅಭಿವೃದ್ಧಿ ಹಾಗೂ ಕೃಷ್ಣಾ ಯೋಜನೆಗಳ ಬಗ್ಗೆ ಪುಸ್ತಿಕೆ ಪ್ರಕಟಿಸಿದರು. ಮೊದಲಿನ ಎರಡು ವಿವರಗಳನ್ನು ಲೇಖಕರು ದಾಖಲಿಸಬೇಕಾಗಿತ್ತು.

ಇಡೀ ಪುಸ್ತಕದ ಸಾರವನ್ನು ಈ ಕೆಳಗಿನ ಅಂಶಗಳಲ್ಲಿ ವಿವರಿಸಬಹುದು : 'ಇತಿಹಾಸದ ಸ್ಥಿತ್ಯಂತರ' ಎಂಬ ಮೊದಲ ಅಧ್ಯಾಯದಲ್ಲಿ ಇತಿಹಾಸದ ಬಗ್ಗೆ ಇರುವ ಸಾಮಾನ್ಯ ಗ್ರಹಿಕೆಗೆ ಹೊಸ ತಿರುವು ಕೊಟ್ಟಿದ್ದಾರೆ. ಇತಿಹಾಸ ಎಂದರೆ ರಾಜ-ರಾಣಿಯರ, ಯುದ್ಧಗಳ ಕತೆ ಎಂಬ ಸಾಮಾನ್ಯ ನಂಬಿಕೆ ಇದೆ. ಆದರೆ ಇದು ಇಂದು ನಿನ್ನೆ ನಾಳೆಗಳನ್ನು ಬೆಸೆದಿರುತ್ತದೆ. "ಇಂದಿನ ವರ್ತಮಾನ ನಾಳಿನ ಇತಿಹಾಸ"ವಾಗುತ್ತದೆ. ನಾಲ್ಕನೇ ಶತಮಾನದಿಂದ ಹದಿನೇಳನೇ ಶತಮಾನದವರೆಗಿನ ಉತ್ತರ ಕರ್ನಾಟಕದ ಇತಿಹಾಸವನ್ನು ವಿವರಿಸಲಾಗಿದೆ. ಜೊತೆಗೆ, ಒಡೆದುಹೋದ ಕರ್ನಾಟಕದ ದುಃಸ್ಥಿತಿಯ ವರ್ಣನೆ ಇದೆ. ಬೆಂಗಳೂರಿನ 'ಶಿವಾಜಿನಗರ' ಒಂದು ಕಾಲದಲ್ಲಿ ವಿಜಯಪುರದ ಸುಲ್ತಾನರ ಆಡಳಿತಕ್ಕೆ ಒಳಪಟ್ಟ ವಿಷಯ ದಾಖಲಾಗಿದೆ. ಮೈಸೂರು ಯುದ್ಧದಲ್ಲಿ ಟೀಪು ಜಯಶಾಲಿಯಾಗಿದ್ದರೆ ಕರ್ನಾಟಕದ ಏಕೀಕರಣದ ಅಗತ್ಯವೇ ಇರುತ್ತಿರಲಿಲ್ಲ ಎಂದು ಹೇಳುತ್ತ ಕನ್ನಡ ಭಾಷಿಕರ ನೆಲೆಗಳನ್ನು ಟೀಪು ಒಂದುಗೂಡಿಸಿದ ಕತೆಯ ವಿವರಣೆ ಇದೆ. ಏಕೀಕರಣ ಪೂರ್ವದ ಹಳೆ ಮೈಸೂರು ರಾಜ್ಯದ ವಿವರಣೆಯನ್ನು ಎರಡನೇ ಅಧ್ಯಾಯದಲ್ಲಿ ಕಾಣಬಹುದು.

ಮೂರನೇ ಅಧ್ಯಾಯ ಏಕೀಕರಣದ ಸಿಕ್ಕುಗಳನ್ನು ಬಿಡಿಸುತ್ತದೆ. 'ಕರ್ನಾಟಕ' ಎಂಬ ಶಬ್ದ ಔಪಚಾರಿಕವಾಗಿ ಬಳಕೆಯಲ್ಲಿ ಇರಲಿಲ್ಲ. ಆದರೂ ಉತ್ತರ ಕರ್ನಾಟಕದ ಹಲವು ಸಾಮ್ರಾಜ್ಯಗಳು ಕರ್ನಾಟಕ ಎಂಬ ಶಬ್ದವನ್ನು ಬೇರೆ ಬೇರೆ ಕಾರಣಕ್ಕಾಗಿ ಬಳಸಿದ ದಾಖಲೆಗಳ ವಿವರಣೆ ಇದೆ. ಸ್ವಾತಂತ್ರ್ಯ ಪೂರ್ವದಲ್ಲಿ ಕಾಂಗ್ರೆಸ್ ಪಕ್ಷ ಭಾಷಾವಾರು ಪ್ರಾಂತ ರಚನೆಗೆ ಮಹತ್ವ ಕೊಟ್ಟಿತ್ತು. ೧೯೫೬ರ ನಂತರ ಮೈಸೂರಿನಲ್ಲಿ ದಿವಾನರ ಆಡಳಿತ ಕೊನೆಗೊಂಡು ಜನಪ್ರತಿನಿಧಿಗಳ ಆಡಳಿತ ಪ್ರಾರಂಭವಾಯಿತು. ಜನಪ್ರತಿನಿಧಿಗಳ ಸಭೆಯಲ್ಲಿ ಮೈಸೂರು ಭಾಗದ ರಾಜಕಾರಣಿಗಳು ಏಕೀಕರಣವನ್ನು ವಿರೋಧಿಸಿದರು. ಸಂವಿಧಾನ ರಚನಾ ಪರಿಷತ್ತು ಕೂಡ ಭಾಷಾವಾರು ಪ್ರಾಂತ ರಚನೆ ಭಾರತದ ಏಕತೆಗೆ ಆತಂಕ ಉಂಟುಮಾಡಲಿದೆ ಎಂಬ ಸಂಶಯ ವ್ಯಕ್ತಪಡಿಸಿತ್ತು. ಕರ್ನಾಟಕದ ಉತ್ತರ ಭಾಗ ಮೈಸೂರು ರಾಜ್ಯದೊಂದಿಗೆ ಸೇರಿದರೆ ಸಂಪನ್ಮೂಲ ಹಾಗೂ ರಾಜಕೀಯ ಅಧಿಕಾರವನ್ನು ಉತ್ತರ ಕರ್ನಾಟಕದವರೊಂದಿಗೆ ಹಂಚಿಕೊಳ್ಳಬೇಕಾಗುತ್ತದೆಂಬ ಸಂಕುಚಿತ ಆಲೋಚನೆ ಕೆಲವರಲ್ಲಿತ್ತು ಎಂಬುದನ್ನು ಈ ಕೃತಿಯಲ್ಲಿ ದಾಖಲಿಸಿದ್ದಾರೆ.

ಜಾಗತಿಕವಾಗಿ ನದಿ ದಂಡೆಯ ಮೇಲೆ ವಿಕಾಸವಾದ ನಾಗರಿಕತೆಗಳ ಬಗ್ಗೆ ಹೇಳುತ್ತಲೇ ನಾಲ್ಕನೇ ಅಧ್ಯಾಯ ಪರಿಸರ ಮಾನವನ ಜೀವನದ ಮೇಲೆ ಬೀರುವ ಪರಿಣಾಮದ ಬಗ್ಗೆ ಚರ್ಚಿಸುತ್ತದೆ. ಉತ್ತರ ಕರ್ನಾಟಕದ ಜೀವನದಿಗಳಾದ ತುಂಗಭದ್ರೆ, ಕೃಷ್ಣಾ ನದಿ ಹಾಗೂ ಇವುಗಳಲ್ಲಿ ಸಂಗಮಗೊಳ್ಳುವ ಉಪನದಿಗಳ ಬಗ್ಗೆ ವಿವರಣೆ ಇದೆ. ಇಲ್ಲಿ ರೂಪಗೊಂಡ ಬದುಕಿಗೆ ಸಂಸ್ಕೃತಿ, ನಾಗರಿಕತೆ ಎಂದು ಕರೆಯುತ್ತೇವೆ. ಉತ್ತರ ಕರ್ನಾಟಕದ ಕರಾವಳಿ, ಅರಣ್ಯ, ಬಯಲುಸೀಮೆ ನಂತರದ ಅಧ್ಯಾಯಗಳಲ್ಲಿ ನಿರೂಪಣೆಗೊಂಡಿವೆ. ಜೊತೆಗೆ, ಈ ಭೌಗೋಳಿಕ ಸಂಪತ್ತಿನಿಂದ ಸಾಧಿಸಬಹುದಾದ ಅಭಿವೃದ್ಧಿಯ ಮಾರ್ಗಗಳ ವಿವರಣೆ ಇದೆ.

ನಂತರದ ಅಧ್ಯಾಯಗಳಲ್ಲಿ ಉತ್ತರ ಕರ್ನಾಟಕದ ಭೌಗೋಳಿಕ ಸಂಪತ್ತುಗಳಾದ ಕರಾವಳಿ, ಅರಣ್ಯ, ಬಯಲುಸೀಮೆ, ಜಲಸಂಪನ್ಮೂಲ, ಔದ್ಯೋಗೀಕರಣ, ನಗರೀಕರಣ ಮುಂತಾದವುಗಳ ಸುದೀರ್ಘ

**ಮಹೇಶ ತಿಪ್ಪಶೆಟ್ಟಿ**

ವಿವರಣೆ ಇದೆ. ಮೈಸೂರು ರಾಜ್ಯ ಎಂಬ ಹೆಸರಿನಿಂದ ಕರ್ನಾಟಕ ಎಂದು ನಾಮಕರಣವಾದ ಹಿನ್ನೆಲೆಯನ್ನು ದೇವರಾಜ ಅರಸರ ಹೆಗ್ಗಳಿಕೆ ಎಂದು ಸಾಮಾನ್ಯರು ಭಾವಿಸಿದ್ದಾರೆ. ಆದರೆ ಅನಿವಾರ್ಯವಾಗಿ ಅವರು ಒಲ್ಲದ ಮನಸ್ಸಿನಿಂದ ಬದಲಾವಣೆ ಒಪ್ಪಬೇಕಾಯ್ತು ಎಂಬ ಗುಟ್ಟನ್ನು ಇಲ್ಲಿ ಬಯಲುಮಾಡಲಾಗಿದೆ. ಏಕೀಕರಣವಾದ ಮೇಲೆ ಮೈಸೂರು ಭಾಗದ ಜಿಲ್ಲೆಗಳಿಗೆ ಹೆಚ್ಚಿನ ಹಣ ವೆಚ್ಚ ಮಾಡಿದರೂ ಉತ್ತರ ಕರ್ನಾಟಕದ ಜನಪ್ರತಿನಿಧಿಗಳು ದಿವ್ಯಮೌನ ಅನುಸರಿಸಿದರು. ಇಲ್ಲಿ ಉತ್ತರ ಕರ್ನಾಟಕದ ಸಂಪನ್ಮೂಲಗಳನ್ನು ಸರಿಯಾಗಿ ಬಳಸಿಕೊಳ್ಳಲಾರದ ಬಗ್ಗೆ ಸುದೀರ್ಘ ವಿವರಣೆ ಇದೆ. ೯ನೇ ಅಧ್ಯಾಯದಲ್ಲಿ ಹದಿನೇಳು ಕ್ಷೇತ್ರಗಳ ವಿವರಣೆ ನೀಡುತ್ತ ಹೇಗೆ ಉತ್ತರ ಕರ್ನಾಟಕವನ್ನು ನಿರ್ಲಕ್ಷಿಸಲಾಗಿದೆ ಎಂಬ ಬಗ್ಗೆ ಕನ್ನಡಿ ಹಿಡಿದಿದ್ದಾರೆ. ಕಾವೇರಿ ಕೊಳ್ಳದ ಯೋಜನೆಗಳಿಂದ ಕೇವಲ ಹನ್ನೆರಡು ಲಕ್ಷ ಹೆಕ್ಟೇರ್ ಭೂಮಿ ನೀರಾವರಿಗೆ ಒಳಪಟ್ಟರೆ ಕೃಷ್ಣೆಯಿಂದ ನಲವತ್ತೈದು ಲಕ್ಷ ಹೆಕ್ಟೇರ್ ಭೂಮಿ ತಣಿಯುತ್ತದೆ. ಆದರೆ ೧೯೯೪ರವರೆಗೆ ಸರಕಾರ ಸಕಾಲಿಕ ನಿರ್ಧಾರ ತೆಗೆದುಕೊಳ್ಳಲಾರದ್ದಕ್ಕೆ ಅನೇಕ ಅನಾಹುತಗಳು ಜರುಗಿಬಿಟ್ಟವೆ. ಉತ್ತರ ಕರ್ನಾಟಕದಲ್ಲಿ ಒಟ್ಟು ಎಪ್ಪತ್ನಾಲ್ಕು (೭೪) ಉಪನದಿಗಳಿವೆ. ಇವುಗಳಿಗೆ ಬಾಂದಾರು ಕಟ್ಟಿದ್ದರೂ ಅಂತರ್ಜಲ ಹೆಚ್ಚಿಸ ಬಹುದಾಗಿತ್ತು. ಜೊತೆಗೆ ಕೃಷಿ ಆಧಾರಿತ ಕೈಗಾರಿಕೆಗಳನ್ನು ಸ್ಥಾಪಿಸಬಹುದಿತ್ತು.

ಮೈಸೂರು ಪ್ರದೇಶದ ಹಾಗೂ ಉತ್ತರ ಕರ್ನಾಟಕದ ಬಾಹ್ಯ ಬದುಕಿನ ಹಲವು ವ್ಯತ್ಯಾಸಗಳನ್ನು ಹದಿನಾಲ್ಕನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ವಿಶೇಷವಾಗಿ ಆಹಾರ, ಉಡಿಗೆ, ಭಾಷೆ, ಸಾಹಿತ್ಯ, ಸಂಗೀತ, ಹಬ್ಬ, ಹವ್ಯಾಸ ಮುಂತಾದವುಗಳ ವಿವರಣೆ ಇಲ್ಲಿದೆ. ಭಾರತಕ್ಕೆ ಏಕರೂಪದ ಸಂಸ್ಕೃತಿ ತರುವ ಹುನ್ನಾರ ಬಹಿರಂಗವಾಗಿಯೇ ಜರುಗುತ್ತಿದೆ. ವಿವಿಧತೆ 'ನಮ್ಮ' ಸಂಸ್ಕೃತಿಯ ಶಕ್ತಿ ಎಂಬುದನ್ನು ಆಡಳಿತಗಾರರು ಅರಿಯಬೇಕು ಎಂದು ಲೇಖಕರು ಎಚ್ಚರಿಸಿದ್ದಾರೆ. ಈ ವ್ಯತ್ಯಾಸಗಳಲ್ಲಿ ಶ್ರೇಣೀಕರಣ ಉಂಟಾದರೆ ಆಗುವ ದುಷ್ಪರಿಣಾಮಗಳನ್ನು ಗಮನಿಸಲಾಗಿದೆ. ಚಲನಚಿತ್ರ, ಧಾರಾವಾಹಿ ಮುಂತಾದವುಗಳಲ್ಲಿ ಉತ್ತರ ಕರ್ನಾಟಕವನ್ನು ಅವಹೇಳನಕಾರಿಯಾಗಿ ಬಳಸಲಾಗುತ್ತಿದೆ. ಚದುರಿದ ಗ್ರಾಮಗಳು ಉತ್ತರ ಕರ್ನಾಟಕದಲ್ಲಿ ಹೆಚ್ಚು ಇವೆ. ಗ್ರಾಮ ಪಂಚಾಯತ್ ಹಾಗೂ ತಾಲೂಕುಗಳ ವಿಂಗಡಣೆಯ ಅವಶ್ಯಕತೆಯನ್ನು ಲೇಖಕರು ಪ್ರತಿಪಾದಿಸಿದ್ದಾರೆ. ರಾಜ್ಯಸಭೆ, ವಿಧಾನ ಪರಿಷತ್ತುಗಳಿಗೆ ಹೊರಗಿನವರಿಗೆ ಕೆಂಪು ಕಂಬಳಿ ಹಾಸುವುದನ್ನು ಖಂಡಿಸಿದ್ದಾರೆ. ಜೊತೆಗೆ ಗ್ರಾಮ ಪಂಚಾಯತ್‌ಗಳ ಸಂಖ್ಯೆಗೆ ಜನಸಾಂದ್ರತೆ ಹಾಗೂ ಪ್ರದೇಶದ ವಿಸ್ತೀರ್ಣ ಗಮನಿಸಬೇಕೆಂಬ ಸಲಹೆ ನೀಡಿದ್ದಾರೆ.

'ಸೆಕ್ಯೂಲರ್' ಎಂಬ ಆಮದು ಮಾಡಿಕೊಂಡ ಶಬ್ದ ಭಾರತದಲ್ಲಿ ವಿಭಿನ್ನ ಅರ್ಥೈಸುವಿಕೆಗೆ ಒಳಗಾಗಿದೆ. 'ಸರ್ವೇಜನಾಃ ಸುಖಿನೋಭವಂತು' ಎಂಬ ಹುಸಿಮಂತ್ರ ಹೇಳುತ್ತಾ ಭಾರತದಲ್ಲಿ ಕೋಮು ಸೌಹಾರ್ದತೆ ಇತ್ತು ಎಂಬ ಸುಳ್ಳು ಪ್ರಚಾರ ಮಾಡಲಾಗುತ್ತದೆ. ಕರ್ನಾಟಕದಲ್ಲಿ ಶೈವ ಹಾಗೂ ಜೈನರಲ್ಲಿ ನಡೆದ ಘರ್ಷಣೆಯ ಇತಿಹಾಸ ಇದಕ್ಕೆ ಸಾಕ್ಷಿಯಾಗಿದೆ. ಇದಕ್ಕೆ ಪೂರಕವಾಗಿ ಹೊಸ ಸಾಕ್ಷಿಯನ್ನು ಲೇಖಕರು ೧೫೬ರಿಂದ ೧೫೮ನೇ ಪುಟದಲ್ಲಿ ದಾಖಲಿಸಿದ್ದಾರೆ. 'ಜಂಗಮ ಕ್ರಾಂತಿ' ಎಂದು ಈ ಘಟನೆ ಇತಿಹಾಸದಲ್ಲಿ ದಾಖಲೆಯಾಗಿದೆ. ಕರ್ನಲ್ ಮ್ಯಾಕ್ಸ್‌ವಿಲ್ ೧೮೦೦ರಲ್ಲಿ ಬರೆದ 'ಮೈಸೂರು ಇತಿಹಾಸ' ಎಂಬ ಗ್ರಂಥದಲ್ಲಿ ಇದರ ಕುರಿತ ವಿವರ ಇದೆ. ಈ ಕ್ರಾಂತಿಯ ವಿಷಯ ಇಂಪಿರಿಯಲ್ ಗೆಜೆಟಿಯರ್‌ನ ಹದಿನೆಂಟನೇ ಸಂಪುಟದ ೧೭೯ ಪುಟದಲ್ಲಿ ಇದೆಯಂತೆ. ಈ ಅಂಶವನ್ನು ಖ್ಯಾತ ವಿಮರ್ಶಕ ಡಿ. ಆರ್. ನಾಗರಾಜ ಅವರು ಕೂಡ ಅಮೇರಿಕೆಯಲ್ಲಿ ಪ್ರಕಾಶನಗೊಂಡ ಅವರ ಪುಸ್ತಕದಲ್ಲಿ ಮರುದಾಖಲಿಸಿದ್ದಾರಂತೆ. ಅದರ ವಿವರ ಹೀಗಿದೆ : ರೈತರ ಮೇಲೆ ಅತಿಯಾದ ತೆರಿಗೆ ಹೇರಿದ್ದಕ್ಕೆ ಜಂಗಮರ ನಾಯಕತ್ವದಲ್ಲಿ ಈ ಹೋರಾಟ ನಡೆಯಿತು. ಆಗ ಮೈಸೂರಿನಲ್ಲಿ ಚಿಕ್ಕದೇವರಾಜ ಒಡೆಯರ್ (೧೬೭೩-೧೭೦೪) ಅವರ ಬಾಲ್ಯ ಸ್ನೇಹಿತ ಜೈನ ಕೋಮಿಗೆ ಸೇರಿದಾತ ದಿವಾನನಾಗಿದ್ದನು. ಈ ಕ್ರಾಂತಿಯ ಪರಿಣಾಮ ಎಂದರೆ ರೈತರ ಪರ ಹೋರಾಟಕ್ಕಿಳಿದ ಸುಮಾರು ನಾಲ್ಕು ನೂರು ಮಠಾಧೀಶರನ್ನು ನಂಜನಗೂಡಿನಲ್ಲಿ ಮೋಸದಿಂದ ಕೊಲ್ಲಲಾಯ್ತು. ಸಾವಿರಾರು ಲಿಂಗಾಯತ ಮಠಗಳನ್ನು ಗ್ರಾಮೀಣ ಪ್ರದೇಶದಲ್ಲಿ ಧ್ವಂಸಗೊಳಿಸಲಾಯಿತು. ಈ ಘಟನೆಯನ್ನು ಲೇಖಕರು ೧೨ನೇ ಶತಮಾನದ ಕ್ರಾಂತಿಗೆ ಹೋಲಿಸಿ ಹಲವು ಹೋಲಿಕೆಗಳನ್ನು ಗುರುತಿಸಿದ್ದಾರೆ. ವಿಚಿತ್ರವೆಂದರೆ, ಕರ್ನಾಟಕದ ಗೆಜೆಟಿಯರ್ ಬರೆದ ಸೂರ್ಯನಾಥ ಕಾಮತರು ಚಿಕ್ಕದೇವರಾಜರು ಜಂಗಮ ಕ್ರಾಂತಿಯನ್ನು ಯಶಸ್ವಿಯಾಗಿ ಎದುರಿಸಿದರು ಎಂದು ದಾಖಲಿಸಿರುವುದು ದುರಂತವೇ ಸರಿ. ನಂಜುಂಡಪ್ಪ ವರದಿ ಸಲ್ಲಿಸಿ ಐದು ವರ್ಷವಾಗಿದ್ದರೂ ಸರಕಾರ ಗಮನಹರಿಸಿರಲಿಲ್ಲ. ಜೆಡಿಎಸ್ ಹಾಗೂ ಬಿಜೆಪಿ ಪಕ್ಷಗಳ ಸಂಯುಕ್ತ ಸರಕಾರವಿದ್ದಾಗ ರಾಜಕೀಯ ಅಸ್ತ್ರವಾಗಿ ಈ ವರದಿಯನ್ನು ಸರಕಾರ ಬಳಸಿತು. ಉತ್ತರ ಕರ್ನಾಟಕದಲ್ಲಿ ಬಿಜೆಪಿ ಶಾಸಕರು ಬಹುಸಂಖ್ಯೆಯಲ್ಲಿದ್ದರು. ಜೆಡಿಎಸ್ ಹಳೆ ಮೈಸೂರಿನ ಜಿಲ್ಲೆಗಳಿಗೆ ಸೀಮಿತವಾಗಿತ್ತು. ಜೆಡಿಎಸ್ ಉತ್ತರ ಕರ್ನಾಟಕದಲ್ಲಿ ಬೇರು ಬಿಡಲು ಈ ವರದಿಯನ್ನು ಬಳಸಿಕೊಂಡಿತು. ಆದರೆ ಶಶಿಲ ನಮೋಶಿ ಮಧ್ಯಂತರ ವರದಿ ಪ್ರಕಾರ ನಂಜುಂಡಪ್ಪ ವರದಿ 'ಶೂನ್ಯ' ಫಲಿತಾಂಶ ನೀಡಿದೆ.

ಇದಕ್ಕೆ ಮುಖ್ಯ ಕಾರಣವೆಂದರೆ 'ಅಭಿವೃದ್ಧಿ' ಪರಿಕಲ್ಪನೆ ಸಂಕೀರ್ಣವಾದುದು. ಇದಕ್ಕೆ ಅಂತರ್ ಶಿಸ್ತೀಯ ಮಾರ್ಗ ಅನುಸರಿಸಬೇಕು. ಶಾಸಕರು ಈ ವರದಿಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಲಿಲ್ಲ. ಹಣ ಒದಗಿಸಿದ ಮಾತ್ರಕ್ಕೆ ಅಭಿವೃದ್ಧಿ ಆಗುವುದಿಲ್ಲ. ಉತ್ತರ ಕರ್ನಾಟಕ ಮೌಢ್ಯ, ಅಜ್ಞಾನ, ನಿರಕ್ಷರತೆ, ಪ್ರಾದೇಶಿಕತೆ, ಜಾತಿ, ಹಣೆಬರಹ, ಕರ್ಮ ಮುಂತಾದವುಗಳಿಂದ ಪ್ರಭಾವಿತವಾಗಿದೆ. ಜೊತೆಗೆ, ನಂಜುಂಡಪ್ಪನವರು ರಾಜಕೀಯ ಮುತ್ಸದ್ದಿಯಾಗಿದ್ದರೆಂದು ಲೇಖಕರು ಆಪಾದಿಸಿದ್ದಾರೆ. ಆಡಳಿತದಲ್ಲಿನ ಶಿಥಿಲತೆಯಿಂದಾಗಿ ಹಾಗೂ ಶಾಸಕರು ತಮಗೆ ಬೇಕಾದ ಅಧಿಕಾರಿಯನ್ನು ತಮ್ಮ ಕ್ಷೇತ್ರಕ್ಕೆ ಪಡೆದಿದ್ದರಿಂದ ಭ್ರಷ್ಟಾಚಾರ, ಲಂಚಗುಳಿತನ ಸ್ವಜನ ಪಕ್ಷಪಾತ ತಲೆದೋರಿತು.

ಧಾರ್ ಸಮಿತಿ, ಸಂವಿಧಾನ ರಚನಾ ಸಮಿತಿ ಇವು ಭಾಷಾವಾರು ಪ್ರಾಂತ ರಚನೆಯನ್ನು ಬೆಂಬಲಿಸದಿದ್ದರೂ ಆಂಧ್ರದಲ್ಲಿ ಜರುಗಿದ ದುರಂತ ಘಟನಾವಳಿ ಭಾಷಾವಾರು ಪ್ರಾಂತ ರಚನೆಗೆ ಕಾರಣವಾಯ್ತು. ಈಗ ಭಾಷಾ ಕೇಂದ್ರಿತ ಒಗ್ಗಟ್ಟು ತನ್ನ ಶಕ್ತಿ ಉಳಿಸಿಕೊಂಡಿಲ್ಲ. ಭಾಷೆಯ ಆಧಾರದ ಮೇಲೆ ರಚನೆಯಾದ ಆಂಧ್ರದಿಂದ ತೆಲಂಗಾಣ ಹುಟ್ಟಿತು. ಮಧ್ಯಪ್ರದೇಶದಲ್ಲಿ ಛತ್ತೀಸಘಡ ಹುಟ್ಟಿತು. ಹರಿಯಾಣದಿಂದ ಹಿಮಾಚಲ ಪ್ರದೇಶ ಭಿನ್ನವಾಯ್ತು. ಜಾರ್ಖಂಡ್ ಬಿಹಾರದಿಂದ ಜಾರಿಹೋಗಿದೆ. ಮಹಾರಾಷ್ಟ್ರದಲ್ಲಿ ವಿದರ್ಭಾ ಚಳುವಳಿ ಇದೆ. ಉತ್ತರ ಕರ್ನಾಟಕ ಬೇರೆ ರಾಜ್ಯವಾಗಬೇಕೆಂಬ ಕೂಗು ಆಗಾಗ ಕೇಳಿಬರುತ್ತದೆ. ಮೈಸೂರಿಗರಿಗೆ ಉತ್ತರ ಕರ್ನಾಟಕದವರು ವೈರಿಗಳಲ್ಲ, ಆದರೆ ದಾಯಾದಿಗಳು. ಹಿರಿಯರು ಕಟ್ಟಿದ ಕನ್ನಡದ ಮನಸ್ಸುಗಳನ್ನು ಒಡೆಯುವದು ಬೇಕಿಲ್ಲ. ಬೆಂಗಳೂರು ಎಂಬ ಶಕ್ತಿಕೇಂದ್ರ ಮೈಸೂರಿಗರಿಗೆ ಸಮೀಪ ಇದೆ. ಸಮಗ್ರ ಅಭಿವೃದ್ಧಿಯ ಕನಸು ಆಡಳಿತ ವರ್ಗಕ್ಕಿರಬೇಕು. ಉತ್ತರ ಕರ್ನಾಟಕದ ರಾಜಕಾರಣಿಗಳ ಇಚ್ಛಾಶಕ್ತಿಯ ಕೊರತೆಯೂ ಆ ಭಾಗದ ಹಿಂದುಳಿಯುವಿಕೆಗೆ ಕಾರಣ ಎಂದು ಲೇಖಕರು ಗುರ್ತಿಸಿದ್ದಾರೆ. ಬೀದರ್, ವಿಜಯಪುರ, ಧಾರವಾಡಗಳಿಂದ ರಾಜಧಾನಿಗೆ ಬರುವದರೊಳಗೆ ವ್ಯಕ್ತಿ ಹೈರಾಣಾಗಿರುತ್ತಾನೆ. ಕಾವೇರಿ ಕೃಷ್ಣೆಯರ ನೀರಿಗಾಗಿ ಪರಸ್ಪರ ಸಹಕಾರ ಇಲ್ಲ. ಬಹುಶಃ ಅಸಮತೋಲನ ಆಧಾರಿತ ಹಣ ಹಂಚಿಕೆಯೇ ಇದಕ್ಕೆ ಕಾರಣ. 'ಮುಗಿಸುವ ಮುನ್ನ' ಎಂಬ ಅಧ್ಯಾಯದಲ್ಲಿ ಉತ್ತರ ಕರ್ನಾಟಕದ ಅಭಿವೃದ್ಧಿಗಾಗಿ ಕೈಗೊಳ್ಳಬಹುದಾದ ಎಲ್ಲ ಯೋಜನೆಗಳ ನೀಲನಕ್ಷೆ ಒದಗಿಸಿದ್ದಾರೆ.

ಕೊನೆಯದಾಗಿ, ಈ ಪುಸ್ತಕದ ನ್ಯೂನತೆಯ ಬಗ್ಗೆ ಕೆಲವು ಮಾತುಗಳನ್ನು ಹೇಳಲೇಬೇಕು. ಉತ್ತರ ಕರ್ನಾಟಕದ ಪ್ರತಿಷ್ಠಿತ ಮನೋಹರ ಗ್ರಂಥಮಾಲಾ ಕೇವಲ ಕತೆ, ಕಾದಂಬರಿ, ಕಾವ್ಯ, ವಿಮರ್ಶೆಗಳಿಗೆ ಮೀಸಲಾದ ಗ್ರಂಥಗಳ ಪ್ರಕಾಶನವಾಗಿತ್ತು. ಈಗ ಅಪರೂಪಕ್ಕೆ ಇಂತಹ ಪುಸ್ತಕವನ್ನು ಪ್ರಕಟಿಸಿದೆ. ಜಾಮದಾರ ಅವರು ಈ ಪುಸ್ತಕದ ಲೇಖಕರು. ಆದರೆ ಅವರನ್ನು ಸಂಪಾದಕರೆಂದು ಹೆಸರಿಸಲಾಗಿದೆ. ಕರ್ನಾಟಕದ ಏಕೀಕರಣ ಇತಿಹಾಸವನ್ನು ಹೇಳುವಾಗ ಲೇಖಕರು ತೀವ್ರವಾದಿ ಸಂಘಟನೆಯಾಗಿದ್ದ ಅಖಂಡ ಕರ್ನಾಟಕ ನಿರ್ಮಾಣ ಪರಿಷತ್ತಿನ ಸ್ಥಾಪನೆ ಮತ್ತು ಹೋರಾಟ ಹಾಗೂ ಏಕೀಕರಣ ಹೋರಾಟಕ್ಕೆ ಮಹತ್ವದ ತಿರುವು ಕೊಟ್ಟ ಹುಬ್ಬಳ್ಳಿಯ ಅದರಗುಂಚಿ ಶಂಕರಗೌಡರ ಉಪವಾಸ ಸತ್ಯಾಗ್ರಹ ಸಂದರ್ಭದಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಉಗ್ರ ಹೋರಾಟಗಳನ್ನು ಪ್ರಸ್ತಾಪಿಸಬೇಕಿತ್ತು. ಈ ಪುಸ್ತಕದ ಹೆಗ್ಗಳಿಕೆ ಎಂದರೆ ಪ್ರತಿ ಅಧ್ಯಾಯದ ಕೊನೆಗೆ ಸಮಸ್ಯೆಗೆ ಪರಿಹಾರಗಳನ್ನು ಸೂಚಿಸಲಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಹಿಂದುಳಿದ ಸಮುದಾಯಗಳ ಹೆಸರು ಹಾಗೂ ಅವುಗಳಿಂದ ಕರ್ನಾಟಕದಲ್ಲಿ ಉಂಟಾದ ಗೊಂದಲದ ಬಗ್ಗೆ ವಿವರಿಸಬಹುದಾಗಿತ್ತು.

**ಮಹೇಶ ತಿಪ್ಪಶೆಟ್ಟಿ**
ಮಹಾಂತನಗರ, ಹುನಗುಂದ – ೫೮೭ ೧೧೮

‘ಹಿಂದೂ’ ಕಾದಂಬರಿಯ ನಾಯಕ ಖಂಡೇರಾವ್. ಈತ ಈ ಆಧುನಿಕ ಕಾಲದಲ್ಲಿ ಅವನತಿಯ ಪಥದಲ್ಲಿ ಸಾಗುತ್ತಿರುವ ಕೃಷಿ ಸಮಾಜದ ವಾರಸುದಾರ. ಜೊತೆಗೆ ಪುರಾತತ್ವಜ್ಞನೂ ಹೌದು. ಕಾದಂಬರಿಯ ಮೊದಲ ಅಧ್ಯಾಯದಲ್ಲಿ ಯುನೆಸ್ಕೋ ಉತ್ಖನನ ಯೋಜನೆಯೊಂದರಲ್ಲಿ ಸಹಭಾಗಿಯಾಗಿ ಮೊಹೆಂಜೊದಾರೋನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಂಡೇರಾವ್ ಒಂದು ಕನಸನ್ನು ಕಾಣುತ್ತಾನೆ. ಆ ಕನಸಿನಲ್ಲಿ ಅವನು ಜಾಗತಿಕ ಮಟ್ಟದ ಪುರಾತತ್ವ ವಿದ್ವಾಂಸರ ಮುಂದೆ ತಾನು ಶ್ರಮವಹಿಸಿ ತಯಾರಿಸಿದ ಸಪ್ತಸಿಂಧೂ ಪ್ರದೇಶದ ನಕಾಶೆ, ನೂರಾರು ಮಹಾನಗರಗಳ ನಾಶದ ಸ್ಲೈಡ್ಸ್ ಮತ್ತು ಮೊಹರುಗಳಲ್ಲಿರುವ ಲಿಪಿಯ ಓದಿನ ಮೂಲಕ ಸಿಂಧೂ ಸಂಸ್ಕೃತಿಯ ಲಯ ಹಾಗೂ ಭಾಷಾ ಸಾರ್ವಭೌಮತ್ವದ ಪ್ರವೇಶವನ್ನು ತಿಳಸುವ ಪ್ರಯತ್ನದಲ್ಲಿ ನಿರತನಾಗುತ್ತಾನೆ.




# ಭಾಲಚಂದ್ರ ನೇಮಾಡೆಯವರ ‘ಹಿಂದೂ’ ಕಾದಂಬರಿ

**ಭಾ**ರತೀಯ ಕಥನ ಸಾಹಿತ್ಯದಲ್ಲಿ ಮಹಾ ಕಾದಂಬರಿಗಳನ್ನು ರಚಿಸುವ ಪರಂಪರೆ ತೆರೆಯ ಮರೆಗೆ ಸರಿದಿರುವ ಈ ಕಾಲಘಟ್ಟದಲ್ಲಿ ಸುಪ್ರಸಿದ್ಧ ಮರಾಠಿ ಲೇಖಕ ಡಾ॥ ಭಾಲಚಂದ್ರ ನೇಮಾಡೆಯವರು ೨೦೧೧ರಲ್ಲಿ ಬೆಳಕಿಗೆ ತಂದಿರುವ ‘ಹಿಂದೂ’ ಬೃಹತ್ ಕಾದಂಬರಿಯು ಅನೇಕ ನೆಲೆಗಳಿಂದ ಗಮನ ಸೆಳೆಯುವ ಕೃತಿಯಾಗಿದೆ.

ಸುಮಾರು ಐದು ಸಾವಿರ ವರ್ಷಗಳಷ್ಟು ಸುದೀರ್ಘ ಕಾಲ ಮುಂದುವರಿದು ಬಂದಿದೆ ಎನ್ನಲಾಗುವ ಸಂಸ್ಕೃತಿಯೊಂದರ ನಡೆಯಲ್ಲಿ ೫೦೦ ವರ್ಷಗಳ ಕಾಲಮಾನವನ್ನು ಆಯ್ಕೆ ಮಾಡಿಕೊಂಡು, ಗ್ರಾಮೀಣ ಪರಿಸರವೊಂದರಲ್ಲಿ ನಿರ್ದಿಷ್ಟ ಕುಟುಂಬವೊಂದರ ಏಳು ತಲೆಮಾರುಗಳ ಜೀವನಗತಿಯನ್ನು ದಾಖಲಿಸಲು ಮೂವತ್ತು ವರ್ಷಗಳ ಕಾಲ ಪರಿಶ್ರಮಪಟ್ಟು ಸುಮಾರು ೬೦೦ ಪುಟಗಳಲ್ಲಿ ಅಡಕಗೊಳಿಸಿದ ಕಥಾನಕವೇ ‘ಹಿಂದೂ’. ಈ ಕಾದಂಬರಿ ಈಗ ಚಂದ್ರಕಾಂತ ಪೋಕಳೆ ಅವರಿಂದ ಅನುವಾದಗೊಂಡು ಕನ್ನಡದಲ್ಲಿಯೂ ಲಭ್ಯವಿದೆ.

‘ಹಿಂದೂ’ ತುಂಬ ಅರ್ಥಗರ್ಭಿತವಾದ ಪದ. ಈ ಪದವು ಯಾವ್ಯಾವ ಸಂದರ್ಭಗಳಲ್ಲಿ ಯಾವ್ಯಾವ ಪ್ರಸಂಗಗಳಿಗೆ ಅನ್ವಯಗೊಳ್ಳುತ್ತದೆ ಎಂಬುದನ್ನು ನಾವೆಲ್ಲರೂ ಬಲ್ಲೆವು. ಆದರೆ ಇಲ್ಲಿ ನೇಮಾಡೆಯವರ ಕಾದಂಬರಿಯ ಶೀರ್ಷಿಕೆ ‘ಹಿಂದೂ’ ಸೂಚಿಸುತ್ತಿರುವುದು ‘ಬದುಕಿನ ಸಮೃದ್ಧ ಅಡಕಲು’ವನ್ನು. ಏನಿದು ಅಡಕಲು ? ಅದು ಒಂದು ವ್ಯವಸ್ಥೆ ಅಥವಾ ಒಂದರ ಮೇಲೆ ಒಂದರಂತೆ ಪೇರಿಸಿ ಇಟ್ಟಿರುವಂತಹ ರಚನೆ. ಇಲ್ಲಿಯ ಅಡಕಲುವಿನಲ್ಲಿ ಇರುವುದು ಸಾವಿರಾರು ವರ್ಷಗಳಿಂದ ಮುಂದುವರಿದುಕೊಂಡು ಬಂದಿರುವ ಜನಸಮುದಾಯವೊಂದರ ಪರಂಪರೆ. ಈ ಪರಂಪರೆಯಲ್ಲಿ ಅವರ ಸಾಮಾಜಿಕ ಸಂರಚನೆ, ಅವರ ಬದುಕಿನ ವಿಧಾನ, ಅವರು ಅನುಸರಿಸಿಕೊಂಡು ಬಂದಿರುವ ರೂಢಿ, ಸಂಪ್ರದಾಯಗಳು, ಅವರಲ್ಲಿ ಮೂಡಿಬಂದಿರಬಹುದಾದ ತಾತ್ವಿಕ ವಿಚಾರಧಾರೆಗಳು ಇತ್ಯಾದಿ, ಅಂದರೆ ಸಂಸ್ಕೃತಿಜನ್ಯ ಅಂಶಗಳು ಈ ಪರಂಪರೆಯಲ್ಲಿ ಸಮಾವೇಶಗೊಂಡಿವೆ.

‘ಹಿಂದೂ’ ಕಾದಂಬರಿಯ ನಾಯಕ ಖಂಡೇರಾವ್. ಈತ ಈ ಆಧುನಿಕ ಕಾಲದಲ್ಲಿ ಅವನತಿಯ ಪಥದಲ್ಲಿ ಸಾಗುತ್ತಿರುವ ಕೃಷಿ ಸಮಾಜದ ವಾರಸುದಾರ. ಜೊತೆಗೆ ಪುರಾತತ್ವಜ್ಞನೂ ಹೌದು. ಕಾದಂಬರಿಯ ಮೊದಲ ಅಧ್ಯಾಯದಲ್ಲಿ ಯುನೆಸ್ಕೋ ಉತ್ಖನನ ಯೋಜನೆಯೊಂದರಲ್ಲಿ ಸಹಭಾಗಿಯಾಗಿ ಮೊಹೆಂಜೊದಾರೋನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಂಡೇರಾವ್ ಒಂದು ಕನಸನ್ನು ಕಾಣುತ್ತಾನೆ. ಆ ಕನಸಿನಲ್ಲಿ ಅವನು ಜಾಗತಿಕ ಮಟ್ಟದ ಪುರಾತತ್ವ ವಿದ್ವಾಂಸರ ಮುಂದೆ ತಾನು ಶ್ರಮವಹಿಸಿ ತಯಾರಿಸಿದ ಸಪ್ತಸಿಂಧೂ ಪ್ರದೇಶದ ನಕಾಶೆ, ನೂರಾರು ಮಹಾನಗರಗಳ ನಾಶದ ಸ್ಲೈಡ್ಸ್ ಮತ್ತು ಮೊಹರುಗಳಲ್ಲಿರುವ ಲಿಪಿಯ ಓದಿನ ಮೂಲಕ ಸಿಂಧೂ ಸಂಸ್ಕೃತಿಯ ಲಯ ಹಾಗೂ ಭಾಷಾ ಸಾರ್ವಭೌಮತ್ವದ ಪ್ರವೇಶವನ್ನು ತಿಳಿಸುವ ಪ್ರಯತ್ನದಲ್ಲಿ ನಿರತನಾಗುತ್ತಾನೆ. ಅವನ ವಿಚಾರ ಮಂಡನೆಗೆ ಬಂದ ಪ್ರತಿಕ್ರಿಯೆಗಳಲ್ಲಿ ಆರ್ಯರ ಉಗಮ, ಅವರ ವಲಸೆ, ಅವರ ನೆಲೆ, ವೇದಗಳ ನಿರ್ಮಾಣ ಪುರುಷರು, ಅವರ ಸಂಸ್ಕೃತಿ ವಿಚಾರಗಳು ಎಲ್ಲವೂ ವಿಸ್ತೃತ ಚರ್ಚೆಗೆ ಒಳಪಡುತ್ತವೆ. ಆದರೆ ಸಿಂಧೂ ಸಂಸ್ಕೃತಿಯನ್ನು ತಮ್ಮದೆಂದು ಸಾಧಿಸುವ ದಿಶೆಯಲ್ಲಿ ಭಾರತದ ವಿದ್ವಾಂಸರು ಶ್ರೀಮಂತ ರಾಷ್ಟ್ರಗಳ ಪ್ರತಿನಿಧಿಗಳ ಮುಂದೆ ವಿಫಲರಾಗುತ್ತಾರೆ. ಆದರೂ ಖಂಡೇರಾವ್‌ಗೆ ವಿದೇಶಿ ಮಹಿಳೆ ಡಾ॥ ಮಂಡಿಯಂತಹವರ ಬೆಂಬಲ ಸ್ವಲ್ಪಮಟ್ಟಿಗೆ ದೊರೆಯುತ್ತದೆ.

ಕಾದಂಬರಿಕಾರರು ಮರಾಠ ಸಂಸ್ಕೃತಿಯ ಪರಿವರ್ತನೆಯ ನಿರ್ಣಾಯಕ ಘಟ್ಟವೊಂದನ್ನು ಎರಡು ಊರುಗಳ ಉದಾಹರಣೆಯೊಂದಿಗೆ ವಿವರಿಸುತ್ತಾರೆ. ಅದರಲ್ಲಿ ಒಂದು ಊರು ಹರಿಪುರ. ಹರಿಪುರ “ದುಡಿ–ತಿನ್ನು–ಸುಖಪಡು” ಎಂಬ ಪರಿಕಲ್ಪನೆಯಲ್ಲಿ ಬದುಕುತ್ತಿದ್ದ ಲಭಾಣೆಗಳ ಊರು. ಅವರದು ಮುಕ್ತಜೀವನ–ಮುಕ್ತಕಾಮ. ಇವರನ್ನು ನೇಮಾಡೆ “ಇಹವಾದಿ”ಗಳೆಂದು ಕರೆಯುವುದು ವಿಶೇಷ. ಈ ಹರಿಪುರದ ಮೇಲೆ ಒಂದು ರಾತ್ರಿ ಯಾವುದೇ ಮುನ್ಸೂಚನೆಯಿಲ್ಲದೆ ಪೆಂಢಾರಿಗಳಿಂದ ಆಕ್ರಮಣ ನಡೆಯುತ್ತದೆ. ಆ ಊರಿನ ಪ್ರತಿಯೊಬ್ಬರನ್ನೂ ಕೊಲ್ಲಲಾಗುತ್ತದೆ. ಅವರ ಬೆಲೆ ಬಾಳುವ ಸೊತ್ತುಗಳನ್ನೆಲ್ಲ ಲೂಟಿ ಮಾಡಲಾಗುತ್ತದೆ. ಅವರು ಸಂಗ್ರಹಿಸಿದ ದವಸ ಧಾನ್ಯಗಳಿಗೆ ಬೆಂಕಿ ಹಚ್ಚಲಾಗುತ್ತದೆ. ಲವಲವಿಕೆಯಿಂದ ಇದ್ದಂತಹ ಊರು ಕೆಲವೇ ಕ್ಷಣಗಳಲ್ಲಿ ದಾರುಣ ಮೌನ ತುಂಬಿದ ಸ್ಮಶಾನವಾಗಿಬಿಡುತ್ತದೆ. ಅದರ ನೆರೆಯಲ್ಲಿಯೇ ಜಾತಿವಾದಿ ಸಮಾಜ ರಚನೆಯೊಂದು ಮೋರಗಾಂವ ಹೆಸರಿನ ಹಳ್ಳಿಯ

**ಡಾ॥ ಗೀತಾ ಶೆಣೈ**




ರೂಪದಲ್ಲಿ ತಲೆ ಎತ್ತುತ್ತದೆ. ಸಂಧಿಕಾಲದಲ್ಲಿ ತಮ್ಮದನ್ನು ತಾವು ಹೇಗೆ ಸಂರಕ್ಷಿಸಿಕೊಳ್ಳಬೇಕು ಎಂಬ ಭಯಂಕರ ವ್ಯವಸ್ಥೆ ತನ್ನಿಂದ ತಾನೇ ರೂಪುಗೊಳ್ಳುತ್ತಾ ಹೋಗುತ್ತದೆ, ಅನಂತರದ ಕಾಲದಲ್ಲಿ ಅದನ್ನು ಬದಲಾಯಿಸುವುದು ಸಾಧ್ಯವಿಲ್ಲ ಎಂಬ ರೀತಿಯಲ್ಲಿ ಇಡೀ ಮೋರಗಾಂವಿನ ಸಂರಕ್ಷಣೆಗೆ ಪ್ರಾಕೃತಿಕ ಸಂಪನ್ಮೂಲಗಳ ಹಾಗೂ ವೃತ್ತಿ ಆಧಾರಿತ, ಜಾತಿ ಆಧಾರಿತ ಸಮುದಾಯಗಳು ಹೇಗೆ ಕಾರ್ಯನಿರತವಾಗಿದ್ದವು ಎಂಬುದನ್ನು ಇಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ. ಕಾಲಾನುಕ್ರಮದಲ್ಲಿ ಮೋರಗಾಂವಿನ ಒಕ್ಕಲುತನದ ವ್ಯವಸ್ಥೆಯಲ್ಲಿ ಬಿರುಕು ಬಿಡುತ್ತದೆ. ಕೃಷಿ ಸಮಾಜದ ಅವನತಿ ಪ್ರಾರಂಭಗೊಳ್ಳುತ್ತದೆ. ಜೊತೆಗೆ, ಹೊರಗಿನವರಿಂದ ಊರನ್ನು, ಊರಿನ ನೈಸರ್ಗಿಕ ಸಂಪತ್ತನ್ನು ಕೊಳ್ಳೆ ಹೊಡೆಯುವ ಪ್ರಕ್ರಿಯೆ ಶುರುವಾಗುತ್ತದೆ.

ಮೋರಗಾಂವಿನ ಒಕ್ಕಲುತನದ ಏಳುಬೀಳುಗಳನ್ನು ಚಿತ್ರಿಸುವಾಗ ಕಾದಂಬರಿಕಾರ ಕೃಷಿ ಸಂಸ್ಕೃತಿಯನ್ನು ವೈಭವೀಕರಿಸದೆ ಅದರ ಕರಾಳ ಮುಖವನ್ನೂ ಅನಾವರಣಗೊಳಿಸಿರುವುದು ಗಮನ ಸೆಳೆಯುತ್ತದೆ. ಕ್ರಮೇಣ ಊರಿನ ವಿವಿಧ ಜನಸಮುದಾಯಗಳು ತಮ್ಮ ಮೂಲವೃತ್ತಿಯನ್ನು ತೊರೆದು ನಗರದತ್ತ ಮುಖ ಮಾಡಿದುದು ಸ್ವಾರ್ಥಪರವಾಗಿ ಪರಿಣಮಿಸಿ ಒಟ್ಟು ಸಮಾಜದ ಪರಿಕಲ್ಪನೆ ಛಿದ್ರಗೊಂಡು ಮೇಲುಕೀಳಿನ ಸಮಾಜಕ್ಕೆ ಅಡಿಪಾಯವಾಗಿ ರೂಪುಗೊಳ್ಳುವುದನ್ನು ಬಹಳ ಕಳಕಳಿಯಿಂದ ಇಲ್ಲಿ ಚಿತ್ರಿಸಲಾಗಿದೆ. ಅಸ್ಪೃಶ್ಯ ಜಾತಿ ರೂಪುಗೊಳ್ಳುವುದರಲ್ಲಿ ಬರಗಾಲದ ಬವಣೆ ನಿರ್ವಹಿಸಿದ ಪಾತ್ರದ ಕುರಿತಾದ ಜಿಜ್ಞಾಸೆ ಹಾಗೂ ಗ್ರಾಮದ ಉಸ್ತುವಾರಿ ಕೆಲಸವನ್ನು ಬಿಟ್ಟು ಹಿಂದೂ ಧರ್ಮವನ್ನು ತೊರೆದು ಹೋದ ಮಹಾರರಿಂದ ಸಾವಿರ ವರ್ಷ ಉಸಿರುಗಟ್ಟಿಕೊಂಡಿದ್ದ ಗ್ರಾಮ ವ್ಯವಸ್ಥೆ ಮುಕ್ತವಾಯಿತು ಎಂಬ ಹೇಳಿಕೆ ಹೊಸತನವನ್ನು ಹೊಂದಿದೆ.

ಇಡೀ ಕಾದಂಬರಿಯಲ್ಲಿ ಮೋರಗಾಂವಿನ ಮುಖಂಡ ಸ್ಥಾನದಲ್ಲಿರುವ ಮತ್ತು ಆ ಊರಿನ ಜನರ ಪ್ರಗತಿಗೆ ಕಾರಣರಾದ ಖಂಡೇರಾವ್‌ನ ತಂದೆಯವರನ್ನು ಹೊರತುಪಡಿಸಿದರೆ, ಇಲ್ಲಿ ವಿಜೃಂಭಿಸುವವರೆಲ್ಲರೂ ಸಾಮಾನ್ಯ ಜನರೇ. ಹಟ್ಟಿಯಲ್ಲಿ ಸೆಗಣಿ ಬಾಚುವವರಿಂದ ಹಿಡಿದು ಗಾಡಿ ಓಡಿಸುವವರವರೆಗೆ ಪ್ರತಿಯೊಬ್ಬರಲ್ಲಿಯೂ ವೃತ್ತಿನಿಷ್ಠೆ, ಆತ್ಮಾಭಿಮಾನವನ್ನು ಕಾಣಿಸಲಾಗಿದೆ. ಕೃಷಿ ಸಂಸ್ಕೃತಿಯ ಉನ್ನತಿಯಲ್ಲಿ ಹೆಣ್ಣಿನ ನಿರ್ಣಾಯಕ ಪಾತ್ರವನ್ನು ಒಪ್ಪಿಕೊಳ್ಳುವ ಕಾದಂಬರಿಕಾರರು ಅಜ್ಜಿಯಂದಿರನ್ನು (ಹಿರಿಯ ತಲೆಮಾರಿನ ಹೆಂಗಸರನ್ನು) "ಮನೆಯ ವಿಶ್ವಕೋಶ"ವೆಂದು ಬಣ್ಣಿಸುತ್ತಾ, ಅವರನ್ನು ಅದಮ್ಯ ಆದಿಮತೆಯ ಸಂಕೇತವಾಗಿ ಪರಿಗಣಿಸಿದ್ದಾರೆ. ಕುಟುಂಬ ಮತ್ತು ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನ ಕುಸಿದಿರುವುದು ಮತ್ತು ಕೃಷಿ ಸಂಸ್ಕೃತಿ ಅವನತಿಯ ದಾರಿಯಲ್ಲಿ ಸಾಗಿರುವುದು ಇಲ್ಲಿ ಒಟ್ಟೊಟ್ಟಿಗೆ ಸಂಭವಿಸುತ್ತವೆ. ಆಧುನಿಕ ಆವಿಷ್ಕಾರಗಳು ಕೈಗೆ ಎಟುಕದ ಗ್ರಾಮೀಣ ಪರಿಸರದಲ್ಲಿ ಕುಟುಂಬ ಯೋಜನೆಯನ್ನು ಅನುಸರಿಸುವ, ಮಕ್ಕಳನ್ನು ಹೆರುವ, ಅವರ ಸಂಗೋಪನೆಯನ್ನು ನಡೆಸುವ ಗಂಭೀರ ಸನ್ನಿವೇಶಗಳಲ್ಲಿ ರೂಢಿಗತ ನಾಟಿ ವೈದ್ಯಕೀಯ ಪದ್ಧತಿಗಳ ಅನುಸರಣೆ ಮಾರಕವಾಗಿ ಸಂಭವಿಸಿ ನೀಳು ಕಾಕನ ತಂಗಿ ಸುಮೀಯಂತಹ ಎಳೆ ಹೆಣ್ಣುಮಕ್ಕಳ ಬದುಕು ಕೊನೆಗೊಂಡ ಅನೇಕ ದಾರುಣ ಘಟನೆಗಳು ಇಲ್ಲಿ ನಡೆಯುತ್ತವೆ. ಗಂಡನ ಆಸರೆ ಕಳೆದುಕೊಂಡ ಸಂದರ್ಭದಲ್ಲಿ ಹೆರವರ ಹಂಗಿನಲ್ಲಿ ಬದುಕು ಸಾಗಿಸುವ ಅನಿವಾರ್ಯತೆಯಲ್ಲಿ ತಮ್ಮ ಹಕ್ಕಿನ ಕುರಿತು ತಿಳುವಳಿಕೆಯಿಲ್ಲದೆ ಹಗಲಿರುಳು ದುಡಿದು ಕಾಲ ಕಳೆಯುವ ಖಂಡೇರಾವ್‌ನ ಅತ್ತಿಗೆ ಸೋನಾ ವೈನಿಯಂತಹ ಗೃಹಿಣಿಯರು ಮರುಕಕ್ಕೆ ಪಾತ್ರರಾಗುತ್ತಾರೆ. ಆದರೆ ಕ್ರಮೇಣ ಹೆಣ್ಣಿನಲ್ಲಿ ಸ್ವಪ್ರಜ್ಞೆ ಮತ್ತು ಶಿಕ್ಷಣದ ಆಸ್ಥೆಮೂಡಿ ಅವರ ಬಿಡುಗಡೆಗೆ, ಸ್ವತಂತ್ರ ಬದುಕಿಗೆ ಕಾರಣವಾಗುವುದನ್ನೂ ಇಲ್ಲಿ ಕಾಣಿಸಲಾಗಿದೆ. ಗಣಿಕಾ ಸ್ತ್ರೀ ಝುಂಡಿ ತನ್ನ ಆಂತರಿಕ ಅರಿವಿನ ಮೋಡಿಯಲ್ಲಿ ತಾನು ಇದುವರೆಗೆ ನಡೆಸಿಕೊಂಡು ಬಂದಂತಹ ಬದುಕಿನ ಕುರಿತು ಹೇಸಿ ತನ್ನ ಮಗಳನ್ನು ಮಾನವಂತಳಾಗಿ ಬೆಳೆಸುವ ನಿರ್ಧಾರ ಕೈಗೊಳ್ಳುತ್ತಾಳೆ. ಅದೇ ರೀತಿ ಮೋರಗಾಂವಿನ ಹೆಣ್ಣುಮಗಳು ಉನ್ನತ ಶಿಕ್ಷಣ ಪಡೆದು ವಿಶ್ವವಿದ್ಯಾಲಯದಲ್ಲಿ ನೌಕರಿಗೆ ಸೇರುತ್ತಾಳೆ. ಒಕ್ಕಲುತನದ ಕೃಷಿ ಸಂಸ್ಕೃತಿಯನ್ನು ಕೇಂದ್ರವಾಗಿಸಿ ಹಿಂದೂ ಸಂಸ್ಕೃತಿಯ ಚರ್ಚೆಯನ್ನು ಕೈಗೆತ್ತಿಕೊಂಡಿರುವ ಕಾದಂಬರಿ ಕಾಲಾನುಕ್ರಮದಲ್ಲಿ ಗ್ರಾಮೀಣ ಕೃಷಿ ಸಂಸ್ಕೃತಿ ಸಾಗುತ್ತಾ ಬಂದಂತಹ ದಾರಿಗೆ ಕನ್ನಡಿ ಹಿಡಿಯುತ್ತದೆ.

ನಗರ ಪ್ರದೇಶದ ಕೊಳ್ಳುಬಾಕ ಸಂಸ್ಕೃತಿಯ ಬಿಗಿಹಿಡಿತದಲ್ಲಿ ಮನುಷ್ಯನ ಜನ್ಮಜಾತ ಸಂಸ್ಕಾರ ಮತ್ತು ಅವನ ಬೌದ್ಧಿಕತೆಯು ತುಳಿಯಲ್ಪಟ್ಟು, ಅದು ಹೇಗೆ ಅವನನ್ನು ವಿಚಾರಶೂನ್ಯನನ್ನಾಗಿ ಸ್ವಾರ್ಥಪರವಾಗಿ ನಿಲ್ಲಿಸಿದೆ ಎನ್ನುವುದರ ಕುರಿತು ಮರಾಠಾ ವಿಶ್ವವಿದ್ಯಾಲಯದಲ್ಲಿ ಮತ್ತು ಅದರ ಆವರಣದಲ್ಲಿ ನಡೆಯುವ ವಿವಿಧ ಚಟುವಟಿಕೆಗಳು ಬೆಳಕು ಚೆಲ್ಲುತ್ತವೆ. ಶಿಕ್ಷಣ ಕ್ಷೇತ್ರದಲ್ಲಿ ನಡೆಯುವ ಭ್ರಷ್ಟಾಚಾರಗಳನ್ನು, ಬುದ್ಧಿಜೀವಿಗಳು ಎನಿಸಿಕೊಂಡವರ ಸಂಕುಚಿತ ನಡವಳಿಕೆಗಳನ್ನು ತರಾಟೆಗೆ ತೆಗೆದುಕೊಳ್ಳುವ ಧೈರ್ಯವನ್ನು ಕಾದಂಬರಿಕಾರರು ತೋರಿಸಿದ್ದಾರೆ.

"ನೇಮಾಡೆಯವರು ಬರವಣಿಗೆಯನ್ನು ಸಾಂಸ್ಕೃತಿಕ ಹೊಣೆಗಾರಿಕೆ ಎಂದು ಭಾವಿಸುವ ಲೇಖಕ" ಎಂದು ಶ್ರೀ ಚಂದ್ರಕಾಂತ ಪೋಕಳೆ ಹೇಳಿರುವುದು ಅತ್ಯಂತ ಸೂಕ್ತವಾಗಿದೆ. ಈ ಕಾದಂಬರಿಯಲ್ಲಿ ಕಾಣಿಸಿಕೊಂಡಿರುವ ಅನೇಕ ಭೌತಿಕ ಪರಿಸರಗಳು, ಹಲವು ಜೀವನ ವಿಧಾನಗಳು ಮತ್ತು ನೂರಾರು ಬಗೆಯ ಪಾತ್ರಗಳು ವೈವಿಧ್ಯಮಯ ಸಂಸ್ಕೃತಿಯ ಹೆಗ್ಗುರುತುಗಳಾಗಿವೆ. ಇವು ಓರ್ವ ಪ್ರಜ್ಞಾವಂತ ಬರಹಗಾರನ ಕಲ್ಪನೆಯಲ್ಲಿ ಮಾತ್ರ ಮೂಡಿಬರಬಹುದಾದ ವಾಸ್ತವ ಬದುಕಿನ ಪ್ರತಿಬಿಂಬಗಳು. ಇಲ್ಲಿ ಕಾದಂಬರಿಕಾರರಿಗೆ ವಸ್ತುಸ್ಥಿತಿಯನ್ನು ಅದರ ಎಲ್ಲಾ ಆಯಾಮಗಳೊಂದಿಗೆ ಅದು ಜೀವವಿರೋಧಿಯಾಗಿರಲಿ, ಜೀವಪರವಾಗಿರಲಿ ಅನಾವರಣಗೊಳಿಸುವ ಕರ್ತವ್ಯದೊಂದಿಗೆ ಮಾನವ ಸಮಾಜದ ಭವಿಷ್ಯದ ಕುರಿತು ಆಶಾವಾದವನ್ನು ವ್ಯಕ್ತಪಡಿಸುವ ಜವಾಬ್ದಾರಿಯೂ ಸೇರಿಕೊಂಡಿರುವುದು ಇತ್ಯಾತ್ಮಕ ಅಂಶವಾಗಿದೆ. ಕಾದಂಬರಿಯ ಕೇಂದ್ರಪಾತ್ರವಾಗಿರುವ ಖಂಡೇರಾವ್ ನಿತ್ಯಬದುಕಿನ ಗೋಳು, ರಗಳೆಗಳಿಂದ ಪಾರಾಗಲು ಬಯಸಿ ದೂರ ದೂರ ಸಾಗಿ ಪುರಾತತ್ವದ ತನ್ನ ಹುಡುಕಾಟದ ಫಲಿತಾಂಶವನ್ನು ಪ್ರಕಟಿಸುವ ಸಂದರ್ಭದಲ್ಲಿಯೇ ಅವನ ತಂದೆಯ ಅಂತ್ಯಕಾಲದ ಉಪಸ್ಥಿತಿಗಾಗಿ ತನ್ನ ಮೂಲಸ್ಥಾನಕ್ಕೆ ಮರಳಬೇಕಾದ ಅನಿವಾರ್ಯ ಪ್ರಸಂಗವನ್ನು ಊರಿನ, ಕುಟುಂಬದ ಹಾಗೂ ವಾರಕರಿ ಸಂಪ್ರದಾಯದ ವಾರಸುತನದ ಹೊಣೆಗಾರಿಕೆಯೊಂದಿಗೆ ಅವನ ಅಸ್ತಿತ್ವದ ದ್ಯೋತಕವಾಗಿಯೂ ಕಾಣಿಸಿರುವುದು ಕಾದಂಬರಿಯ ಯಶಸ್ಸಿಗೆ ಕಾರಣವಾಗಿದೆ.

ನೇಮಾಡೆಯವರ ವಿಷಯ ಸಂಗ್ರಹ ಬೆರಗು ಮೂಡಿಸುತ್ತದೆ. ಅವರಿಗೆ ಯಾವುದೇ ವಿಚಾರವಿರಲಿ ಅದರ ವಿಶ್ಲೇಷಣೆಯನ್ನು ತಳಸ್ಪರ್ಶಿಯಾಗಿ ಕಾಣಿಸಿದರೇ ತೃಪ್ತಿ. ಹೀಗಾಗಿ 'ಹಿಂದೂ' ಕಾದಂಬರಿಯಲ್ಲಿ ದಂತಕತೆಗಳು (ನಂಬಿಕೆ), ಹಾಡುಗಳು, ಚಾರಿತ್ರಿಕ ಘಟನೆಗಳು, ಸ್ವತಃ ಅನುಭವಿಸಿರಬಹುದಾದ ವಾಸ್ತವಿಕ ಸಂಗತಿಗಳು (ಲೇಖಕರು ಇದೇ ಪ್ರದೇಶಕ್ಕೆ ಸೇರಿದವರಾಗಿದ್ದರಿಂದ) ತುಂಬಿ ತುಳುಕುತ್ತವೆ. ವೈಚಾರಿಕ ಮನೋಭಾವ, ಸಂಶೋಧನಾ ಪ್ರವೃತ್ತಿ ಹಾಗೂ ಇತಿಹಾಸ ಪ್ರಜ್ಞೆಯುಳ್ಳ ಸೃಜನಶೀಲ ಸಾಹಿತಿಯಿಂದ ಮಾತ್ರ ರಚಿಸಲ್ಪಡಲು ಸಾಧ್ಯವಿರುವ ಕಾದಂಬರಿ 'ಹಿಂದೂ'. ಈ 'ಹಿಂದೂ' ಕಥೆ ಇಲ್ಲಿಗೆ ಮುಕ್ತಾಯವಾಗಿಲ್ಲ, ಇನ್ನೂ ೩ ಕಾದಂಬರಿಗಳಲ್ಲಿ ಮುಂದುವರಿಯಲಿದೆ ಎಂಬ ಸೂಚನೆ ಇದೆ.

**ಡಾ|| ಗೀತಾ ಶೆಣೈ**
ನಂ. ೧೯೦೩, ೭ನೇ ಮುಖ್ಯರಸ್ತೆ, 'ಇ' ಬ್ಲಾಕ್
೨ನೇ ಹಂತ, ರಾಜಾಜಿನಗರ, ಬೆಂಗಳೂರು – ೫೬೦ ೦೧೦

# ಮಹಾಕ್ರಾಂತಿ ಮತ್ತು ವಿಜ್ಞಾನ–ಲೆವಾಸ್ಯೆ

**ಪಾಲಹಳ್ಳಿ ವಿಶ್ವನಾಥ್**

**ಚಾ**ರ್ಲ್ಸ್ ಡಿಕನ್ಸ್ ತನ್ನ ಪ್ರಖ್ಯಾತ 'ಟೇಲ್ ಆಫ್ ದಿ ಟೂ ಸಿಟೀಸ್' ಕಾದಂಬರಿಯನ್ನು ಫ್ರಾನ್ಸಿನ ಮಹಾಕ್ರಾಂತಿಯ ಪರಿಚಯಕೊಡುತ್ತಾ ಪ್ರಾರಂಭಿಸಿದ್ದನು : "ಆ ಕಾಲ ಬಹಳ ಒಳ್ಳೆಯದೂ ಇತ್ತು, ಬಹಳ ಕೆಟ್ಟದ್ದೂ ಇತ್ತು ! ಎಷ್ಟು ಜ್ಞಾನವಿದ್ದಿತೋ ಅಷ್ಟೇ ಮೂರ್ಖತನವೂ ಇದ್ದಿತು. ಮಹಾಜ್ಯೋತಿಯ ಕಾಲವೂ ಹೌದು, ಮಹಾ ಅಂಧಕಾರದ ಕಾಲವೂ ಕೂಡ...". ಪಶ್ಚಿಮದಲ್ಲಿ ಶತಮಾನಗಳ ಶೋಷಣೆಯನ್ನು ಕೊನೆಗಾಣಿಸಲು ಸಾಮಾನ್ಯ ಜನತೆ ಅಧಿಕಾರಕ್ಕೆ ಹಾತೊರೆಯುತ್ತಿದ್ದ ಸಮಯವಾಗಿದ್ದು ಆ ಪ್ರಯತ್ನ ಫ್ರಾನ್ಸಿನಲ್ಲಿ ಬೀಭತ್ಸ ಸ್ವರೂಪವನ್ನು ತೆಗೆದುಕೊಂಡಿತು. ೧೭೮೯ರಲ್ಲಿ ಪ್ಯಾರಿಸ್ ನಗರದ ಬ್ಯಾಸ್ಟಿಲ್ ಕಾರಾಗೃಹದ ಖೈದಿಗಳನ್ನು ಬಿಡಿಸಿದಾಗ ಪ್ರಾರಂಭವಾದ ಈ ಕ್ರಾಂತಿ ರಾಜರಾಣಿಯರನ್ನಲ್ಲದೆ ಒಬ್ಬ ಮಹಾ ವಿಜ್ಞಾನಿಯನ್ನೂ ಬಲಿ ತೆಗೆದುಕೊಂಡಿತು. ಈ ಕ್ರಾಂತಿ ಮುಗಿದಾಗ ಕಡೆಯ ಪಕ್ಷ ೧೭೦೦೦ ಜನ ಗಲ್ಲುಕಂಬವನ್ನು ಏರಿದ್ದರು.

**ಫ್ರಾನ್ಸಿನ ಮಹಾಕ್ರಾಂತಿ**

೧೮ನೆಯ ಶತಮಾನದಲ್ಲಿ ಜನರ ಜೀವನದ ಸುಧಾರಣೆಗಳಿಂದಾಗಿ ಯೂರೋಪಿನ ಜನಸಂಖ್ಯೆ ಹೆಚ್ಚಾಗತೊಡಗಿತು : ೧೭೧೫ರಿಂದ ೧೮೦೦ರ ಜನಸಂಖ್ಯೆ ಎರಡರಷ್ಟು ! ಅವುಗಳಲ್ಲೆಲ್ಲಾ ಹೆಚ್ಚು ಜನಸಂಖ್ಯೆ ಇದ್ದದ್ದು ಫ್ರಾನ್ಸಿನಲ್ಲಿ. ಆದ್ದರಿಂದ ಅಲ್ಲಿ ಆಹಾರಕ್ಕೆ ಬೇಡಿಕೆ ಏರುತ್ತ ಆಹಾರ ಸಾಮಗ್ರಿಗಳ ಬೆಲೆಗಳು ಹೆಚ್ಚಾಗಿದ್ದವು. ೧೭೭೫ರಿಂದ ೮ ವರ್ಷಗಳು ನಡೆದ ಅಮೆರಿಕದ ಸ್ವಾತಂತ್ರ್ಯದ ಯುದ್ಧಕ್ಕೆ ಫ್ರಾನ್ಸ್ ಧನ (ಇಂದಿನ ಲೆಕ್ಕದಲ್ಲಿ ೧೩ ಬಿಲಿಯ ಅಮೆರಿಕದ ಡಾಲರುಗಳು !) ಮತ್ತು ಸೇನಾ ಸಹಾಯವನ್ನು ಮಾಡಿದ್ದು ಇದರಿಂದಾಗಿಯೂ ಫ್ರಾನ್ಸಿನ ಬೊಕ್ಕಸ ಬರಿದಾಗಿತ್ತು. ಅದಲ್ಲದೆ, ಶ್ರೀಮಂತರ ಮತ್ತು ರಾಜರ ಜೀವನಶೈಲಿ ದೇಶದ ಜನಜೀವನವನ್ನು ಅಲ್ಲೋಲಕಲ್ಲೋಲ ಮಾಡಲು ಶುರುವಾಗಿದ್ದಿತು. ಇದನ್ನು ಸರಿಪಡಿಸಲು ರಾಜ ೧೬ನೆಯ ಲೂಯಿ ಹೊಸ ಕಂದಾಯವನ್ನು ಹೆಚ್ಚಿಸುವ ಕಾನೂನನ್ನು ತರುವ ಇಚ್ಛೆಯಿಂದ ಶ್ರೀಮಂತರು, ಚರ್ಚಿನ ಅಧಿಕಾರಿಗಳು ಮತ್ತು ಸಾಮಾನ್ಯ ಜನರ ಪ್ರತಿನಿಧಿಗಳನ್ನು ಮೇ ೧೭೮೯ರಲ್ಲಿ ಒಟ್ಟಿಗೆ ಕರೆಯಲು ಯೋಚಿಸಿದನು.

ಸಾಮಾನ್ಯ ಜನರ ಸಂಖ್ಯೆಯೂ ಹೆಚ್ಚಾಗಿ ಅವರ ಅರಿವೂ ಬೆಳೆದಿದ್ದು ಅವರೂ ತಮಗೆ ಹೆಚ್ಚು ಅಧಿಕಾರ ಬೇಕೆಂದು ಒತ್ತಾಯಪಡಿಸಲು ಪ್ರಾರಂಭಿಸಿ ಅವರ ಪ್ರತಿನಿಧಿಯಾದ 'ರಾಷ್ಟ್ರೀಯ ಒಕ್ಕೂಟ'ದ ಸಲಹೆಯಂತೆ ಪ್ಯಾರಿಸ್ ನಗರದಲ್ಲಿ ಜನ ಎಲ್ಲೆಲ್ಲೂ ಸೇರಲಾರಂಭಿಸಿದರು. ಹಿಂದೆ ನಿಗದಿತ ಸಭಾಗೃಹ ದೊರಕದೆ ಜೂನ್ ೨೦ರಂದು ರಾಷ್ಟ್ರೀಯ ಒಕ್ಕೂಟದ ಸದಸ್ಯರು ಟೆನ್ನಿಸ್ ಕೋರ್ಟ್‌ವೊಂದರಲ್ಲಿ ಸಂಧಿಸಿ ಹೊಸ ಸಂವಿಧಾನ ಬೇಕೆಂದು ಮುಂದಿನ ಸುಧಾರಣೆಗಳಿಗೆ ಒತ್ತಾಯ ಮಾಡಿದರು. ಅದಲ್ಲದೆ ರಾಜನು ತಮ್ಮನ್ನು ದಂಡಿಸಬಹುದೆಂಬ ಹೆದರಿಕೆಯಿಂದ ಆಯುಧಗಳಿಗೋಸ್ಕರ ಹುಡುಕಲಾರಂಭಿಸಿ ಜುಲೈ ೧೪ರಂದು ಬ್ಯಾಸ್ಟಿಲ್ ಕಾರಾಗಾರಕ್ಕೆ ಮುತ್ತಿಗೆ ಹಾಕಿದರು. ೧೪ನೆಯ ಶತಮಾನದಲ್ಲಿ ಕಟ್ಟಿದ್ದ ಈ ಕೋಟೆ ಮೊದಲು ಸ್ಥಿತಿವಂತ ಖೈದಿಗಳ ಸೆರೆಮನೆಯಾಗಿದ್ದಿತು. ಆದರೆ ಕಾಲಕ್ರಮೇಣ ಸಮಾಜದ ಕೆಳವರ್ಗದ ಜನರನ್ನು ಇಲ್ಲಿ ಇಡಲಾಗಿದ್ದಿತು. ಜನರು ಕಾರಾಗಾರವನ್ನು ಪ್ರವೇಶಿಸಿ ಅಲ್ಲಿದ್ದ ಖೈದಿಗಳನ್ನು ಹೊರಕಳಿಸಿ ಅಲ್ಲಿಯ ಮುಖ್ಯಸ್ಥನ ತಲೆಯನ್ನು ಕತ್ತರಿಸಿ ಊರಲ್ಲೆಲ್ಲಾ ಪ್ರದರ್ಶನ ಮಾಡಿದರು. ತಲೆಯನ್ನು ಕತ್ತರಿಸುವುದೇ ಈ ಕ್ರಾಂತಿಯ ಪ್ರತೀಕವಾಯಿತು !

ನಗರಗಳ ಸಾಮಾನ್ಯ ಜನತೆ, ಹಳ್ಳಿಗಾಡಿನ ರೈತರು ಮತ್ತು ಇತರರು ದೇಶದಲ್ಲಿ ಸುತ್ತಾಡುತ್ತಾ ಲೂಟಿ ಮಾಡಲು ಪ್ರಾರಂಭಿಸಿದರು. ಕಡೆಗೆ ರಾಷ್ಟ್ರೀಯ ಒಕ್ಕೂಟ ಆಗಸ್ಟ್‌ನಲ್ಲಿ ಹಳೆಯ ಊಳಿಗಮಾನ್ಯ ಪದ್ಧತಿಯನ್ನು ರದ್ದುಮಾಡಿ ಮಾನವನ ಹಕ್ಕುಗಳ ಘೋಷಣೆಯನ್ನು ಮಾಡಿದರು. ಇದರಿಂದ ಹೊರಬಂದ ಖ್ಯಾತ ಹೇಳಿಕೆ "ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ" ಮುಂದೆ ಪ್ರಪಂಚದ ಎಲ್ಲ ದೇಶಗಳಿಗೂ ಕ್ರಾಂತಿಗೆ ಸ್ಫೂರ್ತಿ ಕೊಟ್ಟಿತು. ಇದರಲ್ಲಿ ಅಮೆರಿಕದ ಕ್ರಾಂತಿಯಲ್ಲಿ ಭಾಗವಹಿಸಿದ್ದ ಲಾಫೆಯೆ ಮತ್ತು ಕಾನ್ಡರ್ಸೆಟ್ ಮುಖ್ಯವಾಗಿದ್ದರು.

ಈ ಘಟನೆಗಳ ನಂತರ ರಾಷ್ಟ್ರವನ್ನು ನಡೆಸುವ ಮತ್ತು ಮುಂದೆ ತೆಗೆದುಕೊಂಡು ಹೋಗುವ ಭಾರ ರಾಷ್ಟ್ರೀಯ ಒಕ್ಕೂಟದ ಮೇಲೆ ಬಿದ್ದಿತು. ಆದರೆ ಆ ಸಂಸ್ಥೆಯ ಜನರಲ್ಲಿ ಬಹಳ ಭಿನ್ನಾಭಿಪ್ರಾಯಗಳಿದ್ದು ಆ ಕಾರ್ಯ ಸುಲಭವಾಗಲಿಲ್ಲ. ಸೆಪ್ಟೆಂಬರ್ ೧೭೯೧ರಲ್ಲಿ ರಾಜನಿಗೂ ಸ್ವಲ್ಪ ಅಧಿಕಾರವನ್ನು ಕೊಟ್ಟು ಒಂದು ಸಂವಿಧಾನವನ್ನು ರಚಿಸಲಾಯಿತು. 'ಜಕೋಬಿಯನ್' ಎಂಬ ಗುಂಪಿನಲ್ಲಿ ರಾಬಸ್ಪಿಯರ್, ಡಾಂಟನ್ ಮತ್ತಿತರರು ಮುಖಂಡರಾಗಿದ್ದು, ಇದನ್ನು ಒಪ್ಪದೆ ರಾಜನ ವಿಚಾರಣೆ ಅಗತ್ಯವೆಂದು ಒತ್ತಾಯ ಮಾಡಿದರು. ಆಗಸ್ಟ್ ೧೭೯೨ರಲ್ಲಿ ರಾಜ ಲೂಯಿಯನ್ನು ಸೆರೆಮನೆಯಲ್ಲಿಟ್ಟು ಸೆಪ್ಟೆಂಬರಿನಲ್ಲಿ ಗಣರಾಜ್ಯವನ್ನು ಘೋಷಿಸಲಾಯಿತು. ೧೭೯೩ರಲ್ಲಿ ಸಮಿತಿ ಕ್ರಾಂತಿಕಾರಕ ಸುಧಾರಣೆಗಳನ್ನು ತರುವ ಪ್ರಯತ್ನವನ್ನು ಮಾಡಿತು. ಆ ಸುಧಾರಣೆಗಳಲ್ಲಿ ಎಷ್ಟು ಆದರ್ಶವಿದ್ದಿತೋ ಅಷ್ಟೇ ಅರೆಬೆಂದ ಚಿಂತನೆಗಳೂ ಇದ್ದವು. ೧೭೯೩ರ ಜನವರಿಯಲ್ಲಿ ರಾಜ ಲೂಯಿಯನ್ನು ಮರಣದಂಡನೆಗೆ ಗುರಿ ಮಾಡಲಾಯಿತು. ಸೆಪ್ಟೆಂಬರ್ ೧೭೯೩ರಿಂದ ಜುಲೈ ೧೭೯೪ರವರೆಗೆ ಕ್ರಾಂತಿಯನ್ನು ವಿರೋಧಿಸಿದರೆಂದು ಸಹಸ್ರಾರು ಮಂದಿಯನ್ನು (~ ೧೭೦೦೦) ಗಿಲೋಟಿನ್‌ಗೆ ಹಾಕಲಾಯಿತು. ರಾಬಸ್ಪಿಯರ್ ಈ ಸಾಮೂಹಿಕ ಹತ್ಯೆಯ ರೂವಾರಿಯಾಗಿದ್ದನು. ಆ ಅವಧಿಯಲ್ಲಿ ೩ ಲಕ್ಷ ಜನರನ್ನು ಸೆರೆಮನೆಗೆ ಹಾಕಲಾಯಿತಂತೆ ಮತ್ತು ಸುಮಾರು ೧೦ ಸಾವಿರ ಸೆರೆಮನೆಯಲ್ಲೆ ಮೃತರಾದರಂತೆ. ರಾಬಸ್ಪಿಯರನ



ಅತಿರೇಕ ನಡವಳಿಕೆಯನ್ನು ಒಪ್ಪದೆ ೧೭೯೪ರ ಜುಲೈನಲ್ಲಿ ಅವನನ್ನು ಕೂಡ ಗಲ್ಲಿಗೆ ಹಾಕಲಾಯಿತು. ಅನಂತರ ಸುಧಾರಕರು ೧೭೯೫ರಲ್ಲಿ ಅಧಿಕಾರಕ್ಕೆ ಬಂದರು. ಅದನ್ನು ಕ್ರಾಂತಿಯ ಕೊನೆಯ ಘಟ್ಟವೆಂದು ತಿಳಿಯಬಹುದು. ಆಗ ನಿಧಾನವಾಗಿ ರಕ್ಷಣಾ ಪಡೆಯವರು ಹೆಚ್ಚು ಅಧಿಕಾರವನ್ನು ವಹಿಸಿಕೊಳ್ಳಲು ಪ್ರಾರಂಭಿಸಿ ೧೭೯೯ರಲ್ಲಿ ಸೇನಾ ಮುಖ್ಯಸ್ಥನೊಬ್ಬ ಪೂರ್ತಿ ಅಧಿಕಾರ ವಹಿಸಿಕೊಂಡನು. ಅವನೇ ನೆಪೋಲಿಯನ್ ಬೋನಪಾರ್ಟೆ. ಫ್ರಾನ್ಸಿನ ಮಹಾಕ್ರಾಂತಿ ಕಡೆಗೂ ಮುಕ್ತಾಯವಾಗಿದ್ದಿತು!

ಈ ಕ್ರಾಂತಿಗೆ ಸ್ಫೂರ್ತಿ ಕೆಲವು ಚಿಂತಕರಿಂದ ಬಂದಿತ್ತು. ಕ್ರಾಂತಿಯಲ್ಲಿ ಹಲವಾರು ಘಟ್ಟಗಳಿದ್ದರಿಂದ ಬೇರೆ ಬೇರೆ ಸಮಯಗಳಲ್ಲಿ ಬೇರೆ ಬೇರೆ ಚಿಂತಕರು ಸ್ಫೂರ್ತಿಯಾಗಿದ್ದರು. ಅನೇಕ ಕ್ಷೇತ್ರಗಳಲ್ಲಿ ಉನ್ನತಿಯನ್ನು ಗಳಿಸಿದ್ದ ೧೭ನೆಯ ಶತಮಾನದ ಇಂಗ್ಲೆಂಡ್ ದೇಶ ಫ್ರೆಂಚ್ ಚಿಂತಕರ ಮೇಲೆ ಅಪಾರ ಪ್ರಭಾವ ಬೀರಿದ್ದಿತು. ಆಧುನಿಕ ಉದಾತ್ತವಾದ ಮತ್ತು ಆಧುನಿಕ ಪ್ರಜಾಪ್ರಭುತ್ವದ ಪರಿಕಲ್ಪನೆಯ ಪಿತಾಮಹನಾದ ಇಂಗ್ಲೆಂಡಿನ ಜಾನ್ ಲಾಕ್ (೧೬೩೨-೧೭೦೪) ಸರ್ಕಾರ ಪ್ರಜೆಗಳ ಸಮ್ಮತಿಯಿಂದ ರಚಿತವಾಗಬೇಕು ಮತ್ತು ಅವರು ತಮ್ಮ ಇಚ್ಛೆಯಿಂದ ರಾಜನಿಗೆ ಸ್ವಲ್ಪ ಅಧಿಕಾರ ಕೊಡಬಹುದು ಎಂದು ಮಂಡಿಸಿದನು. ೧೬೯೦ರಲ್ಲಿ ತನ್ನ 'ಸರ್ಕಾರದ ಬಗ್ಗೆ ಎರಡು ಗ್ರಂಥಗಳು' ಎಂಬ ಪುಸ್ತಕದಲ್ಲಿ ತನ್ನ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದನು. ಧರ್ಮದ ಬಗ್ಗೆಯೂ ಚರ್ಚು ಮತ್ತು ರಾಜ್ಯಗಳ ಪ್ರಭಾವೀ ಕ್ಷೇತ್ರಗಳು ಬೇರೆ ಬೇರೆ ಇರಬೇಕು ಎಂದು ಮಂಡಿಸಿದ್ದನು. ರಾಜ ಪ್ರಜೆಗಳ ಅನುರಾಗವನ್ನು ಕಳೆದುಕೊಂಡಾಗ ಅವರು ರಾಜನನ್ನು ತೆಗೆದುಹಾಕಬಹುದು ಎಂದೂ ಅವನು ಸೂಚಿಸಿದ್ದನು. ಲಾಕ್‌ನ ಸಿದ್ಧಾಂತ ಅಮೆರಿಕದ ಕ್ರಾಂತಿಗೂ ಸ್ಫೂರ್ತಿಯಾಯಿತು. ಮಾನವನ ಹಕ್ಕಿನ ಘೋಷಣೆ ಇದೇ ಸಿದ್ಧಾಂತದಿಂದ ಹೊರಹೊಮ್ಮಿತು ಎಂದು ಹೇಳಬಹುದು. ಮಾಂಟೆಸ್ಕ್ಯೂ (೧೬೮೯-೧೭೫೫) ಎಂಬ ಫ್ರೆಂಚ್ ಚಿಂತಕ ಲಾಕ್‌ನ ಸಿದ್ಧಾಂತಗಳನ್ನು ಅನುಮೋದಿಸಿ ಇಂಗ್ಲೆಂಡಿನ ಮಾದರಿಯಲ್ಲಿ ರಾಜ, ಶ್ರೀಮಂತರು ಮತ್ತು ಪ್ರಜೆಗಳು ಒಟ್ಟಿಗೆ ಅಧಿಕಾರವನ್ನು ವಹಿಸಿಕೊಳ್ಳಬಹುದು ಎಂದು ಪ್ರತಿಪಾದಿಸಿದನು. ಆದರೆ ಶ್ರೀಮಂತರು, ಪಾದ್ರಿಗಳು ಇತ್ಯಾದಿ ತಮ್ಮ ತಮ್ಮ ಅಧಿಕಾರವನ್ನು ಹಂಚಿಕೊಳ್ಳಲು ತಯಾರಿರಲಿಲ್ಲ. ಇದಾದ ನಂತರ ರೂಸೋ (೧೭೧೨-೧೭೭೮)ನ ಸಿದ್ಧಾಂತ ಮೇಲುಗೈ ಗಳಿಸಿತು. ಅವನ ಚಿಂತನೆಯಲ್ಲಿ ರಾಜರಿಗೆ ಸ್ಥಾನವಿರಲಿಲ್ಲ. ಅವನ ಪ್ರಕಾರ ಪ್ರಜೆಗಳೇ ಕಾನೂನುಗಳನ್ನು ಮಾಡಬೇಕು ಮತ್ತು ಅವುಗಳನ್ನು ಎಲ್ಲರೂ ಪಾಲಿಸುವಂತೆ ನೋಡಿಕೊಳ್ಳಬೇಕು. ಪೂರ್ಣ ಪ್ರಜಾಪ್ರಭುತ್ವದ ಹಾದಿಯಲ್ಲಿ ಫ್ರಾನ್ಸಿನ ಕ್ರಾಂತಿ ಮುಂದುವರಿಯಿತು. ಸರ್ಕಾರವನ್ನು ನಡೆಸುವುದರಲ್ಲಿ ಬಲಾತ್ಕಾರವನ್ನು ಕೆಲವು ಬಾರಿ ಉಪಯೋಗಿಸಬೇಕಾಗಬಹುದು ಎಂಬ ರೂಸೋನ ಹೇಳಿಕೆಯನ್ನು ರಾಬಸ್ಪಿಯರ್ ದುರುಪಯೋಗಿಸಿಕೊಂಡನು. ಕ್ರಾಂತಿಯ ಸಮಯದಲ್ಲಿ ರೂಸೋಗೆ ಸಿಕ್ಕಷ್ಟು ಪ್ರೀತಿ ಮಿಶ್ರಿತ ಗೌರವ ಇನ್ನು ಯಾರಿಗೂ ಸಿಗಲಿಲ್ಲ. ರೂಸೋವೇ ಕ್ರಾಂತಿಯ ನಿಜ ಚಿಂತಕ ಎಂದು ಜನ ನಿರ್ಧರಿಸಿದ್ದು, ಆ ಗೌರವದ ಪ್ರತೀಕವಾಗಿ. ಅವನ ದೇಹವನ್ನು ಗೋರಿಯಿಂದ ತೆಗೆದು ಪ್ಯಾರಿಸ್ಸಿನ ಖ್ಯಾತ ಪ್ಯಾಂಥಿಯಾನ್ ಮಂದಿರದಲ್ಲಿ ಇಡಲಾಯಿತು. ಕ್ರಾಂತಿಯ ನಂತರ ಬಂದ ನೆಪೋಲಿಯನ್ ರೂಸೋನ ಚಿಂತನೆಗಳ ಬದಲು ಅವನನ್ನು ಅನೇಕ ವಿಷಯಗಳಲ್ಲಿ ವಿರೋಧಿಸಿದ್ದ ಸಮಕಾಲೀನ ಚಿಂತಕ ವಾಲ್ಟೈರ್ (೧೬೯೪-೧೭೭೮)ನ ಅಭಿಪ್ರಾಯಗಳನ್ನು ಅನುಮೋದಿಸಿದನು.



**ವಿಜ್ಞಾನ**

ಮಹಾಕ್ರಾಂತಿ ಪ್ರಾರಂಭವಾಗುವ ಹೊತ್ತಿಗೆ ಫ್ರಾನ್ಸ್‌ನಲ್ಲಿ ಹಲವಾರು ಪ್ರಮುಖ ವಿಜ್ಞಾನಿಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅಮೂಲ್ಯ ಸಂಶೋಧನೆಗಳನ್ನು ಮಾಡಿದ್ದರು. ಅಂದಿನ ಜ್ಞಾನವನ್ನೆಲ್ಲಾ ಭಟ್ಟಿ ಇಳಿಸಿ ಡಿಡೇರೊ (೧೭೧೩-೧೭೮೪) ಮತ್ತು ಡಲಾಮ್ಬರ್ಟ್ (೧೭೧೭-೧೭೮೩) ಒಂದು ವಿಶ್ವಕೋಶವನ್ನು ಹೊರತಂದರು. ಅದೇ ಸಮಯದಲ್ಲಿ ಫ್ರಾನ್ಸಿನ ನ್ಯೂಟನ್ ಎಂದು ಖ್ಯಾತಿ ಗಳಿಸಿದ್ದ ಲೆಪ್ಲಾಸ್ (೧೭೪೯-೧೮೨೭) ಸೌರಮಂಡಲದ ಉಗಮದ ಬಗ್ಗೆ ತನ್ನ ಸಿದ್ಧಾಂತವನ್ನು ಪ್ರತಿಪಾದಿಸಿದ್ದನು. ಲಾಗ್ರಾಂಜ್ ೧೭೩೬-೧೮೧೩), ಲಾಮಾರ್ಕ್ (೧೭೪೪-೧೮೨೯) ಕುವೆ (೧೭೬೯-೧೮೩೨) ಇತ್ಯಾದಿ ವಿಜ್ಞಾನಿಗಳೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಉತ್ತಮ ಸಂಶೋಧನೆಗಳನ್ನು ನಡೆಸಿದ್ದರು.

ಕ್ರಾಂತಿಯ ವಿವಿಧ ಘಟ್ಟಗಳಲ್ಲಿ ಉದ್ದೇಶಗಳೂ ಬೇರೆ ಬೇರೆ ಇದ್ದಿದ್ದರಿಂದ ಕ್ರಾಂತಿಕಾರರಿಗೆ ವಿಜ್ಞಾನದ ಬಗ್ಗೆಯೂ ಒಮ್ಮತವಿರಲಿಲ್ಲ. ಸರ್ಕಾರದ ರಚನೆಯ ಬಗ್ಗೆ ರೂಸೋನ ಅಭಿಪ್ರಾಯಗಳನ್ನು ಒಪ್ಪಿಕೊಂಡ ಜಾಕೋಬಿಯನ್ನರು ಬೇರೆ ಕ್ಷೇತ್ರಗಳಲ್ಲಿಯೂ ಅವನ ಅಭಿಪ್ರಾಯಗಳಿಗೆ ಮನ್ನಣೆ ಕೊಟ್ಟರು. ಅದರಿಂದಾಗಿ ವಿಜ್ಞಾನದ ವಿರುದ್ಧ ಅನೇಕ ಹೇಳಿಕೆಗಳು ಹೊರಬಂದವು. ಅವುಗಳಲ್ಲಿ ಕೆಲವು ಹೀಗಿವೆ : (೧) ಕಲೆ ಮತ್ತು ವಿಜ್ಞಾನ ಮಾನವನ ಕೆಟ್ಟ ಗುಣಗಳಿಂದ ಹುಟ್ಟಿವೆ, (೨) ಮನುಷ್ಯನಿಗೆ ವಿಜ್ಞಾನ ಯಾವ ರೀತಿಯಲ್ಲೂ ಒಳ್ಳೆಯದನ್ನು ಮಾಡುವುದಿಲ್ಲ, (೩) ಖಗೋಳ ವಿಜ್ಞಾನ ಹುಟ್ಟಿದ್ದು ಮೂಢನಂಬಿಕೆಗಳಿಂದ, (೪) ಭೌತವಿಜ್ಞಾನ ಕೆಲಸಕ್ಕೆ ಬಾರದ ಕುತೂಹಲಗಳಿಂದ ಹುಟ್ಟಿತು, (೫) ನಾಗರಿಕತೆಯ ಒಂದು ಕೆಟ್ಟ ಪ್ರತೀಕ ವಿಜ್ಞಾನ, (೬) ಹಣವಂತರ ಖಯಾಲಿ, (೭) ಪ್ರಜಾಪ್ರಭುತ್ವದ ವಿರೋಧಿ, (೮) ಬರೀ ಸಿದ್ಧಾಂತಮಯದ ಅಪ್ರಯೋಜಕ ಅಧ್ಯಯನ, (೯) ಪ್ರಕೃತಿ ಮತ್ತು ಪ್ರಜೆಗಳ ಮಧ್ಯೆ ಇರುವ ದಪ್ಪ ತೆರೆ... ಇತ್ಯಾದಿ. ಆದ್ದರಿಂದ ಹೊಸ ಗಣರಾಜ್ಯಕ್ಕೆ ವಿಜ್ಞಾನ ಬೇಕಿಲ್ಲ ಎಂದು ೧೭೯೩ರ ಆಗಸ್ಟ್‌ನಲ್ಲಿ ಎಲ್ಲ ವೈಜ್ಞಾನಿಕ ಸಂಘಗಳನ್ನು ರದ್ದುಮಾಡಿದರು. ಈ ಸಂಘಗಳಲ್ಲಿ ಆಸಕ್ತಿಯುತ ಮತ್ತು ಸಮಕಾಲೀನ ಚರ್ಚೆಗಳಲ್ಲದೆ ವಿಜ್ಞಾನಿಗಳಿಗೂ ಬೇರೆಯ ತರಹದ (ಧನ ಇತ್ಯಾದಿ) ಸಹಾಯಗಳೂ ದೊರಕುತ್ತಿದ್ದವು. (ಈ ವಾತಾವರಣದಲ್ಲಿ ಗಣಿತ, ಭೌತಶಾಸ್ತ್ರಗಳು ಮೂಲೆಗೆ ಹೋಗಿ ಜೀವಶಾಸ್ತ್ರಕ್ಕಾದರೂ ಹೆಚ್ಚು ಪ್ರಾಮುಖ್ಯತೆ ಬಂದಿದ್ದು ಒಳ್ಳೆಯ ಸುದ್ದಿ. ಇದೇ ಸಮಯದಲ್ಲಿ ಲಾಮಾರ್ಕ್ ಮತ್ತು ಕುವಿಯೆ ತಮ್ಮ ಸಿದ್ಧಾಂತಗಳನ್ನು ಪ್ರತಿಪಾದಿಸಿದರು.) ಸಾರ್ವಭೌಮತ್ವವಿದ್ದಾಗ ಮೂಲ ವಿಜ್ಞಾನಕ್ಕೆ ಹೆಚ್ಚು ಒತ್ತು ಇದ್ದು ತಂತ್ರಜ್ಞಾನಕ್ಕೆ ಗೌರವ ಕೊಡದೆ ವೈಜ್ಞಾನಿಕ ಸಂಘಗಳು ಕೈಕೆಲಸದವರನ್ನು, ಕಸುಬುದಾರರನ್ನು ಹೀನಾಯವಾಗಿ ಕಂಡಿದ್ದರು. ಕ್ರಾಂತಿಯ ನಂತರ ತಂತ್ರಜ್ಞಾನದ ಈ ಪ್ರತಿನಿಧಿಗಳು ವಿಜ್ಞಾನಿಗಳನ್ನು ಮೂದಲಿಸಿ ರೊಚ್ಚು ತೀರಿಸಿಕೊಂಡರು. ಅನೇಕ ವಿಷಯಗಳಲ್ಲಿ ಪ್ರಬುದ್ಧತೆ ಇದ್ದರೂ ಪ್ರಭಾವಶಾಲಿ ಸ್ನಾತಕ ಡಿಡೇರೊ ಗಣಿತಶಾಸ್ತ್ರಕ್ಕೆ ನೀಡಿದ್ದ ಪ್ರಾಮುಖ್ಯತೆಯನ್ನು ವಿರೋಧಿಸಿದನು. ಗಣಿತಶಾಸ್ತ್ರದಲ್ಲಿ ಮಾನವೀಯತೆ ಇಲ್ಲ ಎಂಬ ಅಭಿಪ್ರಾಯವೂ ಇದ್ದಿತು. ಒಟ್ಟಿನಲ್ಲಿ ರೂಸೋನ ಅನುಯಾಯಿಗಳಿಗೆ ವೈಜ್ಞಾನಿಕ ಸಂಸ್ಕೃತಿಯ ಗಂಧವಿರಲಿಲ್ಲ. ಡಿಸೆಂಬರ್ ೧೭೯೩ರಲ್ಲಿ ಗಣಿತಜ್ಞರಾದ ಲಾಪ್ಲಾಸ್, ಲೆಜೆಂಡ್ರೆ ಮತ್ತಿತರರನ್ನು ಒಳ್ಳೆಯ ಪದವಿಗಳಿಂದ ಕಿತ್ತುಹಾಕಿದರು. ವಿಜ್ಞಾನದ ಅಭ್ಯಾಸ ಓದಿನ ಮುಖ್ಯ ಪಾತ್ರವಲ್ಲ ಎಂದಲ್ಲದೆ, ಅದು ಬುದ್ಧಿ ಸ್ವಾತಂತ್ರ್ಯದ ವಿರೋಧಿ ಎಂದೂ ರಾಬಸ್ಪಿಯರ್ ಅಭಿಪ್ರಾಯಪಟ್ಟಿದ್ದನು. ಸಮಿತಿ ತನ್ನ ಮುಖ್ಯ ಕ್ರೋಧವನ್ನು ಮತ್ತೊಂದು ಕ್ಷೇತ್ರದ ಕ್ರಾಂತಿಕಾರನಿಗೆ – ರಸಾಯನಶಾಸ್ತ್ರದ ಪಿತಾಮಹ– ಮೀಸಲಾಗಿಟ್ಟಿತು.

**ಲೆವಾಸ್ಯೆ**

'ರಸಾಯನಶಾಸ್ತ್ರದಲ್ಲಿ ಕ್ರಾಂತಿ ಬರಬೇಕಾದರೆ ಹೊಸ ಅಭಿಪ್ರಾಯಗಳಿರುವ ಮೇಧಾವಿ ವಿಜ್ಞಾನಿಯ ಅವಶ್ಯಕತೆ ಇದೆ. ಎಲ್ಲರ ಗಮನವನ್ನೂ ಸೆಳೆಯುವ ಪ್ರಯೋಗಗಳನ್ನು ನಡೆಸಿ ಪ್ರಚಾರ ಮಾಡಬೇಕಾಗುತ್ತದೆ. ನಂತರ ಕ್ರಮೇಣ ವಾದ-ಪ್ರತಿವಾದಗಳಿಂದ ವಿಜ್ಞಾನಿಗಳನ್ನೂ ಒಪ್ಪಿಸಬೇಕಾಗುತ್ತದೆ' ಎಂದು ವಿದ್ವಾಂಸನೊಬ್ಬನು ೧೮ನೆಯ ಶತಮಾನದ ಮಧ್ಯದಲ್ಲಿ ನುಡಿದಿದ್ದನು. ಈ ಹೇಳಿಕೆಗೆ ಮಾಡಿಸಿದಂತೆ ಅಂತ್ವಾ ಲೆವಾಸ್ಯೆ ರಸಾಯನಶಾಸ್ತ್ರವನ್ನು ಪ್ರವೇಶಿಸಿ ಆ ಅಧ್ಯಯನವನ್ನೇ ಬದಲಾಯಿಸಿದನು.

ಪ್ಯಾರಿಸ್‌ನಲ್ಲಿ ಹಣವಂತ ವಕೀಲನ ಮಗನಾಗಿ ಹುಟ್ಟಿದ ಲೆವಾಸ್ಯೆ (೧೭೪೩-೧೭೯೪) ಮೊದಲು ಕಾನೂನನ್ನು ಅಭ್ಯಾಸ ಮಾಡಲು ತೊಡಗಿದರೂ ನಿಧಾನವಾಗಿ

ವಿಜ್ಞಾನ ಇವನನ್ನು ಸೆಳೆದು ಭೂಗರ್ಭಶಾಸ್ತ್ರದಲ್ಲಿ ಅಧ್ಯಯನಗಳನ್ನು ನಡೆಸಿದನು. ಅನಂತರ ಶ್ರೀಮಂತ ಮಹಿಳೆಯೊಬ್ಬಳನ್ನು ಮದುವೆಯಾದನು. ಪತಿಯ ವೈಜ್ಞಾನಿಕ ಆಸಕ್ತಿಗಳು ಪತ್ನಿಗೂ ಇಷ್ಟವಾಗಿ ಅದಕ್ಕಾಗಿ ಇಂಗ್ಲಿಷ್ ಭಾಷೆಯನ್ನು ಕಲಿತದ್ದಲ್ಲದೆ ಇವನ ಲೇಖನಗಳಲ್ಲಿ ಉಪಕರಣಗಳ ರೇಖಾಚಿತ್ರಗಳನ್ನು ಬರೆದುಕೊಡುತ್ತಿದ್ದಳು. ೧೭೭೫ರಲ್ಲಿ ಸರ್ಕಾರ ಇವನನ್ನು ಮದ್ದಿನಪುಡಿ (ಗನ್ ಪೌಡರ್) ಸಂಶೋಧನೆ ಮಾಡಲು ನೇಮಿಸಿಕೊಂಡಿತು. ಆ ಕೆಲಸದಲ್ಲಿದ್ದಾಗ ಉತ್ತಮ ಮದ್ದನ್ನು ಮಾಡುವುದರಲ್ಲಿ ಸಫಲನಾದನು.

ಎಲ್ಲ ವಸ್ತುಗಳು ನಾಲ್ಕು ಮೂಲವಸ್ತುಗಳಿಂದ ಮಾಡಿರುವುದು ಎಂದು ಗ್ರೀಕರು ಪ್ರತಿಪಾದಿಸಿದ್ದನ್ನು ಅಂದಿನ ವಿಜ್ಞಾನಿಗಳೆಲ್ಲ ನಂಬಿದ್ದರು. ನ್ಯೂಟನ್‌ನ ಸಮಕಾಲೀನನಾದ ಖ್ಯಾತ ರಸಾಯನಶಾಸ್ತ್ರಜ್ಞ ರಾಬರ್ಟ್ ಬಾಯಲ್ ಇದನ್ನು ವಿರೋಧಿಸಿದ್ದರೂ ಆ ಕ್ಷೇತ್ರದಲ್ಲಿ ಬದಲಾವಣೆಗಳೇನೂ ಬರಲಿಲ್ಲ. ಲೆವಾಸ್ಯೆನ ಅಧ್ಯಾಪಕನಾದ ಖ್ಯಾತ ವಿಜ್ಞಾನಿ ರೊವೆಲೆ ಕೂಡ ಹಿಂದಿನ ವಿಚಾರಧಾರೆಯನ್ನೇ ಪ್ರತಿಪಾದಿಸುತ್ತಿದ್ದನು. ಇದಲ್ಲದೆ, ಆ ಸಮಯದಲ್ಲಿ ರಸಾಯನಶಾಸ್ತ್ರ, ಆಲ್ಕೆಮಿ, ವೈದ್ಯಶಾಸ್ತ್ರ, ಲೋಹದ ತಂತ್ರಜ್ಞಾನ ಇತ್ಯಾದಿಗಳ ಜೊತೆ ಕಲಸುಮೇಲೋಗರವಾಗಿದ್ದಿದೂ ಲೆವಾಸ್ಯೆನ ಗಮನಕ್ಕೆ ಬಂದಿರಬಹುದು. ಆದ್ದರಿಂದ ರಸಾಯನಶಾಸ್ತ್ರಕ್ಕೆ ತನ್ನದೇ ಮೂಲ ಮತ್ತು ಪ್ರಾಯೋಗಿಕ ತತ್ವಗಳ ಅವಶ್ಯಕತೆ ಇರುವುದನ್ನು ಆತ ಕಂಡನು. ಇದಕ್ಕೆ ಮುಂಚೆ ಹೆನ್ರಿ ಕ್ಯಾವೆಂಡಿಶ್, ಪ್ರೀಸ್ಟ್ಲೀ, ಶೀಲೆ ಇತ್ಯಾದಿ ವಿಜ್ಞಾನಿಗಳು ಹೈಡ್ರೋಜನ್, ಆಕ್ಸಿಜನ್ ಮತ್ತಿತರ ಇತರ ಕೆಲವು ಅನಿಲಗಳನ್ನು ಕಂಡುಹಿಡಿದಿದ್ದರೂ ಅವುಗಳ ಮೂಲಸ್ವರೂಪದ ಬಗ್ಗೆ ಯಾವ ಚಿಂತನೆಯೂ ಇರಲಿಲ್ಲ.

ಗ್ರೀಕರ ಅಭಿಪ್ರಾಯಗಳನ್ನು ಲೆವಾಸ್ಯೆ 'ಎಲ್ಲಾ ತತ್ವಶಾಸ್ತ್ರ, ಪ್ರಕೃತಿಯ ನಡವಳಿಕೆಗೂ ಇವುಗಳಿಗೂ ಏನೂ ಸಂಬಂಧವಿಲ್ಲ' ಎಂದು ತಿರಸ್ಕರಿಸಿದನು. ಆಲ್ಕೆಮಿಯಲ್ಲಿ ನಂಬಿಕೆ ಇನ್ನೂ ಪೂರ್ತಿ ಹೊರಟುಹೋಗದಿದ್ದ ಕಾಲವದು. ನೀರನ್ನು ಭೂಮಿ(ಮಣ್ಣು)ಯನ್ನಾಗಿ ಪರಿವರ್ತಿಸಬಹುದು ಎಂಬ ಕೆಲವರ ಹೇಳಿಕೆಯನ್ನು ಪರೀಕ್ಷಿಸಲು ಲೆವಾಸ್ಯೆ ೧೦೦ ದಿನಗಳ ಕಾಲ ಸತತವಾಗಿ ಪ್ರಯೋಗವನ್ನು ನಡಸಿದನು. ಕೆಲವರ ಪ್ರಯೋಗಗಳಲ್ಲಿ ನೀರೆಲ್ಲ ಕುದ್ದು ಆವಿಯಾದ ನಂತರ ಸ್ವಲ್ಪ ಮಣ್ಣು / ಮರಳು ಕಾಣಿಸಿಕೊಳ್ಳುತ್ತಿತ್ತು. ಲೆವಾಸ್ಯೆ ತನ್ನ ಪ್ರಯೋಗದಲ್ಲಿ ಇದು ಗಾಜಿನ ಒಳಪದರ ನೀರಿನಲ್ಲಿ ಕರಗುವುದರಿಂದ ಹುಟ್ಟುವ ಮಣ್ಣು ಎಂದು ತೋರಿಸಿ ನೀರು ಮಣ್ಣಿಗೆ ಪರಿವರ್ತನೆಯಾಗುವುದಿಲ್ಲ ಎಂದು ಮನದಟ್ಟು ಮಾಡಿದನು.

ಪ್ರೀಸ್ಟ್ಲೀ ಸೋಡಾ ಎಂಬ ದ್ರವವನ್ನು ಕಂಡುಹಿಡಿದಿದ್ದು ಫ್ರಾನ್ಸಿನ ವಿಜ್ಞಾನಿಗಳ ಗಮನಕ್ಕೆ ಬಂದಿತು. ಅದಲ್ಲದೆ, ಆ ದ್ರವ ನಾವಿಕರ ಕೆಲವು ಕಾಯಿಲೆಗಳನ್ನು ಗುಣಪಡಿಸಬಹುದು ಎಂಬ ಸಂಶಯವೂ ಇದ್ದು ಲೆವಾಸ್ಯೆಗೆ ಇದರ ಬಗ್ಗೆ ಸಂಶೋಧನೆಗಳನ್ನು ನಡೆಸುವ ಅವಕಾಶ ದೊರಕಿತು. ಇದೇ ಸಮಯದಲ್ಲಿ (೧೭೭೫) ಲೆವಾಸ್ಯೆ ಒಂದು ಮುಖ್ಯ ಪ್ರಯೋಗವನ್ನು ನಡೆಸಿದನು. ಈ ಪ್ರಯೋಗ ೧೨ ದಿನ ಮತ್ತು ೧೨ ರಾತ್ರಿ ನಡೆಯಿತು. ಪಾದರಸವನ್ನು ಕಾಯಿಸಿ ಹುಟ್ಟುವ ಅನಿಲದ ಗುಣಗಳನ್ನು ಪರಿಶೀಲಿಸಿದನು. ಇದರಿಂದ ಉಸಿರಾಡುವುದು ಸುಲಭವಾಗುವುದಲ್ಲದೇ ದಹನಕ್ರಿಯೆಯೂ ಸುಲಭವಾಗುತ್ತೆಂದು ತೋರಿಸಿದನು. ಇದೇ ಪ್ರೀಸ್ಟ್ಲೀ ಕಂಡುಹಿಡಿದಿದ್ದ ಅನಿಲ ! ಆದರೆ ಲೆವಾಸ್ಯೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇದು ಮೂಲವಸ್ತು ಎಂದು ಪ್ರತಿಪಾದಿಸಿದನು. ಇದೇ ರೀತಿ ಕ್ಯಾವೆಂಡಿಶ್ ಕಂಡುಹಿಡಿದ ಅನಿಲವನ್ನೂ ಮತ್ತೆ ಕಂಡುಹಿಡಿದು ಅದಕ್ಕೂ ಮೂಲವಸ್ತುವಿನ ಸ್ಥಾನ ಕೊಟ್ಟನು. ಇವೇ ಇಂದಿನ ಆಮ್ಲಜನಕ ಮತ್ತು ಜಲಜನಕ ! ಆ ವರ್ಷದ ಫೆಬ್ರವರಿ ತಿಂಗಳಿನಲ್ಲಿ ಅನೇಕ ಜನರ ಮುಂದೆ ೩ ದಿನಗಳು ಸತತ ನಡೆಸಿದ ಪ್ರಯೋಗದಲ್ಲಿ ನೀರು, ಆಮ್ಲಜನಕ ಮತ್ತು ಜಲಜನಕಗಳ ಮಿಶ್ರಣ ಎಂದು ತೋರಿಸಿದನು. ಗಾಳಿಯೂ ಆಮ್ಲಜನಕ ಮತ್ತು ಸಾರಜನಕಗಳ ಮಿಶ್ರಣ ಎಂದು ತೋರಿಸಿದನು. ಈ ಪ್ರಯೋಗಗಳಿಂದ 'ಯಾವ ವಿಧಾನದಿಂದಲೂ ಮುಂದೆ ಒಡೆಯಲಾಗದ ವಸ್ತುವನ್ನು ಮಾತ್ರ ಮೂಲ ವಸ್ತು ಎಂದು ಕರೆಯಬಹುದು' ಎಂದು ಮುಂದಿನ ಅಣು ಸಿದ್ಧಾಂತಕ್ಕೆ ದಾರಿ ತೋರಿಸಿದನು.

ಗ್ರೀಕರಲ್ಲಿ (ಅನಾಕ್ಸೊಗೊರಾಸ್ ~ಕ್ರಿ. ಪೂ. ೪೩೫) ಮೊದಲಿಂದಲೂ ದ್ರವ್ಯರಾಶಿ ಎಂದೂ ವ್ಯಯವಾಗುವುದಿಲ್ಲ ಎಂಬ ನಂಬಿಕೆ ಇದ್ದಿತು : 'ಯಾವುದು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ ! ಯಾವುದೋ ಕಾಲದಲ್ಲಿ ಒಟ್ಟಿಗೆ ಬರುತ್ತದೆ, ಸ್ವಲ್ಪ ಸಮಯದ ನಂತರ ಬೇರೆ ಬೇರೆ ಆಗುತ್ತದೆ' ! ಲೆವಾಸ್ಯೆಗೆ ಈ ನಿಯಮದಲ್ಲಿ ನಂಬಿಕೆ ಇದ್ದು ರಾಸಾಯನಿಕ ಪ್ರಕ್ರಿಯೆಗಳಲ್ಲಿ ಒಟ್ಟು ತೂಕ ಬದಲಾಯಿಸುವುದಿಲ್ಲ ಎಂದು ಪ್ರಯೋಗದ ಮೂಲಕ ತೋರಿಸಿದನು. ಈ ಸೂತ್ರವೇ ಮುಂದೆ ಯಾವ ಪ್ರಕ್ರಿಯೆಯಲ್ಲೂ ಶಕ್ತಿಯ ವ್ಯಯವಾಗುವುದಿಲ್ಲ ಎಂಬ ಭೌತಶಾಸ್ತ್ರದ ಮೂಲ ಸೂತ್ರಕ್ಕೆ ನಾಂದಿಯಾಯಿತು. ಇದುವರೆಗೂ ಬರಿ ಹೇಳಿಕೆಗಳು ತುಂಬಿರುತ್ತಿದ್ದ ರಸಾಯನಶಾಸ್ತ್ರಕ್ಕೆ ವಸ್ತುಗಳನ್ನು ತೂಕ ಮಾಡಿ ನೋಡಿ ಅಳತೆಯ ಅಭ್ಯಾಸವನ್ನು ಮಾಡಿಸಿದನು. ಇದಕ್ಕೆ ಬೇಕಾದ ಒಳ್ಳೆಯ ತಕ್ಕಡಿಗಳು ಅವಶ್ಯವಿದ್ದು, ಅವುಗಳನ್ನು ತಯಾರಿಸಿದನು. ಇವೆಲ್ಲದರಿಂದ ರಸಾಯನಶಾಸ್ತ್ರಕ್ಕೆ ಹಿಂದಿರದಿದ್ದ ಮೂಲ ವಿಜ್ಞಾನದ ಕಳೆಯೂ ಬಂದಿತು !

ಶ್ರೀಮಂತ ಹಿನ್ನೆಲೆಯಿಂದ ಬಂದಿದ್ದರೂ ಮಹಾಕ್ರಾಂತಿಯ ಮೊದಲ ವರ್ಷಗಳಲ್ಲಿ ಲೆವಾಸ್ಯೆ ಉತ್ಸಾಹದಿಂದ ಬಹಳ ಸುಧಾರಣೆಗಳನ್ನು ಸೂಚಿಸಿದ್ದನು. ಮೆಟ್ರಿಕ್ ಪದ್ಧತಿಯನ್ನು ಜಾರಿಗೆ ತರುವುದಕ್ಕೆ ಸಹಾಯ ಮಾಡಿದನು. ಆದರೆ ಇವನು ಜೀವನೋಪಾಯಕ್ಕಾಗಿ ಜನರಿಂದ ತೆರಿಗೆ ಹಣವನ್ನು ವಸೂಲಿ ಮಾಡಿ ಅದನ್ನು ರಾಜನಿಗೆ ಸಲ್ಲಿಸುವ ಕೆಲಸ ಮಾಡುತ್ತಿದ್ದನು. ತೆರಿಗೆ ವಸೂಲು ಮಾಡುವವರನ್ನೂ ಗೌರವಿಸಿದನು. ಮರಾಟ್ ಎಂಬ ಕ್ರಾಂತಿಯ ಮುಖಂಡನ ವೈಯಕ್ತಿಕ ದ್ವೇಷವನ್ನು ಕೂಡ ಲೆವಾಸ್ಯೆ ಸಂಪಾದಿಸಿದ್ದು ಕ್ರಾಂತಿಕಾರರ ಕಣ್ಣುಗಳಲ್ಲಿ ಲೆವಾಸ್ಯೆ ಎರಡು ಕುಖ್ಯಾತ ಕಸುಬುಗಳಾದ – ವಿಜ್ಞಾನ ಮತ್ತು ತೆರಿಗೆ ವಸೂಲಿ – ಇವುಗಳ ಪ್ರತಿನಿಧಿಯಾಗಿಬಿಟ್ಟಿದ್ದನು ! ಜೈಲಿನಲ್ಲಿದ್ದಾಗ ಲೆವಾಸ್ಯೆ ತನ್ನ ಸ್ನೇಹಿತರೊಬ್ಬರಿಗೆ 'ಇದರಿಂದಾಗಿ ನಾನು ವೃದ್ಧಾಪ್ಯವನ್ನು ಎದುರಿಸಬೇಕಿಲ್ಲ' ಎಂದು ಬರೆದಿದ್ದನಂತೆ. ೧೭೯೪ರ ಜನವರಿಯಲ್ಲಿ ಗಿಲೋಟಿನ್‌ನಿಂದ ಲೆವಾಸ್ಯೆಯ ಶಿರಚ್ಛೇದನವಾಯಿತು ! ಆಗ ಸುಪ್ರಸಿದ್ಧ ಗಣಿತಜ್ಞ ಲಗ್ರಾಂಜ್ ಹೇಳಿದ್ದನು : 'ಒಂದೇ ಕ್ಷಣದಲ್ಲಿ ಇವನ ತಲೆಯನ್ನು ಕತ್ತರಿಸಿ ಹಾಕಿದರು. ಇಂದಿನ ಪ್ರಜಾಪ್ರಭುತ್ವಗಳಲ್ಲೂ ಮೂಲಭೂತ ಸಂಶೋಧನೆಗಳ ಬಗ್ಗೆ ಸಂಶಯ ಮತ್ತು ಅಸಮಾಧಾನಗಳು ಇಲ್ಲದೇ ಇಲ್ಲ.' ಪ್ರಜಾಪ್ರಭುತ್ವದ ಆದರ್ಶಗಳ ಜೊತೆ ಫ್ರಾನ್ಸ್ ಈ ಅಸಹಿಷ್ಣುತೆಗಳನ್ನೂ ರಫ್ತು ಮಾಡಿತೋ ಏನೋ !

(ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದ ಚಾರ್ಲ್ಸ್ ಜಿಲೆಸ್ಪಿಯವರ ಲೇಖನದಿಂದ ಕೆಲವು ವಿಷಯಗಳನ್ನು ತೆಗೆದುಕೊಂಡಿದೆ.)

**ಪಾಲಹಳ್ಳಿ ವಿಶ್ವನಾಥ್**
ನಂ. ೯, ಕಾಳಪ್ಪ ರಸ್ತೆ, ಬಸವನಗುಡಿ
ಬೆಂಗಳೂರು – ೫೬೦ ೦೦೪

# ಮಹಿಳೆ : ಸಾಮಾಜೀಕರಣ ಮತ್ತು ಕೌಟುಂಬಿಕ ಹಿಂಸೆ

ಡಾ॥ ರೇಣುಕಾ ಎಸ್. ಮಂದ್ರೂಪ

'ಗಂಡು-ಹೆಣ್ಣು' ಎಂಬ ಲಿಂಗತ್ವದ ಪಾತ್ರಗಳನ್ನು ಸಾಮಾಜಿಕ ಸಂಸ್ಥೆಯಲ್ಲೊಂದಾದ 'ಕುಟುಂಬ'ವೆಂಬ ಚಿಕ್ಕ ಘಟಕದಿಂದ ಹಿಡಿದು ಸಮಾಜದವರೆಗಿನ ಅನೇಕ ಘಟಕಗಳು ಹೆಜ್ಜೆ ಹೆಜ್ಜೆಗೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಹೇರುತ್ತ ಬಂದಿರುತ್ತವೆ. ಇದರಿಂದ ಹೆಣ್ಣನ್ನು ಮಹಿಳೆಯನ್ನಾಗಿಸುವ ಹಾಗೂ ಗಂಡನ್ನು ಪುರುಷನನ್ನಾಗಿಸುವ ಪ್ರಕ್ರಿಯೆಯಲ್ಲಿಯೇ ತಾರತಮ್ಯವಿದ್ದು, ಇದು ಕೌಟುಂಬಿಕ ಹಿಂಸೆಗೆ ಎಡೆಮಾಡಿಕೊಡುತ್ತದೆ. ಮಗುವು ಕುಟುಂಬದ ಸದಸ್ಯರನ್ನು ಅನುಸರಿಸುತ್ತಲೇ ಬೆಳೆಯುತ್ತದೆ. ಒಳ್ಳೆಯದನ್ನು ಸ್ವೀಕರಿಸಿದಷ್ಟೇ, ಕೆಟ್ಟದ್ದನ್ನೂ ಸ್ವೀಕರಿಸುತ್ತದೆ. ತಂದೆ-ತಾಯಿಯ ಪಾತ್ರಗಳು ಅವರ ನಡವಳಿಕೆ ಮತ್ತು ರೀತಿ-ನೀತಿಗಳನ್ನು ಚಿಕ್ಕ ವಯಸ್ಸಿನಲ್ಲಿ ಮಕ್ಕಳು ಅನುಕರಿಸುವ ಮೂಲಕ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುತ್ತಾರೆ. ಸಮಾಜದ ನಂಬಿಕೆ, ನಿಯಮಗಳನ್ನು ರೂಪಿಸಿಕೊಳ್ಳುವುದೇ ಕುಟುಂಬದಲ್ಲಿ ಜಂಡರ್ ಪಾತ್ರಗಳ ನಿರ್ಮಿತಿಯಲ್ಲಿ ಮೊದಲು ಪಾತ್ರವಹಿಸುತ್ತದೆ. ಇದರಿಂದಾಗಿ ಕುಟುಂಬದಲ್ಲಿ ಜಾರಿಯಲ್ಲಿರುವ ತಾರತಮ್ಯ, ಅಧೀನತೆ, ದೌರ್ಜನ್ಯ ಮತ್ತು ನಿಯಂತ್ರಣಗಳು ಹೆಣ್ಣಿನ ಸ್ಥಾನವನ್ನು ರೂಪಿಸುತ್ತವೆ. ಹೆಣ್ಣಿನಿಂದ ನಿರೀಕ್ಷಿಸಲಾಗುವ ಸೇವೆ ಮತ್ತು ಅಧೀನ ಪಾತ್ರವನ್ನು ಮಹಿಳೆಯರು ಮೀರಿದಾಗ ಹಿಂಸೆ ಆರಂಭವಾಗುತ್ತದೆ. ಅದು ಮೌಖಿಕವಾಗಿರಬಹುದು ಇಲ್ಲವೇ ದೈಹಿಕವಾಗಿರಬಹುದು ಅಥವಾ ಮಾನಸಿಕವಾಗಿರಬಹುದು.

ಹೆಣ್ಣು ಹುಟ್ಟಿದ ಕ್ಷಣದಿಂದಲೇ 'ಅಯ್ಯೋ ಹೆಣ್ಣಾಯಿತಾ!' ಎಂಬ ಉದ್ಗಾರದಿಂದ ಆರಂಭಗೊಳ್ಳುವ ಹಿಂಸೆ ಹಂತ-ಹಂತವಾಗಿ ಮುಂದುವರಿಯುತ್ತಲೇ ಹೋಗುತ್ತದೆ. ಸಿಮೋನ-ದ-ಬೋವಾರಳ ಮಾತಿನಂತೆ ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ ಆಗುತ್ತಾಳೆಯೇ ವಿನಾ ಯಾರೂ ಹೆಣ್ಣಾಗಿಯೇ ಹುಟ್ಟುವುದಿಲ್ಲ. ಸಾಮಾಜೀಕರಣದ ಮೂಲಕ ಹೆಣ್ಣಿನ ಗುಣಗಳೆನ್ನಲಾಗುವ ರೀತಿ-ನೀತಿಗಳನ್ನು ಹೆಣ್ಣಲ್ಲಿ ತುಂಬಿ ಬೆಳೆಸಲಾಗುತ್ತದೆ. ಆಧುನಿಕ ಶಿಕ್ಷಣವು ಕೂಡ ಪುರಾಣ ಪಾತ್ರಗಳ ಮೂಲಕ ಹೆಣ್ಣು-ಗಂಡು ಮಕ್ಕಳನ್ನು ತರಬೇತಿಗೊಳಿಸುತ್ತದೆ. ಯಥಾಸ್ಥಿತಿಯಲ್ಲಿಯೂ ಪುರಾಣ ಪಾತ್ರಗಳ ವಿಶ್ಲೇಷಣೆಯು ಕೂಡ ಹೆಣ್ಣಿನಲ್ಲಿ ಪಾತಿವ್ರತ್ಯವನ್ನು, ಗಂಡಲ್ಲಿ ಸ್ವೇಚ್ಛೆಯನ್ನು ಪ್ರೋತ್ಸಾಹಿಸುತ್ತದೆ.

"ಗಂಡ್ಸು ಕೂತು ಕೆಟ್ಟ. ಹೆಂಗ್ಸು ತಿರುಗಿ ಕೆಟ್ಲು" ಎಂಬ ಗಾದೆಮಾತು ಗಂಡಸನ್ನು ಸದಾ ಮನೆಯ ಹೊರಗೆ ಇರುವಂತೆ, ದುಡಿಮೆ ಕೈಗೊಳ್ಳುವಂತೆ, ಆ ಮೂಲಕ ತನ್ನ ಯಜಮಾನಿಕೆ ಸ್ಥಾಪಿಸಿಕೊಳ್ಳುವ ದಿಸೆಯಲ್ಲಿ ಆಲೋಚಿಸಲು ಮತ್ತು ಹೆಣ್ಣನ್ನು ಅಡಿಗೆ ಮನೆಗೆ, ಮಕ್ಕಳ ಪಾಲನೆ-ಪೋಷಣೆ, ಕುಟುಂಬದ ನಿರ್ವಹಣೆಗೆ ಅಣಿಯಾಗಿರುವಂತೆ ಒತ್ತಾಯ ಹೇರುತ್ತದೆ. ಹೀಗಾಗಿ ಚಿಕ್ಕಂದಿನಲ್ಲೇ ಗಂಡು ಮತ್ತು ಹೆಣ್ಣುಮಕ್ಕಳನ್ನು ಪೋಷಕರು ಗಂಡುಮಗುವಿಗೆ, "ನೀನು ಗಂಡಸು ಸದಾ ಮನೇಲಿರಬಾರದು, ಹೊರಗಡೆ ನಾಲ್ಕು ಜನರೊಂದಿಗೆ ಬೆರೆಯಬೇಕು, ಬೇರೆ ಕೆಲಸಗಳಲ್ಲಿ ತೊಡಗಬೇಕೆಂದು" ಹೇಳುವರು. ಹೆಣ್ಣುಮಗುವಿಗೆ, "ನೀನು ಪರರ ಸ್ವತ್ತು ಮನೆಯ ಎಲ್ಲ ಕೆಲಸ ಕಾರ್ಯಗಳನ್ನು ಅಚ್ಚುಕಟ್ಟಾಗಿ ಕಲಿಯಬೇಕು. ಹಿರಿಯರೆದುರು ನಯ, ವಿನಯದಿಂದಿರಬೇಕು" ಎಂದು ಸಂಬೋಧಿಸುತ್ತಾರೆ. ಆ ಮಗು ಮುಂದೆ ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ತಿಳಿದುಕೊಳ್ಳುವಂತೆ ಮಾಡುತ್ತಾರೆ.

ಕ್ಷೇತ್ರಕಾರ್ಯದ ಅವಧಿಯಲ್ಲಿ ಅಧ್ಯಯನಕ್ಕೊಳಪಡಿಸಿದ ೪೦೦ ಮಹಿಳೆಯರನ್ನು ಸಂದರ್ಶಿಸಲಾಗಿ, ವಿವಾಹದ ಕುರಿತು ಪಾಲಕರು ಹಾಗೂ ಕುಟುಂಬದ ಸದಸ್ಯರು ತೆಗೆದುಕೊಂಡ ನಿರ್ಧಾರದ ಕುರಿತು ಪ್ರಶ್ನಿಸಿದಾಗ, ಶೇ. ೭೦ರಷ್ಟು ಸಂದರ್ಶನಾರ್ಥಿ ಮಹಿಳೆಯರು ಇಲ್ಲ ಎಂದು ಉತ್ತರಿಸಿದರು. ಕಾರಣ ಹಿರಿಯರಿಗೆ ಎದುರಾಡಬಾರದು, ಪಾಲಕರು ನಿರ್ಧರಿಸಿರುವುದು ಸರಿ ಎಂಬುದಾಗಿತ್ತು. 'ಹೆಣ್ಣು' ಎಂದರೆ ತಮ್ಮ ಸ್ವತ್ತು, ತಾವು ಹೇಳಿದ್ದನ್ನು ಕೇಳಿ ಕೊಂಡಿರಬೇಕು ಎನ್ನುವ ಮನೋಭಾವ ಗಂಡಿನಲ್ಲಿ ಮೂಡಿರುವುದರಿಂದ ಆಕೆಯನ್ನು ಸದಾ ತನ್ನ ಅಧೀನತೆಗೊಳಪಡಿಸುವುದು, ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದು ಪುರುಷರ ಲಕ್ಷಣವೆಂದು ಬಿಂಬಿಸಲಾಗುತ್ತದೆ. ಇದಕ್ಕೆ ಗಂಡ ಹೆಂಡತಿಗೆ ಹೊಡೆಯುವುದು, ಪೀಡಿಸುವುದು, ಇನ್ನಿತರ ಹಿಂಸೆಗಳನ್ನು ಕೊಡುವುದನ್ನು ಹೆಂಡತಿ ಸಹಿಸಿಕೊಳ್ಳುತ್ತಾಳೆಂದು ಆತನಿಗೆ ತಿಳದರೆ ಸಾಕು, ಆತ ಆಗಾಗ ಆಕೆಯ ಮೇಲೆ ಹಿಂಸೆ ನಡೆಸುತ್ತಿರುತ್ತಾನೆ. ಪದೇ-ಪದೇ ಹಿಂಸಿಸುವುದು ಸುಲಭದ ಮಾರ್ಗವಾಗಿ ಬಿಡುತ್ತದೆ. ಹೆಣ್ಣಿನ ದೃಷ್ಟಿಯಲ್ಲಿ ಹೆಂಡತಿಗೆ ಗಂಡ ಹೊಡೆಯುವುದು 'ಸಹಜ'ವೆಂಬ ಮನಃಸ್ಥಿತಿಗೆ ತಲುಪುವುದು ಪುರುಷ ಪ್ರಧಾನತೆ'ಯ ಅಧಿಕಾರ ನೆಲೆಯೇ ಆಗಿದೆ. ಹೆಣ್ಣಿನ ಮೇಲೆ ನಡೆಯುತ್ತಿರುವ ಹಿಂಸೆಗಳನ್ನು ಹೊರಗೆಡಹಬಾರದೆನ್ನುವುದು ಆಕೆ ಹೊರ ಪ್ರಪಂಚ ಸಂಪರ್ಕ ಕಳೆದುಕೊಳ್ಳುವೆನೆಂಬ ನಂಬಿಕೆ, ಭಯ, ಆತಂಕ ಆಕೆಗೆ ಕಾಡದೇ ಇರದು. ಸಮಾಜ ನಿರೀಕ್ಷೆಯು ಇದೇ ಆಗಿದೆ.



ಸುನೀತಾಳ ಪ್ರಸಂಗವೊಂದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಸುನೀತಾ ಬಿ.ಇ. ಓದಿರುವ ಹೆಣ್ಣುಮಗಳು. ಸದ್ಯ ಗೋವಾದ ಕಂಪನಿಯೊಂದರಲ್ಲಿ ಕೆಲಸ ಮಾಡುತ್ತಿದ್ದಾಳೆ. ಮದುವೆಯ ಪ್ರಸ್ತಾಪ ಬಂದಾಗ ಆಕೆಯ ಸೋದರತ್ತೆ ಮಗನಿಗೆ ಕೊಡುವುದಾಗಿ ಪೋಷಕರು ನಿರ್ಧರಿಸುತ್ತಾರೆ. ತವರಿನ ಸಂಬಂಧ ಉಳಿಸಿಕೊಳ್ಳಬೇಕೆಂಬುದು ತಾಯಿಯ ಆಸೆ. ಸುನೀತಾ ಒಬ್ಬಳೇ ಮಗಳಾದ್ದರಿಂದ ಆಸ್ತಿ ಎಲ್ಲವೂ ಅವಳಿಗೆ ಬರುವುದೆಂಬ ಆಸೆ ಹಾಗೂ ಒಬ್ಬಳೇ ತಂಗಿ ಇದ್ದು, ಆಕೆಯ ಮೇಲಿನ ಪ್ರೀತಿಗಾಗಿ ಅಣ್ಣನೂ ಒಪ್ಪಿಗೆ ನೀಡಿದ. ಎಲ್ಲರೂ ಒಪ್ಪಿ ಮದುವೆ ತಯಾರಿಗೆ ಮುಂದಾದರು. ಯಾರೊಬ್ಬರೂ ಸುನೀತಾಳ ಒಪ್ಪಿಗೆ ಕೇಳಲಿಲ್ಲ. ಕೊನೆಗೆ ಮದುವೆಯೂ ಆಯಿತು. ಈಗ ಸುನೀತಾ ಗೋವಾದಲ್ಲಿದ್ದರೆ, ಗಂಡ ಹಳ್ಳಿಯಲ್ಲಿದ್ದಾರೆ. ಇಬ್ಬರ ನಡುವೆ ಯಾವುದೇ ಸೌಹಾರ್ದ ಸಂಬಂಧವಿಲ್ಲ. ಇಂದಿಗೂ ಮದುವೆ ಎಂಬುದು ಮದುಮಕ್ಕಳ ಆಯ್ಕೆಯಾಗಿಲ್ಲ. ಅದು ಕುಟುಂಬದ ಆಯ್ಕೆಯಾಗಿದೆ. ಹಿರಿಯರು ಸಮ್ಮತಿಸಿದ ಮದುವೆಗೆ ಹೆಚ್ಚಿನ ಗೌರವವನ್ನು ಸಮಾಜ ನೀಡದಿರುವುದನ್ನು ಕಾಣುತ್ತೇವೆ. ಇದಲ್ಲದೆ, ಮರ್ಯಾದಾ ಹತ್ಯೆಗಳು ಇತ್ತೀಚೆಗೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿವೆ. ಆದರೆ ಕೆಲವು ಮಾತ್ರ ಪತ್ರಿಕೆಯಲ್ಲಿ ವರದಿಯಾಗುತ್ತಿವೆ ಅಷ್ಟೆ.

ಕ್ಷೇತ್ರಕಾರ್ಯದ ಅವಧಿಯಲ್ಲಿ ಮಹಿಳೆಯರನ್ನು ಸಂದರ್ಶಿಸಲಾಗಿ, ಅವರಿಂದ ದೊರೆತ ಮಾಹಿತಿಯಂತೆ 'ವರನ ಆಯ್ಕೆಗೆ ವಿರೋಧ' ವ್ಯಕ್ತಪಡಿಸಿರುವುದರ ಕುರಿತು ಕೇಳಲಾದ ಪ್ರಶ್ನೆಗೆ ಶೇ. ೩೭.೩ರಷ್ಟು ಮಹಿಳೆಯರು 'ಹೌದು' ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಶೇ. ೬೨ರಷ್ಟು 'ಇಲ್ಲ' ಎನ್ನುವವರು ಹೆತ್ತವರ, ಒಡಹುಟ್ಟಿದವರ ಒತ್ತಾಯಕ್ಕೆ, ಬೆದರಿಕೆಗೆ, ಒಳಸಂಬಂಧದ ಕಾರಣಗಳಿಂದಾಗಿ ಅವರು ಹೇಳಿದ ವರನನ್ನೇ ಮದುವೆಯಾಗಿರುವುದಾಗಿ ತಿಳಿಸಿದ್ದಾರೆ. ಇದರಿಂದಾಗಿ ಮುಂಬರುವ ದಿನಗಳಲ್ಲಿ ಗಂಡನ ಮನೆಯಲ್ಲಿ ಏನೇ ಸಮಸ್ಯೆಗಳುಂಟಾದರೂ, ಅಂತಹ ತಾಪತ್ರಯಗಳಿಗೆ ಹೆತ್ತವರು ಸಹಾಯ ಮಾಡಬಲ್ಲರೆಂಬ ನಂಬಿಕೆಯಿಂದ ವರನ ಆಯ್ಕೆಗೆ ವಿರೋಧ ವ್ಯಕ್ತಪಡಿಸಿಲ್ಲದಿರುವುದು ಒಂದಾದರೆ, ಕೆಲವರು ಹೆತ್ತವರ ಒತ್ತಾಯಕ್ಕೆ ವಿವಾಹವಾಗಿ ಜೀವನಪರ್ಯಂತ ಮಾನಸಿಕವಾಗಿ ಹಿಂಸೆ ಅನುಭವಿಸುತ್ತಿರುವುದಾಗಿ ತಿಳಿಸಿರುವುದು ಕಂಡುಬಂದಿದೆ.

ಪುರುಷ ಸಂಸ್ಕೃತಿ ಸದಾ ತನ್ನ ನಿರ್ದೇಶನದಂತೆ ಎಲ್ಲವೂ ನಡೆಯಬೇಕೆಂದು ಬಯಸುತ್ತದೆ. ಇತ್ತೀಚೆಗೆ ಪತ್ರಿಕೆಯೊಂದರಲ್ಲಿ ಬಂದ ಸುದ್ದಿಯ ಪ್ರಕಾರ ಹಿರಿಯರು ಹೇಳಿದ ವರನನ್ನು ಒಪ್ಪಲಿಲ್ಲ ಮತ್ತು ತಾನು ಪ್ರೀತಿಸಿದ ಹುಡುಗನನ್ನೇ ಮದುವೆಯಾಗುವುದಾಗಿ ಹೇಳಿದ ಕಾರಣಕ್ಕೆ ಹುಡುಗಿಯೊಬ್ಬಳನ್ನು ಕೊಲೆ ಮಾಡಲಾಯಿತಂತೆ. ಇಂಥ ಪ್ರಕರಣಗಳು ಸಾಕಷ್ಟಿವೆ. ಮನೆತನದ ಗೌರವ, ಪ್ರತಿಷ್ಠೆ ಅಂತೆಲ್ಲಾ ಹೆಣ್ಣಿಗೆ ಕನಸುಗಳೇ ಇಲ್ಲದ ಒತ್ತಾಯದ ಜೀವನಕ್ರಮವಾಗಿದೆ. ಹರಿಯಾಣದ 'ಖಾಪ್' ಪಂಚಾಯತ್‌ಗಳ ತೀರ್ಪುಗಳು ಅತ್ಯಂತ ಅಮಾನುಷವಾದುವು. ಹೆಣ್ಣುಮಕ್ಕಳನ್ನು ಇನ್ನಿಲ್ಲದಂಥ ಹೀನ ಪರಿಸ್ಥಿತಿಗೆ ಅವು ಒಳಗಾಗುವಂತೆ ಮಾಡುತ್ತಿವೆ.

ಪಿತೃಪ್ರಧಾನ ಮೌಲ್ಯಗಳು ಹೆಣ್ಣಿನ ಬದುಕುವ ಹಕ್ಕನ್ನೂ ಕಸಿದುಕೊಳ್ಳುವ ಹುನ್ನಾರಗಳನ್ನು ರೂಪಿಸುತ್ತಲೇ ಇರುತ್ತವೆ. ಗಂಡ-ಹೆಂಡತಿ ಹೊಂದಾಣಿಕೆ ವಿಷಯದಲ್ಲೂ ಸಾಮಾಜೀಕರಣದ ಪಾತ್ರ ಮುಖ್ಯವಾಗಿದೆ. ಸಮಾಜ ಹೆಣ್ಣಿಗೆ ಕಡ್ಡಾಯ ನಿರ್ಬಂಧಗಳನ್ನು ಹೇರಿದೆ. ಗಂಡನ ತಪ್ಪುಗಳನ್ನು ಕ್ಷಮಿಸುವ ಸಮಾಜ ವ್ಯವಸ್ಥೆ ಹೆಣ್ಣಿಗೆ ತನ್ನದೇ ಆದ ಯಾವುದೇ ಸ್ವಾತಂತ್ರ್ಯವನ್ನೂ, ಹಕ್ಕನ್ನೂ ನೀಡಿಲ್ಲ. ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠವೆಂಬ ಗುಣಗಳಿಂದ ನೋಡುತ್ತಾ ಬಂದಿದೆ. ಗಂಡ ಏನೇ ಮಾಡಿದರೂ, ಯಾವ ಹೆಣ್ಣಿನೊಂದಿಗೆ ಓಡಾಡಿಕೊಂಡಿದ್ದರೂ, ಮಾತಾಡಿದರೂ ಹೆಂಡತಿ ಕೇಳಬಾರದೆನ್ನುವುದು ಪುರುಷನ ಹಕ್ಕು, ಅಧಿಕಾರವನ್ನು ತೋರಿಸುತ್ತದೆ. ತನಗೆಷ್ಟೇ ಹಿಂಸೆ-ದೌರ್ಜನ್ಯಗಳನ್ನೆಸಗುತ್ತಿದ್ದರೂ ಸಹಿಸಿಕೊಂಡು ಆತನೊಂದಿಗೆ ಬಾಳಬೇಕೆಂಬ ನಿಯಮ ಹೆಣ್ಣಿಗೆ ಮಾತ್ರ ನೀಡಿದೆ. ಅಂತಹ ಹೆಣ್ಣನ್ನು ಸಮಾಜ

# ಗಾಂಧಿ ಬಿತ್ತಿದ ಬೀಜ




ಗಾಂಧಿ...
ನೀ ಬಿತ್ತಿದ ಸತ್ಯ ಅಹಿಂಸೆ
ಮೊಳಕೆ ಒಡೆಯುತ್ತಿದೆ ಸಾಗರದಾಚೆ
ಕೋಲೂರಿ, ತುಂಡುಬಟ್ಟೆ ಉಟ್ಟು
ನಡೆದ ಸಪ್ಪಳದ ಶಬ್ದ
ಅಲೆ ಅಲೆಯಾಗಿ ತೇಲುತ್ತಿದೆ
ಗಗನದಲ್ಲಿ

ನರನಾಡಿಗಳ ಉಸಿರಾಗಿದ್ದ
ಮಾನವತೆ ನೆಲಕಚ್ಚಿದ ಮೇಲೆ
ಅಸ್ತಿತ್ವದ ಹುಡುಕಾಟಕ್ಕಾಗಿ
ಆಸರೆಯಾಗಿದ್ದೀಯ
ಬಿಸಿಲುಕುದುರೆಯಾಗಿ

ಮತೀಯ ಕೆಸರಿನೊಳಗೆ ಹೂತು
ಕ್ರೋಮಘೋಮುಗಳಂತೆ ಬಡಿದಾಡಿ
ತಿಳಿಗೆಡಲ ರಾಡಿ ಎಬ್ಬಿಸಿದವರಿಗೆ
ನೆನಪಾಗುತ್ತಿದ್ದೀಯ
ದುರ್ವಾಸನೆ, ದುರ್ನಾತ ರಾಚಿದಾಗ

ಭಾರತಾಂಬೆಯ ಮೈಗೆ ಅಂಟಿದ
ಧೂಳಕಣ ಗುಡಿಸಲು ಪೊರಕೆ ಇದೆ
ಮೈಗಂಟಿದ ಕೆಸರ ತೊಳೆಯಲು ಗಂಗಾಜಲ ಇದೆ
ಆದರೆ... ಆದರೆ...
ಹೃದಯಕ್ಕೆ ಅಂಟಿದ ಕಿಲುಬು ಕತ್ತರಿಸಲು
ತ್ರಿಶೂಲ ಮಸೆದು ಕತ್ತರಿಸಿದರೂ
ಹೋಗಲೊಲ್ಲದು ಕಿಲುಬು

ಬುದ್ಧಬಸವಾದಿಗಳ ಮಾನವತೆಯ ತತ್ವ
ಅಂಬೇಡ್ಕರ್ ಕುವೆಂಪುವಿನ
ವೈಚಾರಿಕತೆಯ ಸಸಿ
ಮರವಾಗಿ, ನೆರಳಾಗಿ, ಬಿಳಲಾಗಿ ಬೆಳೆದು
ಕಿಲುಬು ತೊಳೆಯುವ ತಂಗಾಳಿಯಾದೀತು
ಕೆಸರಿನೊಳಗೆ ಹೂತ ಜಂತುಗಳಿಗೆ

**ಡಾ|| ಜೆ. ಸೋಮಣ್ಣ**
ಉಪನ್ಯಾಸಕರು, ವಿಜಯಲಕ್ಷ್ಮಿ ಪದವಿ ಪೂರ್ವ ಕಾಲೇಜು
ಬಾಳೆಲೆ – ೫೭೧ ೨೧೯, ಕೊಡಗು ಜಿಲ್ಲೆ

ಮಾನ್ಯ ಮಾಡುತ್ತದೆ. ಅದನ್ನು ಮೀರಿದರೆ 'ಕೆಟ್ಟ ಹೆಂಗಸು' ಎಂದು ಹೇಳುವುದಿದೆ. ಸಮಾಜ ಕೌಟುಂಬಿಕ ಹಿಂಸೆಯನ್ನು ವೈಯಕ್ತಿಕವಾಗಿ ನೋಡಿದೆಯೇ ವಿನಾ ಅದೊಂದು ಸಾಮಾಜಿಕ ಸಮಸ್ಯೆಯೆಂದು ಪರಿಗಣಿಸಿಲ್ಲ. ಹಾಗಾಗಿ ಆಕೆಯ ಮೇಲೆ ನಿರಂತರವಾಗಿ ಹಿಂಸೆ–ದೌರ್ಜನ್ಯಗಳು ನಡೆಯುತ್ತಲೇ ಇವೆ. ಇದಕ್ಕೊಂದು ಉದಾಹರಣೆ ಎಂದರೆ ಇತ್ತೀಚೆಗೆ ಸಿನಿಮಾ ನಟ 'ದರ್ಶನ್' ಪ್ರಕರಣ. ಎಷ್ಟೋ ವರ್ಷಗಳಿಂದ ನೀಡುತ್ತಿದ್ದ ಹಿಂಸೆ–ದೌರ್ಜನ್ಯವನ್ನು ಆತನ ಹೆಂಡತಿ ವಿಜಯಲಕ್ಷ್ಮೀ ಸಿನಿಮಾರಂಗದಲ್ಲಿ ಆತನ ಇಮೇಜ್ ಹಾಳಾಗಬಾರದೆಂದು ತಾಳ್ಮೆಯಿಂದ ಸಹಿಸಿಕೊಂಡು ಬಂದಿದ್ದಳು. ಅದು ಮಿತಿ ಮೀರಿದಾಗಲಷ್ಟೇ ಆಕೆ ಪೊಲೀಸ್ ಠಾಣೆಯ ಮೆಟ್ಟಿಲೇರಿದ್ದಳು. "ಸ್ತ್ರೀ ಶೋಷಣೆಯ ಮೂಲಗಳು ಸ್ತ್ರೀಯ ಮನಸ್ಸಿನಲ್ಲಿ, ಸಾಮಾಜಿಕ ಸಂಸ್ಥೆಗಳಲ್ಲಿ, ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಅಡಗಿವೆ. ಈ ಎಲ್ಲ ಮೂಲಗಳನ್ನು ಶೋಧಿಸಿ, ನಾಶಪಡಿಸುವ ಮೂಲಕ ಮಾತ್ರ ಸ್ತ್ರೀ ಶೋಷಣೆಯನ್ನು ಎದುರಿಸಲು ಸಾಧ್ಯ" ಎನ್ನುವುದು ಜ್ಯಾಗರಳ ಅಭಿಪ್ರಾಯ. ಹೀಗಾಗಿಯೇ 'ಹಿಂಸೆ'ಯ ಸಾಮಾಜೀಕರಣದ ಹಿನ್ನೆಲೆ ಇಟ್ಟುಕೊಂಡು ವಿಜಯಲಕ್ಷ್ಮೀ ಮೇಲಾಗಿರುವ ಕೌಟುಂಬಿಕ ದೌರ್ಜನ್ಯವನ್ನು ಮುಚ್ಚಿಹಾಕಲಾಯಿತು. ಇದರ ವಿರುದ್ಧ ಸಾರ್ವಜನಿಕ ಪ್ರತಿಭಟನೆ ನಡೆಯಬೇಕು. ಆಗ ಇಂಥ ಪ್ರಕರಣಗಳು ಮರುಕಳಿಸಲಾರವು. ನ್ಯಾಯವಾಗಿ ನೋಡಿದರೆ, 'ದರ್ಶನ್'ಗೆ ಭಾರತೀಯ ದಂಡಸಂಹಿತೆ ಸೆಕ್ಷನ್ ೩೦೭ (ಕೊಲೆಯತ್ನ), ೪೯೮ಎ (ಹಿಂಸೆ ನೀಡುವುದು), ೩೨೩ (ಹಲ್ಲೆ ನಡೆಸಿ ಗಾಯ ಗೊಳಿಸುವುದು), ೫೦೬ಬಿ ( ಕ್ರಿಮಿನಲ್ ಉದ್ದೇಶದ ಕೃತ್ಯ ) ಮತ್ತು ಶಸ್ತ್ರಾಸ್ತ್ರ ಕಾಯ್ದೆ ಅನ್ವಯ ಪ್ರಕರಣವನ್ನು ದಾಖಲಿಸಲಾಗಿದೆ. ಈ ಎಲ್ಲ ಆರೋಪಗಳು ಸಾಬೀತಾದರೆ ಕನಿಷ್ಠ ಹತ್ತು ವರ್ಷಗಳ ಕಾಲ ಜೈಲು ಶಿಕ್ಷೆಯಾಗುತ್ತದೆ. ಆದರೆ ಕಷ್ಟಪಟ್ಟು ಬೆಳೆದಿರುವ ದರ್ಶನ್ ಭವಿಷ್ಯಕ್ಕೆ ತೊಂದರೆ ಆಗಬಾರದು ಎಂದು ಮಾತನಾಡಿದವರೇ ಹೆಚ್ಚಾಗಿದ್ದರೇ ವಿನಾ ವರ್ಷಾನುಗಟ್ಟಲೆ ಗಂಡ ನೀಡಿದ ಕಷ್ಟಗಳನ್ನು ಸಹಿಸಿದ ಹೆಣ್ಣು ಮಗಳೊಬ್ಬಳು ಸಾವಿನ ದವಡೆಗೆ ಹೋಗಿಬಂದಿದ್ದರ ಬಗ್ಗೆ ಚರ್ಚೆಯೇ ಆಗಲಿಲ್ಲ; ವಿಜಯಲಕ್ಷ್ಮೀ ಸಹಾಯಕ್ಕೆ ಯಾರೂ ಬರಲಿಲ್ಲ. ಇದು ವಿಜಯಲಕ್ಷ್ಮೀಯೊಬ್ಬಳದೇ ಕತೆಯಲ್ಲ. ಇಂಥ ಸಂಕಷ್ಟದ ಪರಿಸ್ಥಿತಿಯನ್ನು ಅನೇಕ ಮಹಿಳೆಯರು ಎದುರಿಸುತ್ತಿದ್ದಾರೆ. ಹಿಂಸೆಗೆ ಕೊನೆಯಿಲ್ಲ ಎಂಬಂತೆ ದಿನೇ–ದಿನೇ ಪ್ರಕರಣಗಳು ಹೆಚ್ಚುತ್ತಿವೆ. ಪುರುಷಶಾಹಿ ವ್ಯವಸ್ಥೆ ಮಹಿಳೆಯರ ಮನಃಸ್ಥಿತಿಯನ್ನು ಎಂದಿಗೂ ಅರ್ಥೈಸಿಕೊಳ್ಳದಿರುವುದು ಮಹಿಳಾ ಬದುಕಿನ ದುರಂತಕ್ಕೆ ಕಾರಣವಾಗಿದೆ.

ಇತ್ತೀಚಿನ ದಿನಗಳಲ್ಲಿ ಹೆಣ್ಣುಮಕ್ಕಳು ಹಾಗೂ ಮಹಿಳೆಯರು ವಿದ್ಯಾವಂತ ಸಮುದಾಯದಲ್ಲಿ ತಕ್ಷಣವೇ ದೌರ್ಜನ್ಯದ ವಿರುದ್ಧ ಎಚ್ಚೆತ್ತುಕೊಂಡು, ಮಹಿಳಾ ಪೊಲೀಸ್ ಠಾಣೆ, ನ್ಯಾಯಾಲಯ, ಸ್ವಯಂ ಸೇವಾ ಸಂಸ್ಥೆ, ಆಶ್ರಯ ತಾಣಗಳಿಗೆ ತೆರಳಿ ಹಿಂಸೆ ನಡೆಸುವವರ ವಿರುದ್ಧ ಮುಖಾಮುಖಿ ಹೋರಾಡುವುದು ಸ್ವಲ್ಪಮಟ್ಟಿಗೆ ನಡೆಯುತ್ತಿದೆ. ಕೌಟುಂಬಿಕ ಹಿಂಸೆ 'ಅಪರಾಧ' ಎಂಬ ಭಾವ ಮೂಡುತ್ತಿದೆ. ಈ ಧೈರ್ಯ ಅನಕ್ಷರಸ್ಥ, ಅಸಹಾಯಕ ಹೆಣ್ಣುಮಕ್ಕಳಲ್ಲಿ ಬರಬೇಕಾಗಿರುವುದು ಅತ್ಯಗತ್ಯ. ಅದಕ್ಕೆ ಸಾರ್ವಜನಿಕರ ನೆರವು, ಸ್ವಯಂಸೇವಾ ಸಂಸ್ಥೆಗಳ ಮಾರ್ಗದರ್ಶನ ಅಗತ್ಯವಿದೆ.

ಗಂಡ ಹೆಂಡತಿಗೆ ಹೊಡೆಯುವುದು, ಪೀಡಿಸುವುದು, ಇನ್ನಿತರ ಹಿಂಸೆಗಳನ್ನು ಕೊಡುವುದನ್ನು ಹೆಂಡತಿ ಸಹಿಸಿಕೊಳ್ಳುತ್ತಾಳೆಂದು ಆತನಿಗೆ ತಿಳಿದರೆ ಸಾಕು, ಆತ ಆಗಾಗ ಆಕೆಯ ಮೇಲೆ ಹಿಂಸೆ ನಡೆಸುತ್ತಿರುತ್ತಾನೆ. ಪದೇ ಪದೇ ಹಿಂಸಿಸುವುದು ಸುಲಭದ ಮಾರ್ಗವಾಗಿ ಬಿಡುತ್ತದೆ. ಹೆಣ್ಣಿನ ದೃಷ್ಟಿಯಲ್ಲಿ ಹೆಂಡತಿಗೆ ಗಂಡ ಹೊಡೆಯುವುದು 'ಸಹಜ'ವೆಂಬ ಮನಃಸ್ಥಿತಿಗೆ ತಲುಪುವುದು ಪುರುಷ ಪ್ರಧಾನತೆಯ ಅಧಿಕಾರ ನೆಲೆಯೇ ಆಗಿದೆ. ಹೆಣ್ಣಿನ ಮೇಲೆ ನಡೆಯುತ್ತಿರುವ ಹಿಂಸೆಗಳನ್ನು ಹೊರಗೆಡಹಬಾರದೆನ್ನುವುದು ಆಕೆ ಹೊರ ಪ್ರಪಂಚ ಸಂಪರ್ಕ ಕಳೆದುಕೊಳ್ಳುವೆನೆಂಬ ನಂಬಿಕೆ, ಭಯ, ಆತಂಕ ಆಕೆಗೆ ಕಾಡದೇ ಇರದು. ಸಮಾಜ ನಿರೀಕ್ಷೆಯು ಇದೇ ಆಗಿದೆ.

ಸಮಾಲೋಚನೆ / ಸಲಹಾ ಕೇಂದ್ರಗಳಿಗೆ ಭೇಟಿ ನೀಡಿರುವುದರ ಬಗ್ಗೆ ಸಂದರ್ಶಿತ ಮಹಿಳೆಯರನ್ನು ಕೇಳಿದಾಗ ಶೇ. ೫ರಷ್ಟು ಮಹಿಳೆಯರಿಂದ ಸಿಕ್ಕ ಉತ್ತರ 'ಹೌದು' ಎಂದಾಗಿತ್ತು. ಕುಟುಂಬದವರಿಗೆ ತಿಳಿಸಿ ಹೋದರೆ ಕಳಿಸುವುದಿಲ್ಲವೆಂದು, ಹೇಳದೆ ಹೋಗಿರುವುದಾಗಿ ತಿಳಿಸಿರುತ್ತಾರೆ. ಶೇ. ೯೫ರಷ್ಟು ಕಾರಣ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಮಹಿಳೆಯರು ಸಾಂತ್ವನದಂತಹ



ಸಂಸ್ಥೆಗಳಿಗೆ ಭೇಟಿ ನೀಡುವುದು ತಪ್ಪು ಎಂಬ ಭಾವನೆ ಮೂಡಿರುವುದು. ಹೋಗುವ ಧೈರ್ಯ ಮಾಡದೆ ಇರುವುದರಿಂದ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಲು ಹಿಂಜರಿಯುತ್ತಿದ್ದು, ಪ್ರಯತ್ನ ಮಾಡಿಲ್ಲವೆಂದು ತಿಳಿಸಿರುತ್ತಾರೆ. ಪ್ರಸ್ತುತ ಸಮಾಲೋಚಕರ, ಸಮಾಲೋಚನೆ / ಸಲಹಾ ಕೇಂದ್ರಗಳ ನೆರವು, ಸಾಂತ್ವನ ನೊಂದ ಜೀವಗಳಿಗೆ ಅಗತ್ಯವಾಗಿ ಸಿಗಬೇಕಾದ ಜರೂರು ಇದೆ. ಇದರಿಂದ ಮಹಿಳೆಯರಿಗೆ ಮನಸ್ವಾಸ್ಥ್ಯವೂ ಸಿಗುವುದು. ಮನಸ್ಸನ್ನು ಹಿಡಿತದಲ್ಲಿಡಲೂ ಸಾಧ್ಯವಾಗುವುದು. ಅಂದರೆ ಇವು 'ಆತ್ಮಹತ್ಯೆ'ಯಂತಹ ಕೃತ್ಯದಿಂದ ದೂರವಿರಿಸುವುದೇ ಆಗಿವೆ.

ಪುರುಷ ಸಂಸ್ಕೃತಿಯು ತನ್ನ ಪ್ರಾಬಲ್ಯತೆಯ ಪರ ವಾದಿಸುತ್ತ, ಪುರುಷ ಪ್ರಧಾನತೆಯನ್ನು ಎತ್ತಿತೋರಿಸುತ್ತದೆಯೇ ಹೊರತು ಹೆಣ್ಣಿಗಾಗುತ್ತಿರುವ ಅನ್ಯಾಯದ ಕುರಿತಾಗಿ ಯೋಚಿಸುತ್ತಿಲ್ಲ. ಹೆಣ್ಣು ಎಂದರೆ ಪುರುಷ ಕೊಡುವ ಕಷ್ಟಗಳನ್ನೆಲ್ಲಾ ಅನುಭವಿಸಲೇಬೇಕೆಂಬ ಆದರ್ಶ ಮಾದರಿಯ ಕುರಿತು ಹೇಳುತ್ತದೆ. ಕುಟುಂಬದಲ್ಲಿ ಹಿರಿಯರಿಂದ ಹಿಡಿದು ಕಿರಿಯರವರೆಗೂ ಸಮಸ್ಯೆಗಳು ಸ್ತ್ರೀತ್ವದ ಗುಣಗಳೆಂದು ಸ್ವೀಕರಿಸಲೇ ಬೇಕೆಂಬ ಒತ್ತಾಯದೊಂದಿಗೆ ತನಗಾಗುತ್ತಿರುವ ಅನ್ಯಾಯವನ್ನು ನಾಲ್ಕು ಗೋಡೆಗಳ ಮಧ್ಯೆಯೇ ಸ್ವೀಕರಿಸುತ್ತಲೇ ಅನುಭವಿಸುತ್ತಾಳೆ. ಆರ್ಥಿಕವಾಗಿ ನಾಲ್ಕು ಕಾಸು ಗಳಿಕೆ ಮಾಡಿದ ಅವಳು ಯಾರಿಗೂ ಹೆದರಳು; ಇತರ ಜನರ ಸಂಪರ್ಕದಿಂದ ಅವಳಿಗೆ ಜ್ಞಾನಾರ್ಜನೆ ಶಕ್ತಿ ಹೆಚ್ಚುತ್ತದೆಂಬ ಮನಃಸ್ಥಿತಿಗೆ ಒಳಗಾಗಿ ಹೆಣ್ಣನ್ನು ಆರ್ಥಿಕವಾಗಿ ದುಡಿಯಲು ಬಿಡದೇ ಹಿಂಸಿಸುವುದು ಕಂಡುಬರುತ್ತದೆ.

ಹೀಗಾಗಿ ಮಹಿಳೆಗೆ ಪ್ರತಿಭಟನೆ ಎಂಬುದು ಮರೆಯಾದಂತೆ ಭಾಸವಾಗುತ್ತದೆ. ಮುಕ್ತವಾಗಿ ಹಿಂಸೆಯನ್ನು ಒಪ್ಪಿಕೊಳ್ಳುವಂತೆ ಪ್ರೋತ್ಸಾಹಿಸುತ್ತದೆ. ಪುರುಷ ಪ್ರಧಾನತೆ ಸ್ವರೂಪವನ್ನು ರೂಪಿಸಿರುತ್ತದೆ. ಅನಿವಾರ್ಯವಾಗಿ ಕಾನೂನಿನ ಮೊರೆಹೋದರೆ, ಅಲ್ಲಿನ ವ್ಯವಸ್ಥೆ ಕೂಡ 'ಹೊಂದಾಣಿಕೆಯ' ಕುರಿತಾಗಿಯೇ ಹೇಳುತ್ತದೆ. ಪುರುಷನ ದಬ್ಬಾಳಿಕೆಯನ್ನು ನಿಯಂತ್ರಣದಲ್ಲಿಡುವಂಥ ಯಾವ ವ್ಯವಸ್ಥೆಯೂ ಕಾಣದಂತಾಗಿದೆ. ಹೆಣ್ಣುಮಕ್ಕಳು ಸಮಾಜದಲ್ಲಿ ಗೌರವದಿಂದ ಬಾಳಬೇಕೆಂದರೆ ಗಂಡನ ಜೊತೆ ಗಂಡ ನೀಡುವ ಹಿಂಸೆ ಸಹಿಸಿಕೊಂಡು 'ರಾಜಿ'ಯಾಗುವ ಮೂಲಕ ಬಾಳ್ವೆ ಮಾಡಬೇಕೆಂಬುದು ಸಿಂಧಗಿ ನ್ಯಾಯಾಲಯದ ಹಿರಿಯಶ್ರೇಣಿ ನ್ಯಾಯಾಧೀಶರೊಬ್ಬರ ಅಭಿಪ್ರಾಯ. ಕಾರಣ, ಹೆಣ್ಣುಮಕ್ಕಳು ಗಂಡನ ಮನೆಬಿಟ್ಟು ತವರಿನಲ್ಲಿಯೋ ಅಥವಾ ಬೇರೆ ಮನೆಮಾಡಿ ಬದುಕುತ್ತಿದ್ದರೆ ಅವರನ್ನು ಸಮಾಜ ಕೆಟ್ಟದೃಷ್ಟಿಯಿಂದಲೇ ನೋಡುತ್ತದೆ. ಅವರು ಒಳ್ಳೆಯವರೇ, ಆದರೆ ಅವರನ್ನು ನೋಡುವ ರೀತಿ ಮಾತ್ರ ಕಾಮುಕತೆ ದೃಷ್ಟಿಯೇ ಆಗಿರುತ್ತದೆ. ಕಾನೂನು ಮಹಿಳೆಯರ ಪರವಾಗಿದ್ದಾಗಲೂ ಕಾನೂನನ್ನು ಅನುಷ್ಠಾನಗೊಳಿಸುವವರು ಹೆಣ್ಣಿನ 'ಒಳಿತಿಗಾಗಿ' ಎಂಬ ಲೇಬಲ್‌ನಲ್ಲಿ ಹೆಣ್ಣು ಈಗ ಇರುವ ಕೌಟುಂಬಿಕ ಚೌಕಟ್ಟಿನಲ್ಲಿಯೇ ಇರುವುದು ಸೂಕ್ತ ಎಂಬ ಅಭಿಪ್ರಾಯವನ್ನು ನೀಡುತ್ತಾರೆ. ಈ ಅಭಿಪ್ರಾಯಗಳು ಕೂಡ ಅವರು ಒಳಗಾದ ಸಾಮಾಜೀಕರಣದ ಫಲವೇ ಆಗಿದೆ. ಸಾಮಾಜೀಕರಣದ ಸ್ವರೂಪ ಬದಲಾಗದೆ ಮಹಿಳೆಯನ್ನು ವ್ಯಕ್ತಿಯಾಗಿ ನೋಡುವ ಮಾನವೀಯತೆ ರೂಪುಗೊಳ್ಳಲಾಗದು.

**ಡಾ॥ ರೇಣುಕಾ ಎಸ್. ಮಂದ್ರೂಪ**
ಅತಿಥಿ ಉಪನ್ಯಾಸಕರು, ಮಹಿಳಾ ಅಧ್ಯಯನ ವಿಭಾಗ
ಕ.ರಾ.ಮ.ವಿವಿ., ವಿಜಯಪುರ

"ಸಾಹಿತ್ಯ ದೊಡ್ಡದು. ಆದರೆ ಸಾಹಿತ್ಯಕ್ಕಿಂತ ಬದುಕು ದೊಡ್ಡದು. ಉತ್ತಮ ಲೇಖಕ, ಸಾಹಿತಿ ಅಥವಾ ಕವಿಯಾಗುವುದಕ್ಕೆ ಮುನ್ನ ಉತ್ತಮ ವ್ಯಕ್ತಿಯಾಗುವತ್ತ ಗಮನ ಹರಿಸಬೇಕು."

# ಎಮ್ಮವರಿಗೆ ಸಾವಿಲ್ಲ...



**ಕಂ**ಬನಿಯ ತೇವದಲಿ ಲೇಖನಿಗಿಂಬು ನೀಡಿ, ಮನದಿ ತುಂಬಿದ ದುಮ್ಮಾನವನ್ನು ಹಗುರಾಗಿಸಿಕೊಳ್ಳುವ ವಿಧಾನ ತಿಳಿಯದೆ, ಬಿಸಿಯುಸಿರಿನಿಂದ ಬಂದ ನೆನಪನ್ನು ದಾಖಲಿಸುವ ಪ್ರಯತ್ನದತ್ತ ಡಾ॥ ಎಂ. ಎಂ. ಕಲಬುರ್ಗಿಯವರನ್ನು ನೆನೆದಾಗ ನಮಗೆ ಗೊತ್ತಿಲ್ಲದ ಹಾಗೆ ನಮ್ಮ ಕಣ್ಣಾಲಿಗಳು ತೇವಗೊಳ್ಳುತ್ತವೆ. ಗುರುಗಳ ಗುರು, ಹಿರಿಯರ ಹಿರಿಯ, ಶರಣರಂತೆ ಸತ್ಯ ಶುದ್ಧ ಕಾಯಕ ಮಾಡಿ, ಹೊರ-ಒಳಗೊಂದಾಗಿ ಬಸವಣ್ಣನಂತೆ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯನ್ನು ರೂಢಿಸಿಕೊಂಡು, ವೈಯಕ್ತಿಕ ಪಾವಿತ್ರ್ಯದಿಂದ ಜಂಗಮ ಸಾಕ್ಷಾತ್ಕಾರ ಪಡೆದು, ಜ್ಞಾನ ದಾಸೋಹದ ಪ್ರಸಾದವನ್ನು ಕನ್ನಡದ ಮನೆ-ಮನಗಳಿಗೆ ಹಂಚಿ, 'ದೇಸಿಯ ಮಾರ್ಗದೊಳ್ ಪೋಗುವುದು ಪೊಕ್ಕು' ರಾಷ್ಟ್ರಮಟ್ಟದ ಕೀರ್ತಿಗಳಿಸಿ, ಇವರೊಬ್ಬ ಕನ್ನಡದ ವಿದ್ವಾಂಸರು! ಎನ್ನುವಂತಹ ಅದ್ಭುತ ಪಾಂಡಿತ್ಯವನ್ನು ಸಂಪಾದಿಸಿದ ಧೀಮಂತ ವ್ಯಕ್ತಿತ್ವ. ಇಂಥವರು ನಮ್ಮೊಂದಿಗೆ ಇದ್ದು, ನಮ್ಮನ್ನಗಲಿ ಈ ಆಗಸ್ಟ್ ೩೦ಕ್ಕೆ ಒಂದು ವರುಷವೆಂದು ಅವರು ಇಲ್ಲವೆಂದು ಹೇಳಲು ಬಾಯಿ ಬರುತ್ತಿಲ್ಲ. ಯಾವ ನುಡಿಯಲ್ಲಿ ಅವರ ಗೈರನ್ನು ರುಜುವಾತು ಮಾಡುವುದು ಸಾಧ್ಯವಾಗಲಾರದು.

ಒಬ್ಬ ಸಂಶೋಧಕ ತಾನು ನಿಂತ ನೆಲ ಮತ್ತು ನೆಲೆ ಎರಡನ್ನೂ ಒಟ್ಟಿಗೆ ತೆರೆದ ಕಣ್ಣಿನಿಂದ ನೋಡುವುದೇ ನಿಜವಾದ ಸಂಶೋಧನೆ. ಅಲ್ಪವಿರಾಮದಿಂದ ಪೂರ್ಣವಿರಾಮದತ್ತ ಸಾಗುವುದೇ ನಿಜವಾದ ಸಂಶೋಧನೆ ಎಂದ ಅವರು, ಸಂಸ್ಕೃತಿ-ಸಾಹಿತ್ಯವನ್ನು ನೆಲವಾಗಿಸಿಕೊಂಡು, ಇವುಗಳ ಆಳ ಅರಿವನ್ನು ನೆಲೆಯಾಗಿಸಿಕೊಂಡಿದ್ದರು. ಈ ಅರಿವಿನ ಕ್ರಿಯೆಯಲ್ಲಿ 'ಸಂಶೋಧಕನಾದವನು ಸತ್ಯಕ್ಕಾಗಿ ತಾನು ಮೊದಲು ಚಿಕ್ಕ ಚಿಕ್ಕ ಶಿಲುಬೆಗೇರಬೇಕಾಗುತ್ತದೆ ಎಂದ ಅವರು 'ಜ್ಞಾತಿ' ಜಂಗಮವಿಡಿದು ಬಸವಣ್ಣನ ಒಲವಿನಂತಾಗಿದ್ದರು. ಬಸವಣ್ಣ 'ಜ್ಞಾತಿ' ಜಂಗವನ್ನು ಒಟ್ಟುಗೂಡಿಸಿ 'ಶರಣರು' ಎಂದು, ಅದರಲ್ಲೂ ಎಲ್ಲರೂ ಅನುಭಾವಿಗಳೇ, ಅಂತಹವರ ಗುಂಪು ಕಟ್ಟಿ, ಕಾಯಕದಲ್ಲಿ ನಿರತರಾದವರು ಎಂದು ಕರೆದಿದ್ದನು. ಇವರ 'ಜ್ಞಾತಿ' ಚಲುವನ್ನು ಸಹಿಸದ 'ಜಾತಿ' ಜಂಗಮರು ಅಂದು ಹೊಟ್ಟೆ ಉರಿದುಕೊಂಡು ಕೆಂಡಕಾರಿಕೊಂಡಿದ್ದರು. ಅದು ಮುಂದೆ ಜಾತಿ ಜಂಗಮ ಶಕ್ತಿ ಕುಟಿಲ ನೀತಿಯಿಂದ ಬಸವಣ್ಣನನ್ನು ಇಲ್ಲವಾಗಿಸಿತು. ಇಂದು ನಮ್ಮ ಗುರು ಮಾದರಿ ಶಕ್ತಿ ಕಲಬುರ್ಗಿಯವರನ್ನು ಇಲ್ಲವಾಗಿಸಿತು. ಏನು ಬಸವಣ್ಣನವರು 'ಜ್ಞಾತಿ ಜಂಗಮತ್ವ'ವನ್ನು ಬೆಳೆಸಿ ಸಮತಾ ಕಲ್ಯಾಣವನ್ನು ಕಾಣಬೇಕೆಂದಿದ್ದರು. ಅಂದಿನಿಂದ ಇಂದಿನವರೆಗೂ 'ಜ್ಞಾತಿ' ಮತ್ತು 'ಜಾತಿ' ಇವುಗಳ ತಾಕಲಾಟ ಇದ್ದೇ ಇದೆ. ಜಾತಿ ಸ್ಥಾವರ. ಜಾತಿ ಜಂಗಮ-ಬೆಳಕು. ಇಂದಲ್ಲ ನಾಳೆ ಸ್ಥಾವರಕ್ಕಳಿವುಂಟು. ಆದರೆ ಆ ಜಂಗಮಕ್ಕಳಿವಿಲ್ಲ. ಸ್ಥಾವರದ ಚೆಲುವು ಹೊರಬೀಳಲು ಸಾಧ್ಯವಿಲ್ಲ. ಜಂಗಮದ ಚೆಲುವು ಕಾಲದಿಂದ ಕಾಲಕ್ಕೆ ರೂಪಾಂತರ ಪಡೆಯುತ್ತಲೇ ಇರುತ್ತದೆ. ಈ ಸತ್ಯವನ್ನು ಕಲಬುರ್ಗಿಯವರು ತಮ್ಮ ಕೊನೆಯ ಬರಹದಲ್ಲಿ "ಜಾತಿ ನಾಲ್ಕು ವಿಡಿದು ಬಂದ ಜಂಗಮವೇ ಶ್ರೇಷ್ಠ?" (ಬಸವಪಥ - ಸೆಪ್ಟಂಬರ್ - ೨೦೧೫) ಇಲ್ಲಿ ಕಾಣಿಸಿದ್ದಾರೆ. ಒಬ್ಬ ಸಂಶೋಧಕನ ಸತ್ಯದ ಸಾರ್ಥಕ್ಯ ಆರಂಭದ ಸತ್ಯ ಮತ್ತು ಅಂತಿಮ ಸತ್ಯದಲ್ಲಿ ಅಡಗಿರುತ್ತದೆ. ಆ ದಿಶೆಯಲ್ಲಿ ಏನೆಲ್ಲ ಮಾಯದ ಗೌಪ್ಯ, ಅದರಲ್ಲಿ ಅಡಗಿದೆ ಎನ್ನಬಹುದೆ? ಇದನ್ನು ಹೊರಹಾಕಿದ್ದು ಅವರು ದೊಡ್ಡ ಶಿಲುಬೆಗೇರಿದ ಅಪ್ರತಿಮರು.

ನಾಡಿನ ವೈಚಾರಿಕ ಶಿಖರವೆನಿಸಿದ ಗುರುಗಳಾದ ಎಂ.ಎಂ.ಕೆ.ಯವರು ಭೌತಿಕವಾಗಿ ನಮ್ಮೊಂದಿಗಿಲ್ಲ. ಆದರೆ ಸತ್ಯದ ಪ್ರತಿಪಾದಕರಾಗಿ, ಚಿಂತಕರೆನಿಸಿ, ಈ ನೆಲದ ಅಧ್ಯಯನಶೀಲ ಮನುಸ್ಸುಗಳಿಗೆ, ಯಾವಾಗಲೂ 'ಮಹಾ ಮಾರ್ಗದರ್ಶಿ'ಯಾಗಿ, ಕನ್ನಡ ನೆಲದ ಧೀಮಂತಶಕ್ತಿಯಾಗಿ, ನಮ್ಮೊಂದಿಗೆ ಸದಾ ವಿಜೃಂಭಿಸುತ್ತಿರುತ್ತಾರೆ. ನಾನವರನ್ನು ಸಾಂಸ್ಕೃತಿಕ ಕ್ಷಿತಿಜದ ಸಂಶೋಧನಾ ದ್ರೋಣರೆಂದುಕೊಂಡಿದ್ದೇನೆ. ಅವರ 'ಜ್ಞಾತಿ' ಸಂಬಂಧ ಕೇವಲ ನನ್ನಲ್ಲಿ ಮಾತ್ರವಲ್ಲ, ನಾಡಿನ ಎಲ್ಲ ಓದು-ಬರೆಯುವ ಮನಗಳಿಗೆ ಹಬ್ಬಿತ್ತು. ಅಂತಹ ಅದಮ್ಯ ಗುರುಭಕ್ತಿ, ನಮ್ಮಂತಹವರ ಹೃದಯದಲ್ಲಿ ಉಕ್ಕಿತ್ತು. (ಧಾರವಾಡದಲ್ಲಿ ಓದಿ ಬೆಳೆದ ನನಗೆ ಅವರ ಕುರಿತು ಅಪಾರ ಗೌರವ.) ಅವರ ಅಂತರಂಗದ ಒಂದೆರಡು ಮಾತು ಕೇಳುವ ಭಾಗ್ಯ ಕೊನೆಯ ಬಾರಿ ನನಗೆ ದಕ್ಕಿದ್ದು ಧಾರವಾಡದಲ್ಲಿ. ಕಲಬುರ್ಗಿ ಗುರುಗಳು ತುಸು ಲವಲವಿಕೆಯ ಹಿಗ್ಗಿನಲ್ಲಿದ್ದರು. ಕಲಬುರ್ಗಿಯವರೊಂದಿಗೆ ಓದು-ಬರಹ, ಸಾಂಸ್ಕೃತಿಕ ವಲಯದಿಂದ ವೈಚಾರಿಕ ಸಮಾಜದ ಏಳ್ಗೆಗಾಗಿ, ಜಂಗಮಾರ್ಥವಾಗಿ ದುಡಿದವರು ಹಲವರು. ಇವರನ್ನೆಲ್ಲ ಕಾಣುವುದೆ ಭಾಗ್ಯ. ಗುರುವರ್ಯರ ಪರ ಕಲಬುರ್ಗಿಯವರಿಂದ ಮಾತ್ರ ಹಿತನುಡಿ ಹಂಚಿಕೊಂಡಿದ್ದರು. ಅವರ ಮಾತಿನಲ್ಲಿ ಆಪ್ತತನದ ಮೆಚ್ಚುವ ಸರಳತನ ಚಿಂತನೆಯಲ್ಲಿ ತುಂಬ ಗಾಂಭೀರ್ಯ. ಸುತ್ತೂರಿನ ಶ್ರೀಗಳು ನೇತೃತ್ವವಹಿಸಿದ್ದಾರೆಂದರೆ ಅರ್ಥಪೂರ್ಣವಾದುದು. ಇದು ನನಗೆ ಧಾರವಾಡದಲ್ಲಿ ಮನೆ ಮಾಡಿದ್ದರಿಂದ ಸುದ್ದಿ ತಿಳಿದು ಡಾ॥ ಗುಂಡಣ್ಣ ಕಲಬುರ್ಗಿಯವರನ್ನು ಕರಕೊಂಡು ಹೋಗಿದ್ದೆ. ಎಂ.ಎಂ.ಕೆ. ಅವರು ಮಾತನಾಡಲು

**ಡಾ॥ ಸಣ್ಣವೀರಣ್ಣ ದೊಡ್ಡಮನಿ**

ಶುರುಮಾಡಿದರು. ಎಂ.ಎಂ.ಕೆ. ಅವರ ಸ್ವಭಾವ ವೆಂದರೆ, ಮಾತನಾಡುವಾಗ ಯಾವಾಗಲೂ ಮಧ್ಯ-ಮಧ್ಯದಲ್ಲಿ ತಮ್ಮ ಉಸಿರನ್ನು ಹೊರಹಾಕುವುದು ಅವರ ರೂಢಿ. ವೈಚಾರಿಕ ವಿಚಾರಕ್ರಿಯೆಯನ್ನು ಸ್ಮೃತಿಗೆ ತರುವ ನೆಲೆಯದು. ಅದು, ಯಾವುದೋ ಒಬ್ಬ ಶ್ರೇಷ್ಠ ಚಿಂತಕರು ಮಾತನಾಡುವ ಬಗೆಯೂ ಹೌದು. ಭಾಷೆ ಮಾಧ್ಯಮಕ್ಕೆ ಬರುವಲ್ಲಿ ವಿಚಾರ-ಮಂಥನಕ್ಕೆ ಸಿಕ್ಕಿಸಿಬಿಡುವ ಉಸಿರು ಅದು. ಈ ಗುರುಗಳ ಮಾತುಗಾರಿಕೆಯೇ ಹಾಗೆ.

ಪೂಜ್ಯರನ್ನು, ವೇದಿಕೆಯನ್ನು, ಸಭೆಯನ್ನು ನೆನೆದು ಪೂರ್ವಾರ್ಧದಲ್ಲಿ ಈ ದೇಶೀ ಕೇಂದ್ರ ಗುರುಗಳಿಗೆ ನಾನು ಗುರುವಾಗಿದ್ದೆ, ಆದರೆ ಉತ್ತರಾರ್ಧದಲ್ಲಿ ನನಗೆ ಅವರು ಗುರುಗಳು. ಇದನ್ನು ನೆನೆದರೆ ಬಾಳ ಸಂತೋಷ ಆಗ್ತಾದ. ಇದನ್ನೇ ಕಾಲದ ಮಹಿಮೆ ಅನ್ನೋದು. (ಇದನ್ನು ಕೇಳಿದ ನನಗೆ, ಆಶ್ಚರ್ಯ ಮತ್ತು ಆನಂದ ಒಟ್ಟಿಗೆ ಆಯಿತು.) ನನ್ನ ಶಿಷ್ಯಂದಿರು ಈ ರೀತಿ ಜಗತ್ತನ್ನು ಬೆಳಗುತ್ತಾರೆ ಅಂದ್ಕೊಂಡಿರಲಿಲ್ಲ. ಆದ್ರೆ ಭರವಸೆ ಇತ್ತು. ನನ್ನ ಶಿಷ್ಯಂದಿರು ಇಷ್ಟೊಂದು ಛಂದ ವ್ಯವಸ್ಥಾ ಮಾಡಿದ್ದು ನೋಡಿದ್ರ, ನಿಜಕ್ಕೂ ಕಲಿಸಿದ್ದಕ್ಕೂ ಸಾರ್ಥಕಾತು ಅನಿಸಿತು. ಅಂದು ನಾನು ನನ್ನ ಶಿಷ್ಯಂದಿರನ್ನು ತಿದ್ದಿ ತೀಡಿ ಬೆಳೆಸಿದ್ದೇನೆ ಎಂದು ನನಗೆ ಅನಿಸುವುದಿಲ್ಲ. ಏಕೆಂದರೆ, ನನಗೆ ಆಗ ಅಷ್ಟೊಂದು ಅರಿವು ಮೂಡಿತ್ತೋ ಇಲ್ಲವೋ, ಆದರೆ ಇಂದು ನಾನು ಅರಿವು ಹೆಚ್ಚಿಸಿಕೊಂಡಿದ್ದೇನೆ. ಅರಿವು ಮಾಗಿರಬಹುದು. ನನಗನಸ್ತದ, ಅಂದು ಬಹುಶಃ ತಪ್ಪು ಹೇಳಿರಬಹುದು. ಇಂದು ಆ ಮಂಥನದ ಶಕ್ತಿ ಹೆಚ್ಚಿಸಿಕೊಂಡಿದ್ದೇನೆ. ಒಂದರ್ಥದಲ್ಲಿ ಮಾಗಿದ್ದೇನೆ. ಕಲಿಯುವ ಶಿಷ್ಯಂದಿರಿಲ್ಲ, ಯಾಕಂದ್ರ ಹಲವರು ಉದ್ಯೋಗಸ್ಥರಾಗಿದ್ದೀರಿ, ಗೃಹಸ್ಥರಾಗಿದ್ದೀರಿ. ಕಾಲ ಹ್ಯಾಂಗಂದ್ರ ಗುರುಮಾಗಿದ್ದ ಕಾಲಕ್ಕ ಸಮಯ ಸದುಪಯೋಗ ಮಾಡಿಕೊಳ್ಳುವುದಿಲ್ಲ. ಈಗ ಕಲಿಸುವ ಹುಮ್ಮಸ್ಸು ನನಗಿದೆ. ನನಗೆ ಜ್ಞಾನ ಹಂಚಿಕೊಳ್ಳಬೇಕೆನಿಸಿದೆ. ಆದ್ರ ಕಲಿಯುವ ಶಿಷ್ಯಂದ್ರು ಇಲ್ಲ. ನೀವೆಲ್ಲ ನನ್ನನ್ನು ಬಿಟ್ಟು ಹೋಗಿಬಿಟ್ಟೀರಿ. ಕಲಿಯುವ ಸ್ಥಿತಿಯಲ್ಲಿ ಇಲ್ಲ. ಹಲವು ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದೀರಿ. ಆದ್ರ ಒಂದು ನಾನು ಸಂತೋಷಪಡೂದಂದ್ರ, ನನ್ನ ವಿದ್ಯಾರ್ಥಿ ಬಳಗ ಇಷ್ಟೊಂದು ಅಭಿಮಾನ ಮತ್ತು ಆಸಕ್ತಿ ಹೊಂದಿ ಇಂತಹ ಒಳ್ಳೆ ಸಂಭ್ರಮ ಮಾಡಿದ್ದು ಸಂತೋಷ ಆಗ್ತಾದ. ಲೋಕದಾಗ ಹೀಂಗ ಬೆಳದಿದ್ದಾರ ಅನ್ನೋದು ನನಗ ದೊಡ್ಡ ಭಾಗ್ಯ. ಬಹುಶಃ ಒಬ್ಬ ಗುರುವಿಗೆ ಇದಕ್ಕಿಂತ ದೊಡ್ಡ ಭಾಗ್ಯ ಮತ್ತೊಂದಿಲ್ಲ. ನಿಮ್ಮಂತಹ ಶಿಷ್ಯಂದಿರನ್ನು ಪಡೆದದ್ದು ನನ್ನದಷ್ಟೇ ಅಲ್ಲ, ನಮ್ಮೆಲ್ಲರ ಭಾಗ್ಯ ಅಂತ್ಹೇಳಿ ನನ್ನ ಮಾತು ಮುಗಿಸ್ತೀನಿ ಎಂದರು. ಇಂತಹ ಅನನ್ಯ ನುಡಿಗಳನ್ನಾಡಿದ ಗುರುಗಳನ್ನು ನೋಡಿದ ನನಗೆ, ಗುರು-ಶಿಷ್ಯರ-ಭಾವಕ್ಕೆ ಹೊಸ ಮಿಂಚಿನ ಸಂಚಾರ ಸ್ಪರ್ಶಿಸಿ ದಂತಾಯಿತು. ವೇದಿಕೆಯಲ್ಲಿ ವಿರಾಜಮಾನರಾದ ಗುರುವರ್ಯರ ಮಾಗಿದ ಮುಖಗಳು ಅದರಲ್ಲಿನ 'ಚಿಂತನ ತೇಜ'ದಂತೆ ತಮ್ಮ ಮಾತನ್ನು ಉಸಿರ ಮಧ್ಯದಲ್ಲಿ ಸಿಕ್ಕಿಸಿ ಸಭೆಗೆ ಸಮರ್ಪಿಸಿ, ಮಾತನಾಡಿದ ಕಲಬುರ್ಗಿ ಗುರುಗಳ ಮಾತಿನ ಶೈಲಿ ತುಂಬ ಆಪ್ಯಾಯಮಾನ. ಸಮಾರಂಭ ಮುಗಿದ ನಂತರ ನನ್ನ ಸಂಶೋಧನ ಗ್ರಂಥ ("ಶಿಲ್ಪೀಕ್ಯಾತರು - ಒಂದು

# ನದಿ ತೀರದ ಹೂವುಗಳು ಮತ್ತು ನನ್ನ ಒಂಟಿ ಪಯಣ

**ನ**ದಿ ತೀರದಲ್ಲಿ ಅರಳಿನಿಂತ
ಹೂವುಗಳ ಗೂಢ ವಿಷಣ್ಣತೆಯನ್ನು ಯಾರಲ್ಲಿ ದೂಷಿಸಲಿ ?
ನಾನೀಗಾಗಲೇ, ಅರೆ ಉನ್ಮತ್ತ ಹುಚ್ಚನಂತೆ ಕಳೆದುಹೋಗಿದ್ದೇನೆ...!

ಆ ದಟ್ಟ ಹೂವುಗಳು ತಮ್ಮ ಚೆಲುವಿನೊಳಗಿನ
ದುಃಖವನ್ನು ನುಂಗಿ ನಿಂತಿವೆ !
ನಾನಾವುದೋ ಆಲಾಪವನ್ನು ಗುನುಗುತ್ತಾ
ಜೋಗಿಯಂತೆ ಅಲೆಯುತ್ತಿದ್ದೇನೆ ಗೊತ್ತು ಗುರಿಯಿಲ್ಲದೆ.
ನನ್ನ ಮುಪ್ಪನ್ನು ಹೆಗಲ ಮೇಲೆ ಹೊತ್ತು
ಕಾಯುತಿರುವ ಕಾಲನ ಗೊಡವೆಯೇ ನನಗೆ ಬೇಡ
ನನ್ನ ನರ ನಾಡಿಗಳ ತುಂಬ ಅವ್ಯಕ್ತ ಪ್ರೀತಿಯ
ನಶೆ ತುಂಬಿದೆ
ನಶೆಯ ಧ್ಯಾನದಲ್ಲಿಯೆ
ಉದಾರವಾಗಿ ಪದವೊಂದ ಹಾಡಿಬಿಡುವೆ

ಈ ಆಳದ ನದಿಯ ಹರಿವು ಅದೆಷ್ಟು ನಿರಾಳ...!
ದಡದ ಮೇಲಿರುವ ಬಿದಿರು ಮನೆಗಳು ಮೌನ ತಾಳಿವೆ,
ಕೆಂಪು ಹೂವುಗಳು ಕಂಪು ಸೂಸುತ್ತಾ
ಹೊಳೆಯುತ್ತಿವೆ ಸೂರ್ಯನಂತೆ !
ನಶೆಯೇರಿದ ನನ್ನ ದೇಹಕ್ಕೂ ಇಲ್ಲಿ ಜಾಗವಿದೆ
ಕಿಮ್ಮತ್ತಿಲ್ಲದ ಜೀವ ಪಥಕೆ ಜಲಪರ್ಯಟನದ ಸಂಬಂಧ !

ಮನುಷ್ಯರ ಹಗೆಯಂತೆ ಹೊಗೆಯಾಡುವ ಈ ಮಂಜಿನ
ತುಂಬ ಹೂವು ಮತ್ತದರ ಪರಿಮಳದ ಅಮಲು ತುಂಬಿದೆ;
ಅಲ್ಲಲ್ಲೋ ಕುಳಿತು ಕಸೂತಿ ಹೆಣೆಯುವ ಹುಡುಗಿಯೊಬ್ಬಳು
ಮದಿರೆ ತುಂಬಿದ ಬಂಗಾರದ ಬಟ್ಟಲು ಹಿಡಿದು ಕಾಯುತ್ತಿದ್ದಾಳೆ...!




ದುರ್ಬಲ ವಸಂತನ ನಡುವೆಯೂ
ಜೀವಂತ ಹೂವೊಂದು ನಳನಳಿಸುತಿದೆ
ಕೆಂಪು ದೀಪದ ಕೆಳಗೆ
ಅಡಗಿದ ಸೌಂದರ್ಯ ನಿಧಿಯಂತೆ...!
ಕರಾಳ ಕತ್ತಲೆಗೂ
ಮೈತುಂಬಾ ಕಣ್ಣು ಸುಖದ ಹುಣ್ಣು.

೧ "ಹ್ಯೊಯಾಂಗ"ನ ಆಶ್ರಮದ ದಾರಿ-
ಹೊದ್ದು ಮಲಗಿದೆ ಹೂವುಗಳನ್ನೇ
ಆಶ್ರಮದ ಮೇಲೆ
ಹಾರುತ್ತಿವೆ, ಹಾಡುತ್ತಿವೆ,
ಕಾಲನ ಬಿಗಿತಕ್ಕೆ ಮಣಿಯುತ್ತಿವೆ ಓರಿಯೋಲ್ ಪಕ್ಷಿಗಳು !

ಸಾವಿನಂಚಿನಲ್ಲಿರುವ ನನಗೆ
ಕ್ಷಣ ಕ್ಷಣಕೂ ಸಾಯುವ ಕೆಂಪು ಹೂವುಗಳ
ಪ್ರೀತಿ ಬೇಕಿಲ್ಲ.
ನನ್ನ ಅನುಕಂಪವು ನದಿಯ ಮೇಲಿನ
ಅಲೆಯಾಗಲಿ ಕಾಲಚಕ್ರದ ಸೆಲೆಯಾಗಲಿ...!

*(ತೂ.ಫು. ಚೀನಾದ ಕವಿ, ದಾರ್ಶನಿಕ, ತಾತ್ವಿಕ ಇವನು ಕನ್‌ಫ್ಯೂಸಿಯಸ್‌ನ ಶಿಷ್ಯ, ೧ "ಹ್ಯೊಯಾಂಗ" ಚೀನಾದ ಸೌಂದರ್ಯೋಪಾಸಕ ಒಬ್ಬ ಸಂನ್ಯಾಸಿ)*

ಮೂಲ : **ತೂ.ಫು.**
ಕನ್ನಡಕ್ಕೆ : **ಸಂತೋಷ ಅಂಗಡಿ**

ರಂಗಭೂಮಿ ಕಲಾವಿದರು, 'ಸ್ಕಿನೇ ಥಿಯೇಟರ್ ಗ್ರೂಪ್', ಕೇರಾಫ್ : ಡಾ॥ ವಿ. ಸಿ. ಬಾದಾಮಿ ಬಿಲ್ಡಿಂಗ್, ಮಕಾಂದಾರ ಓಣಿ, ಆನಂದ ನಗರ, ಬಾದಾಮಿ - ೫೮೭ ೨೦೧

ಜಾನಪದೀಯ ಅಧ್ಯಯನ" ) ಕೊಟ್ಟೆ. 'ಹೌದಾ ಇದು ಆಗಬೇಕಾಗಿತ್ತು. ವಿಷಯ ಹಂಗ ಉಳಿದಿತ್ತು. ಭಲೋ–ಆತು ನೋಡ್ತನಿ ಅಂದ್ರು' ಮರುದಿವಸ ಫೋನು ಬಂದಿತು. ನಾನು ಪದವಿ ಮಕ್ಕಳ ಪೇಪರ್ ಚೆಕ್ ಮಾಡ್ಲಿಕ್ಕೆ ಹೊರಟಿದ್ದೆ. ಕರೆ ಸ್ವೀಕರಿಸಿ 'ಹಲೊ' ಎಂದಾಗ 'ದೊಡ್ಮನಿಯನ ?' ಅಂದ್ರು, 'ಹೌದು ತಾವು ?' ಎಂದಾಗ 'ನಾನೊ ಕಲಬುರ್ಗಿ' ಅಂದ್ರು. ಆಗ ನನ್ನ ನರನಾಡಿಗಳು ಎಚ್ಚರಗೊಂಡವು. ಗುರುವಿಗೆ ವಂದಿಸಿ, ಮುಂದುವರಿದು, "ನಿನ್ನ ಕೃತಿ ಬಹಳ ಗಟ್ಟಿಯಾಗಿದೆ, ಭಲೋ ಆಗ್ಯೆತೆ. ಬರಹ ಗಟ್ಟಿ ಇದೆ. ಓದಿದೆ. ಸಂತೋಷ ಆಯ್ತು. ಹಿಂಗ ಬರೀ ಹೋಗು. ಹೈಸ್ಕೂಲ್ – ಕಾಲೇಜ್ ಅಂತ್ಹೇಳಿ ಗ್ಯಾದ್ರಿಂಗ್ ಭಾಷಣಕ್ಕೆ ಹೋಗಬ್ಯಾಡ ಕುಂತು ಬರೀತಾ ಸಾಗು" ಅಂದ್ರು – ಆಗ ಹಿರಿಯ ಗುರುಗಳು ಗಟ್ಟಿಯಾಗಿದೆ ಅನ್ನೋದೆ ನನಗೆ ದೊಡ್ಡ ಪ್ರಶಸ್ತಿ ಸರ್, ಹೀಗೆ ಹೇಳಿದ್ದೆ ನನ್ನ ಭಾಗ್ಯ ಎಂದೆ, ಸ್ವಲ್ಪ ದಿನಗಳೆದಾಗ ರನ್ನ ಪ್ರಶಸ್ತಿ ಬಂದಾಗ ಫೋನ್‌ನಲ್ಲಿ ಅಭಿನಂದನೆ ಹೇಳಿದ್ದೆ. ಅದೇ ಕೊನೆ. ಇಂತಹ 'ಕವಿರಾಜ ಮಾರ್ಗ' ಪರಿಸರವನ್ನು ಅಧ್ಯಯನ ಮಾಡಿ ಆಳವಾಗಿ, ಸಾಹಿತ್ಯ ಸಂಶೋಧನೆಗೆ ಮಹಾಮಾರ್ಗ ಪರಿಕಲ್ಪನೆ ಹರಿಸಿದರು.

ಕುಲಪತಿಗಳಾಗಿ ಅವರ ಅಧ್ಯಯನದ ಶಿಸ್ತು ರೂಢಿಸಿಕೊಂಡದ್ದು ಅವರ ಸಂಸ್ಕೃತಿಯ ಪ್ರತೀಕ. 'ಪಂಪನ ದೇಶೀಯ ಮಾರ್ಗದೊಳ್ ಪೋಗುವುದು ಪೊಕ್ಕು' ಎನ್ನುವ ಉಕ್ತಿಯನ್ನು ಅಲ್ಲಿ ಆವಿರ್ಭವಿಸಿ, ಸಾಹಿತ್ಯ–ಸಂಸ್ಕೃತಿ–ಸಂಶೋಧನೆಗೆ ಹೊಸ ಚಿಂತನದ ಲೇಪನ ಮಾಡಿದರು. ಅವರ ಅವಧಿಯಲ್ಲಿ ದಡ್ಡರು, ಆಲಸಿಗಳನ್ನು ವೈಯಕ್ತಿಕವಾಗಿ ಕರೆಸಿ ಹಿಗ್ಗಾ–ಮುಗ್ಗಾ ಜಾಡಿಸಿ, ಎಚ್ಚರಗೊಳಿಸುವ ಕೆಲಸ ಮಾಡುತ್ತಿದ್ದರು. ಅವರಿಂದ ಭಯಗೊಂಡು ಕೆಲ ಅಧ್ಯಯನ ಪರಂಪರೆಯಿಲ್ಲದವರು ಪದವಿ ಕಾಲೇಜ್‌ನಲ್ಲಿ ಯಾರು ಬರಹಗಾರರು ಇದ್ದಾರೋ, ಅವರಿಗೆ ಕೇಳಿ, 'ಏನಾದರೂ ಬರೆದು ಕೊಡ್ರೊ, ನಮಗೆ ಉಗಿಸಿಕೊಳ್ಳುವ ಸಂಕಟ ಪರಿಸ್ಥಿತಿ ಬಂದಿದೆ. ಕಲಬುರ್ಗಿಯವರು ತುಂಬ ಸ್ಟ್ರಿಕ್ಟ್ ಆಗಿ ಕೆಲಸ ಮಾಡಿಸುತ್ತಿದ್ದಾರೆ' ಎಂದು ಕೇಳಿಕೊಂಡು ಅವರು ಅಲ್ಲಲ್ಲಿ ಕಲೆಹಾಕಿದ ವಿಷಯವನ್ನು ಬರೆಯಲಾರದವರೂ ಗ್ರಂಥ ರೂಪದಲ್ಲಿ ಹೊರತರಲು ಮುಂದಾದದ್ದನ್ನು ನೆನೆಸಿಕೊಳ್ಳುವವರಿದ್ದಾರೆ. ಕೆಲವರು ಬದಲಾಗದವರು ಶಾಪ ಹಾಕಿರಬಹುದು. ಅಷ್ಟು ನಿಷ್ಠುರಾಗಿ ಅಧ್ಯಯನ ಸಂಸ್ಕೃತಿಯನ್ನು ಪ್ರತಿಪಾದಿಸಿದ್ದರು. ಆ ಸಂದರ್ಭದಲ್ಲಿ ವಿ.ವಿ.ಯಲ್ಲಿ ನಿಷ್ಠುರ ಸತ್ಯಕ್ಕೆ ಹೆಸರಾಗಿ ೨೦೦ಕ್ಕೂ ಮಿಕ್ಕಿ ಕೃತಿಗಳನ್ನು ಪ್ರಕಟಿಸಿದರು.

'ಸಾಹಿತ್ಯ ದೊಡ್ಡದು. ಆದರೆ ಸಾಹಿತ್ಯಕ್ಕಿಂತ ಬದುಕು ದೊಡ್ಡದು. ಉತ್ತಮ ಲೇಖಕ, ಸಾಹಿತಿ ಅಥವಾ ಕವಿಯಾಗುವುದಕ್ಕೆ ಮುನ್ನ ಉತ್ತಮ ವ್ಯಕ್ತಿಯಾಗುವತ್ತ ಗಮನ ಹರಿಸಬೇಕು.' ಇದು ಅವರ ವ್ಯಕ್ತಿ ಪಾವಿತ್ರ್ಯತೆಯ ನಿಲುವು. ವಿಶ್ವವಿದ್ಯಾಲಯಗಳಿಗೆ ಮಾರ್ಗದರ್ಶಕರಾಗಿ, ಕನ್ನಡ ವಿ.ವಿ.ಯ ಬೌದ್ಧಿಕ ಮಟ್ಟ ಎತ್ತರಿಸುವಲ್ಲಿ ಕಲಬುರ್ಗಿಯವರ ಪಾತ್ರ ಹಿರಿದಾದುದು. ಸದಾ ಸಂಶೋಧನಾ ವಲಯವನ್ನು ಉಸಿರಾಗಿಸಿಕೊಂಡು, ಹಗಲಿರುಳೆನ್ನದೆ, ಸತತ ಅಧ್ಯಯನ ಮಾಡುತ್ತ ಕುಲಪತಿಯನ್ನೋದು ಮರೆತು ತಾವೊಬ್ಬ ಸಂಶೋಧನ ವಿದ್ಯಾರ್ಥಿ ಎಂಬಂತೆ ಕಾರ್ಯಗೈದರು.




ಅವರದು ವೈಚಾರಿಕ ಬದ್ಧತೆಯ ವ್ಯಕ್ತಿತ್ವ. ನಾಡಿನ ಯಾವುದೇ ಮೂಲೆಯಲ್ಲಿ ನಿಂತು ಮಾತನಾಡಿದರೂ ಮಾಧ್ಯಮಗಳು ತಮ್ಮ ಮೈಯನ್ನೆಲ್ಲ ಕಣ್ಣಾಗಿಸಿ ನೋಡುವ, ಕಿವಿಯಾಗಿ ಕೇಳುವುದನ್ನು ವೃತ್ತಿಯಾಗಿಸಿ ಕೊಂಡಿದ್ದವು. ಮಾಧ್ಯಮಗಳಿಗೆ ಅವರ ವಿಚಾರವೆಂದರೆ, ಕುತೂಹಲ! ಅದು ಒಂದು ಬಗೆಯ ಹಬ್ಬವೇ ಸರಿ. ಸಂಸ್ಕೃತಿಯ ಗರ್ಭದೊಳಗಿನ ಯಾವುದಾದರೊಂದು ಹೊಸ ಚಿಂತನೆಯನ್ನು ತೂರಿದಾಕ್ಷಣ ಮುಗಿಬಿದ್ದು ಮಾಧ್ಯಮಗಳು ಬಿತ್ತರಿಸಲು ಮುಂದೆ ಬಂದು ಪೈಪೋಟಿ ನಡೆಸುತ್ತಿದ್ದವು. ಅವರ ಬದ್ಧತೆಯೆಂದರೆ, ತಾವು ನುಡಿದ ಮಾತಿಗೆ, ನಡೆದ ಮಾರ್ಗಕ್ಕೆ ಸದಾ ಬದ್ಧರು. ಅವರು ಆಡಿದ ಪ್ರತಿಮಾತಿಗೂ ಕೆಲವರಾದರೂ ಆಕ್ಷೇಪ ತೆಗೆಯುವವರಿದ್ದರು. ಕಲಬುರ್ಗಿಯವರು ಮಾತಾಡುವುದರಿಂದ ಆಕ್ಷೇಪ ಎತ್ತುವವರೂ ಇದ್ದರು! ಆದರೆ ಇಂದು ಗುರುಗಳಿಲ್ಲ. ಸತ್ಯದ ಜ್ಞಾನ ಸಾಮ್ರಾಜ್ಯದಲ್ಲಿ ಅಮರರು. ಆಕ್ಷೇಪಿಸುವವರು ಬದುಕಿದ್ದಾರೆ. ಮಾಡುವುದೇನು ? ಇದ್ದೂ ಸತ್ತ ಹಾಗೆ.

ಅವರ ನಿಷ್ಠುರತೆ, ನಿಖರತೆ, ಬದ್ಧತೆಗೆ ಯಾವಾಗಲೂ ರಾಜಿ ಮಾಡಿಕೊಂಡವರಲ್ಲ. ಇವರ ತರ್ಕಕ್ಕೆ ಎಂಥವರಿದ್ದರೂ ಬಾಗಲೇಬೇಕು. ಅಷ್ಟೊಂದು ಅಪಾರ ಆಧಾರಗಳನ್ನು ಹೈಪಾಥಿಸಸ್ ಮೂಲಕ, ಪ್ರಮೇಯಗಳ ಮೂಲಕ ಕ್ರೋಢೀಕರಿಸುತ್ತಿದ್ದರು. ಜೆ. ಎಚ್. ಪಟೇಲರು ಮುಖ್ಯಮಂತ್ರಿಯಾಗಿದ್ದಾಗ ಅವರನ್ನು ಕುಲಪತಿಯಾಗಿ ಆಯ್ಕೆಮಾಡಲು ಸಮಿತಿ ರಚಿಸಲಾಗಿತ್ತು. ಸಮಿತಿಯಲ್ಲಿ ಕಲಬುರ್ಗಿ ಅವರ ಗುರುಗಳು, ಮಾರ್ಗದರ್ಶಿಯಾದ, ಕ.ವಿ.ವಿ.ಯ ಕುಲಪತಿಗಳಾಗಿ ನಿವೃತ್ತಿಯಾಗಿದ್ದ ಡಾ॥ ಆರ್. ಸಿ. ಹಿರೇಮಠ ಅವರಿದ್ದರು. ಸ್ವತಃ ಆರ್. ಸಿ. ಹಿರೇಮಠರು "ಎಂ.ಎಂ.ಕೆ. ಅವರು ಕುಲಪತಿ ಯಾಗುವುದು ಬೇಡ. ನಿಷ್ಠುರಿ ಮನುಷ್ಯ ಆಡಳಿತ ಮಾಡುವುದು ಕಷ್ಟವಾಗುತ್ತದೆ ಎಂದು ತಮ್ಮ ವಿದ್ವತ್‌ನ ವಿದ್ಯಾರ್ಥಿಯನ್ನು ಕುಲಪತಿ ಪಟ್ಟಿಯಿಂದ ಹೊರಗೆ ಉಳಿಸಿದ್ದರಂತೆ. ಇದನ್ನು ಒಂದು ಸಂದರ್ಭದಲ್ಲಿ ತಮ್ಮ (ಎಂ.ಎಂ.ಕೆ.) ಮನದೊಳಗಿನ ಈ ಮಾತನ್ನು ಹೇಳಿದ್ದರು.

ನಾಡಿಗೆ ಎಂ.ಎಂ.ಕೆ. ಅವರ ಕಾಣಿಕೆ ಅಪಾರ. ಇಂತಹ ಗುರುಗಳನ್ನು ಪಡೆದ ನಾವು ಶಿಷ್ಯಂದಿರು, ಸಹಪಾಠಿಗಳು ನಿಜವಾಗಲೂ ಪುಣ್ಯವಂತರು. ೧೯೯೯ರಲ್ಲಿ ಅಧ್ಯಯನ ಪೀಠ ಪ್ರವೇಶಿಸಿದೆ. ಅವರ ಛಾಯೆ ಮಾತ್ರ ನೆಲೆಯೂರಿತ್ತು. ಅವರು ಆಗಲೇ ಕುಲಪತಿಯಾಗಿ ತೆರಳಿದ್ದರು. ಅವರ ಸಹಪಾಠಿಗಳಾದ ಡಾ॥ ವೀರಣ್ಣ ರಾಜೂರ ಮತ್ತು ಡಾ॥ ಬಿ. ವ್ಹಿ. ಶಿರೂರ ಗುರುಗಳ ಸಾಮೀಪ್ಯ ನನಗೆ ದೊರೆಯಿತು. ನನ್ನ ವಿದ್ಯಾಗುರುಗಳಾದ ಡಾ॥ ಬಿ. ವ್ಹಿ. ಶಿರೂರ ಮಾರ್ಗದರ್ಶನದಲ್ಲಿ ಮನುಷ್ಯನಾಗಿ ಬೆಳೆಯಲು ಮತ್ತು ರಾಜೂರ ಗುರುಗಳಿಂದ ವಾತ್ಸಲ್ಯ ಬದುಕ ಅರಿಯಲು ಶಕ್ಯವಾಯಿತು. ಈ ಸಂಶೋಧನಾ ಮಾರ್ಗದ ಗುಂಪು, ನನಗಾಕರ್ಷಿತವಾದದ್ದೇ ನನ್ನ ಭಾಗ್ಯ. ಕಲಬುರ್ಗಿಯವರ ತರ್ಕ ವಿಚಾರಗಳನ್ನು, ಶಿರೂರ ಅವರ 'ಮಲ್ಲೆಬೊಮ್ಮಯ್ಯ' ಕಾವ್ಯ ಸಂದರ್ಭದಲ್ಲಿ ಮತ್ತು ರಾಜೂರ ಅವರ 'ವಚನ ಸಾಹಿತ್ಯ' ಸಂದರ್ಭದಲ್ಲಿ ನಡೆದ ವಿನಿಮಯದ ಮಾತುಗಳ ಅವಲೋಕನ ಕೇಳಿಸಿಕೊಂಡಿದ್ದೆ.

ಕಲಬುರ್ಗಿಯವರು ವಿದ್ವನ್‌ಮಣಿಗಳನ್ನು ಸೃಷ್ಟಿಸಿದ್ದಾರೆ. ಅಂತೆಯೇ ಧಾರ್ಮಿಕದಲ್ಲಿನ ಬದಲಾವಣೆಗೆ ಸಂಚಲನ ಶಕ್ತಿಯಾಗಿದ್ದರು. ಹಲವಾರು ಮಠಾಧೀಶರು ತಮ್ಮ ನಿಲುವನ್ನು ಬದಲಿಸಿಕೊಂಡಿದ್ದರು. ಇಬ್ಬರು ವೈಚಾರಿಕ ಶ್ರೀಗಳನ್ನು ರೂಪಿಸಿದ ಕೀರ್ತಿ ಅವರಿಗಿದೆ. ಸಮಾಧಿಯ ಅಂತಿಮ ಚಿತ್ರಣ ನೆನೆದುಕೊಂಡರೆ, ನಮ್ಮ ಜೀವಿತದವರೆಗೂ ಆ ದೃಶ್ಯ ನಮ್ಮ ಸ್ಮೃತಿಯಿಂದ ಸರಿಯದು. ಆ ಅಂತಿಮ ಸ್ಪರ್ಶ, ಸಮಾಧಿಯ ಎಡ–ಬಲ ಸುತ್ತಿಕೊಂಡ ಶ್ರೀಗಳ ಸಮೂಹ ನೆರೆದಿದ್ದನ್ನು ಗಮನಿಸಿದರೆ, ಬಸವಣ್ಣನ ಅನುಯಾಯಿಯಾಗಿ, ಬಸವ ಪರಂಪರೆಯ ಧೀಮಂತ ಶಕ್ತಿಯಾಗಿ ಹೇಗೆ ಮೆರೆದಿದ್ದರು ಎನ್ನುವುದು ಅರ್ಥವಾಗುವುದು. ಕನ್ನಡದ ಗುರು ತೋಂಟದ ಸಿದ್ದಲಿಂಗ ಶ್ರೀಗಳು ಕಂಬನಿಗೈದು, ತಮಗೆ ವಿದ್ಯಾ ಕಲಿಸಿದ ಗುರುವನ್ನು ಹರಸಿದರು. ಅವರ ಅವಿನಾಭಾವ ಅನನ್ಯ. ಗದುಗಿನ ಮಠದಿಂದ ಗ್ರಂಥ ದಾಸೋಹ ನಡೆದದ್ದು ದೊಡ್ಡ ಪರಂಪರೆ. ಎಂ.ಎಂ.ಕೆ. ಗುರುಗಳು ಏನು ಪ್ರಕಟಿಸಲು ಸೂಚಿಸುವರೊ ಅದನ್ನು ಚಾಚೂತಪ್ಪದೆ ಪ್ರಕಟಿಸುವ ಜವಾಬ್ದಾರಿ ತೋಂಟದಾರ್ಯ ಮಠದ್ದಾಗಿತ್ತು. ಅದರಂತೆ ಸುತ್ತೂರು ದೇಶೀಕೇಂದ್ರದ ಶ್ರೀಗಳು. ಇವರಿಬ್ಬರೂ ಎಂ.ಎಂ.ಕೆ. ಅವರ ಶಿಷ್ಯರು. ಬಸವ ಪರಂಪರೆಯನ್ನು ಬಿತ್ತಿ ಬೆಳೆಯುವ ಚಿತ್ರದುರ್ಗ ಮಠದ ಶರಣರೂ ಸೇರಿ. ಈ ಪ್ರಮುಖವಾದ ಮೂರು ಮಠಗಳು ಗುರುಕಾರುಣ್ಯವನ್ನು ಪಡೆದಿದ್ದವೆನ್ನಬಹುದೆ ? ಎಂ.ಎಂ.ಕೆ. ಅವರ ಸಮಾಧಿಯನ್ನು ಡಾ॥ ಡಿ. ಸಿ. ಪಾವಟೆಯವರ



ಸಮಾಧಿಯ ಬಲಬದಿ ತೋಡಲಾಗಿತ್ತು. ಅದು ಶರಣರು 'ಮರಣವೆ ಮಹಾನವಮಿ' ಎಂದಂತೆ ಆದ ಅಂತ್ಯಸಂಸ್ಕಾರ. ಕೊನೆಯ ದರ್ಶನ ಪಡೆವ ಜನಸಮೂಹ. ದಶದಿಕ್ಕುಗಳನ್ನು ಅಪ್ಪಿಕೊಂಡ ಅವರ ಸ್ವರೂಪ ದಿಗ್ಭ್ರಮೆಗೊಳಿಸಿತ್ತು. ಮಠಾಧೀಶರು ಕುಣಿಯ ಒಳಗೆ ಇಳಿದು, ಅಂತಿಮ ನಮನ ಸಲ್ಲಿಸುವುದೆಂದರೆ, ಶಿವರಾತ್ರಿಗೈದ ಶರಣನ ವ್ಯಕ್ತಿತ್ವಕ್ಕೆ ಇನ್ನೆಂತಹ ಗೌರವ !

ಸಮಾಧಿಯಲ್ಲಿ ನುಡಿನಮನ – ಮೊದಲು ನಾಡಿನ ಖ್ಯಾತ ಸಂಶೋಧಕರು, ಷ. ಶೆಟ್ಟರ್, ನಾಲ್ಕು ದಶಕಗಳ ಅವರ ಒಡನಾಟ, ಅವರ ಅಧ್ಯಯನ ಅಧ್ಯಾಪನ, ಕೆಲವು ಸಂಶೋಧನಾ ಶಂಕೆಗಳನ್ನು ಕಲಬುರ್ಗಿಯವರಲ್ಲಿ ಪರಿಹರಿಸಿಕೊಂಡದ್ದು, ಏನೆಲ್ಲ ನೆನೆದರು. ಇಂತಹ ಜ್ಞಾನಿಗಳೂ ತಮ್ಮ ಕೊರತೆಗಳನ್ನು ಕಲಬುರ್ಗಿಯವರಿಂದ ನೀಗಿಸಿಕೊಳ್ಳುತ್ತಿದ್ದರು ಎಂಬುದು ಮುಖ್ಯ. ನಂತರ ನಿಡುಮಾಮಿಡಿ ಚನ್ನಮಲ್ಲ ಶ್ರೀಗಳು ಕಲಬುರ್ಗಿಯವರ ವೈಚಾರಿಕ ಎತ್ತರವನ್ನು, ಅವರ ದಿಟ್ಟ ನಿಲುವನ್ನು ನೆನೆದರು. ಮೂರನೆಯದಾಗಿ, ನಾಡಿನ ಅಂತರಂಗದ ರತ್ನ ಹಾಗೂ ಹಿರಿಯ ಚಿಂತಕರೂ ಗುರುಗಳೂ ಆದ ಡಾ॥ ಗುರುಲಿಂಗ ಕಾಪಸೆ, "ಚಂದ್ರನಿಗೆ–ಚಂದ್ರನೆ ಸಾಟಿ ಎನ್ನುವಂತೆ, ಕಲಬುರ್ಗಿಯವರನ್ನು ಸಾಹಿತ್ಯ–ಸಂಸ್ಕೃತಿ–ಸಂಶೋಧನೆಯಲ್ಲಿ, ವೈಚಾರಿಕತೆಯಲ್ಲಿ, ಅವರನ್ನು ಸರಿಗಟ್ಟಲು ಸಾಧ್ಯವಿಲ್ಲ. ಕಲಬುರ್ಗಿಯವರಿಗೆ ಕಲಬುರ್ಗಿಯವರೇ ಸಾಟಿ. ಅವರಿಗೆ ಸಮಾನ ವ್ಯಕ್ತಿತ್ವ ಮತ್ತೊಂದಿಲ್ಲ. ಇಂತಹ ಮಹಾನ್ ಸಂಶೋಧಕನ ಹೆಸರುಳಿಯಬೇಕು. ಅದೂ ಧಾರವಾಡದಲ್ಲಿ ಅವರ ನೆನಪಿನ ಒಂದು ಸಂಶೋಧನ ಸಂಸ್ಥೆಯನ್ನು ತೆರೆಯಬೇಕು. ಅವರ ಹೆಸರಿನಲ್ಲಿ ಪ್ರಶಸ್ತಿ ಸ್ಥಾಪಿಸಬೇಕು. ಅವರ ವಿದ್ವತ್ ಪರಂಪರೆ ನಾಡಿನ ಮುಂದಿನ ಜನಾಂಗಕ್ಕೆ ದಾರಿ ದೀಪವಾಗಬೇಕು. ಮೊದಲು ಅದಕ್ಕೆ ನನ್ನಿಂದ ಅಲ್ಪ ಕಾಣಿಕೆ" ಎಂದು ಆರ್ಥಿಕ ನೆರವು ಘೋಷಿಸಿದರು. ಇದು ಅವರ ಜ್ಞಾತಿ ಕಾಳಜಿಯ ಪ್ರೇಮವನ್ನು ತೋರುವುದು. ಆಗ ನೆರೆದ ಎಲ್ಲ ಮಠಾಧೀಶರು, ಶಿಷ್ಯ ಬಳಗ, ಅಭಿಮಾನಿಗಳು ತಮಗೆ ನೀಗುವಷ್ಟು ಆರ್ಥಿಕ ನೆರವು ಘೋಷಣೆ ಮಾಡಿದರು. ಪಾವಟೆಯವರ ಗದ್ದಿಗೆ ಮುಂಭಾಗದಲ್ಲಿ ಪೆಂಡಾಲ್ ಹಾಕಿ, ಬಂದವರಿಗೆ ನೆರಳು ಮಾಡಿದ್ದರು. ಮುಂದಿನ ಸಾಲಿನಲ್ಲಿ ಶಿರೂರ ಗುರುಗಳು, ಕಾಪಸೆ ಗುರುಗಳು, ಗೊರುಚ ವಸ್ತ್ರದ ಅವರು, ಹಿಂದಿನ ಸಾಲಿನಲ್ಲಿ ನಾವು ಸಿದ್ದನಗೌಡ ಪಾಟೀಲರು, ರಂಗರಾಜ ವನದುರ್ಗ, ದಿಬ್ಬದ ಇವರೆಲ್ಲ. ಇದನ್ನೆಲ್ಲ ಬಿಸಿ ಉಸಿರಿನಿಂದ ನೋಡುತ್ತ ಆಲಿಸುತ್ತಿರುವಾಗ, ಶಬ್ದ–ಪದ–ಭಾವದಾಚೆ ಉಳಿವ, ಅವರೆಲ್ಲರ ಭಕ್ತಿ ನುಡಿಯಲ್ಲಿ ವ್ಯಕ್ತಿಯ ವ್ಯಕ್ತಿತ್ವದ ಆಂತರ್ಯ ಸಾರುತ್ತಿತ್ತು. ಸಮಾಧಿಯಾದ ಮೇಲೆ ಕೆಲವು ತೀರ್ಮಾನಗಳನ್ನು, ಮುಂದಿನ ನಡೆಗಳನ್ನಾಡಿದರು. ಬಸವಣ್ಣ ಕಲ್ಯಾಣವನ್ನು ಕತ್ತಲಲ್ಲಿ ತೇಲಿಬಿಟ್ಟಂತೆ, ಆಧುನಿಕ ಬಸವಣ್ಣನಂತೆ ಮೆರೆದು, ಬಸವ ಬೆಳಗನ್ನು ತನ್ನ ಹಿಡಿಯಲ್ಲಿ ತಂದು, ಒಂದಿನಿತು ಚಲ್ಲಿ ಮರೆಯಾದ ವಿದ್ವಾನ್ ಮುಖದ ಕೊನೆಯ ದರ್ಶನ ಪಡೆವ ಹಂಬಲದ 'ವೇಷ ಡಂಬಕ'ನೊಬ್ಬ ಬಂದು ನೇರವಾಗಿ ಆತ್ಮಸುಖಿಸಂಗ ಬಯಸುವ ದಂಡು ಸೇರಿ, 'ನಗುಮುಖದಿ ಅಂತ್ಯಗೊಂಡ ಆತ್ಮ–ಪರಮಾತ್ಮನನ್ನು ಪಡೆದ ಜೀವಾತ್ಮನ' ಮುಖವನ್ನು ಒಮ್ಮೆ ನೋಡಿದ. ದರ್ಶನ ಪಡೆದಾಕ್ಷಣ, ಬಿಕ್ಕಿ–ಬಿಕ್ಕಿ ದುಃಖ ಉಮ್ಮಳಿಸಿ ಬಂದು ವತ್ತರಿಸಿದ್ದು, ಆತನ ರೂಪ ನನ್ನ ಗಮನಕ್ಕೆ ಬಂದಿತು. ಆ ವೇಷಧಾರಿಯನ್ನೊಮ್ಮೆ ದಿಟ್ಟಿಸಿದೆ. ಅವನು ನಿಜವಾದ ಜ್ಞಾತಿ ಪ್ರೇಮಿ. ಮಾನವ ಪ್ರೇಮಿ. ಆ ವೇಷ ಮರೆಸಿಕೊಂಡು ಬಂದವನನ್ನು ಪುನಃ ನೋಡಿದೆ. ಆ ದೃಶ್ಯ ಅಪರೂಪವೆನಿಸುವಂತಿತ್ತು. ಸೋಜಿಗವೂ ಆಯಿತು. ಆತನನ್ನು ಅಡಿಯಿಂದ ಮುಡಿಯವರೆಗೆ ನೋಡಿದೆ.

ಕಲಬುರ್ಗಿಯವರ ಸಮಾಧಿ ಬಳಿ ಬಂದು ಹೂ ಹಾಕಲು ನಿಂತನು. ಆತನೊಬ್ಬ ಸಾಮಾನ್ಯ ಮನುಷ್ಯ. ಮಹಾನವಮಿ ಗೈದ ಕೊನೆಯ ಬಾರಿ ಶರಣರ ದರ್ಶನ ಪಡೆದು ಪಾವನಗೊಳ್ಳಲು ವೇಷ ಮರೆಸಿ ಬಂದಿಹನು. ನೋಡಿದರೆ ಥೇಟ ಮಠಾಧೀಶರ ಅನುಯಾಯಿಯಂತೆ ಅಥವಾ ಮಹಾಸ್ವಾಮಿಯಂತೆ ಮೂರು ಕಾವಿ ವಸ್ತ್ರಗಳನ್ನು ಒಂದು ಲುಂಗಿಯಾಗಿ, ಒಂದು ಮೈ ಹೊದಿಕೆಗಾಗಿ, ಮತ್ತೊಂದು ಮುಂಡಾಸು ಸುತ್ತಿಹನು. ಆತನೊಬ್ಬ ವಯಸ್ಸಾದ ವೇಷಧಾರಿ ಎನ್ನಲು ಆತ ಸುತ್ತಿದ ತಲೆ ವಸ್ತ್ರ, ಹೊದೆದ ಮೈವಸ್ತ್ರ, ಅದರ ಅಡಿಯಲ್ಲಿ ಉದ್ದಾಗಿ ಬನಿಯನ್ ಇಣುಕುತ್ತಿತ್ತು. ಮುಂಡಾಸು ಸರಿಯಾಗಿ ಸುತ್ತಲಾಗಿಲ್ಲ. ಈ ಮನುಷ್ಯ ಹೀಗೇಕೆ ವೇಷ ಬದಲಾಯಿಸಿಕೊಂಡಿದ್ದಾನೆ ಎಂದು ನನ್ನಷ್ಟಕ್ಕೆ ನಾನು ಆಲೋಚಿಸಿಕೊಂಡೆ, ಆಗ ಹೊಳೆಯಿತು. ಜನಸ್ತೋಮ, ಪೊಲೀಸರ ನೂಕು ನುಗ್ಗಲು, ಅವರ ಅಟ್ಟುವಿಕೆ ಇವುಗಳಿಂದ ಪಾರಾಗಬೇಕೆಂದು, ಕಾವಿಧಾರಿ ಸ್ವಾಮಿಗಳ ವೇಷ ಹಾಕಿದರೆ, ತಾನು ನೇರವಾಗಿ ಸಮಾಧಿ ಬಳಿ (ಹತ್ತಿರದಲ್ಲಿ) ಆ ದರ್ಶನ ಪಡೆಯಬಹುದಲ್ಲವೆನ್ನುವ ವಿಚಾರವಿರಬಹುದೆಂದೆನಿಸಿತು. ಇದು ಕಲಬುರ್ಗಿಯವರನ್ನ ಕಾಣುವ ತವಕದ ವ್ಯಕ್ತಿತ್ವಕ್ಕೆ ನಿದರ್ಶನ.

ಕಲಬುರ್ಗಿಯವರ ತಾತ್ವಿಕತೆಯನ್ನು ವಿರೋಧಿಸುವವರು ಸಮಾಧಿಯ ಮೇಲೆ ಓಡಾಡಿ (ಮಠಾಧೀಶರನ್ನು ಹೊರತುಪಡಿಸಿ) ತಾವೂ ಚಿಂತನಪರ ಎಂದು ತೋರಿಸಿಕೊಳ್ಳಲು ತಮ್ಮ ಯಜಮಾನಿಕೆಯನ್ನು ಸಾರುವವರೂ ಇದ್ದರು. ಒಟ್ಟಾರೆಯಾಗಿ ಜಗತ್ತಿನಲ್ಲಿ ಬೆಳೆದರೆ ಕಲಬುರ್ಗಿಯವರಂತೆ ಬೆಳೆಯಬೇಕು. ಅಷ್ಟೇ ಅಲ್ಲ ಎಂಥ ವೈರಿಯಾದರೂ ಇವರ ವ್ಯಕ್ತಿತ್ವ ಮೆಚ್ಚಿ ಹೊಗಳುವಂತಹುದು, ಅವರ ನಡೆದ ಮಾರ್ಗದ ನಡೆ ತೋರುವುದು. ಇಂತಹ ಮಹಾಮಾರ್ಗ ಕ್ರಮಿಸಿದ ಶರಣರಿಗೆ ನಾವು ನಮಿಪೆವು. ಇಂದಿಗೆ ಗುರುಗಳು ನಮ್ಮನ್ನಗಲಿ ಒಂದು ವರ್ಷ ಗತಿಸಿದರೂ, ಈ ಪ್ರಜಾಪ್ರಭುತ್ವದ ವ್ಯಂಗ್ಯದಲ್ಲಿ ನ್ಯಾಯ ಸಿಗುತ್ತಿಲ್ಲ. ಹಂತಕರನ್ನು ಬಂಧಿಸುವಲ್ಲಿ ಸರ್ಕಾರ ಸರಿಯಾದ ಕಾಳಜಿಯನ್ನು ವಹಿಸುತ್ತಿಲ್ಲ. ವೈಚಾರಿಕ ಮನಸ್ಸುಗಳಿಗೆ, ಈ ಗಳಿಗೆ ತುಂಬ ಪಾಷಾಣವೆನಿಸಿದೆ. ನಾವು ಎಂಥ ವ್ಯವಸ್ಥೆಯಲ್ಲಿ ಬದುಕುತ್ತಿದ್ದೇವಲ್ಲವೆನಿಸುವುದು. ನಮ್ಮನ್ನಾಳುವ ಪ್ರಭುಗಳು ಭರವಸೆಯ ಸೂರರು. ಮಾನ್ಯ ಮುಖ್ಯಮಂತ್ರಿಗಳಾದಿಯಾಗಿ ಎಷ್ಟೋ ಮಂತ್ರಿ ಮಹನೀಯರು ಕಲಬುರ್ಗಿಯವರನ್ನು ಹತ್ಯೆಗೈದ ದುಷ್ಟರನ್ನು ಶಿಕ್ಷೆಗೊಳಪಡಿಸುತ್ತೇವೆ ಎಂದು, ಅವರ ಹೆಸರಿನಲ್ಲಿ ಧಾರವಾಡದಲ್ಲಿ ಸಂಶೋಧನ ಕೇಂದ್ರ ತೆರೆಯುತ್ತೇವೆ ಎಂದು ಘೋಷಿಸಿಕೊಂಡು ಚಪ್ಪಾಳೆ ಗಿಟ್ಟಿಸಿಕೊಂಡು, ಒಂದು ಮಾತಿಗೆ ಒಂದು ವರುಷವಾದರೂ ನೆರವೇರಿಸಲಾಗಿಲ್ಲವೆಂದರೇನು ಅರ್ಥ ? ನಾವೆಲ್ಲ ನಾಚಿಗೆ ಬಿಟ್ಟು ಬದುಕಿದ್ದೇವೆಂದರ್ಥ. ನ್ಯಾಯಕ್ಕೆ ಹೋರಾಟದ ಅಗತ್ಯವಿದೆ.

ಕೆಲವು ಪೊಳ್ಳು ವಿದ್ವಾಂಸರು ತಮ್ಮ ಹೇಳಿಕೆಗೂ ಬದ್ಧರಾಗಲಿಲ್ಲ. ಇದು ನಾವು ಕಾಣುವ ಕಾಲದ ವ್ಯಂಗ್ಯ. ಆದಷ್ಟು ಶೀಘ್ರದಲ್ಲಿ ಎಂ. ಎಂ. ಕಲಬುರ್ಗಿ ಗುರುಗಳ ಹೆಸರಿನ ಸಂಶೋಧನ ಕೇಂದ್ರ ಧಾರವಾಡದಲ್ಲಿ ಆರಂಭಗೊಳ್ಳಲು ನಾವೆಲ್ಲ ಶ್ರಮಿಸಬೇಕಿದೆ. ಅವರ ಜ್ಞಾನದ ಪರಿಸರ ಪುನಃ ನೆಲದಲ್ಲಿ ನೆಲೆಯೂರುವಂತಾದರೆ ನಮ್ಮ ಬದುಕು ಸಾರ್ಥಕವೆಂದು ಭಾವಿಸಿದ್ದೇನೆ.

**ಡಾ॥ ಸಣ್ಣವೀರಣ್ಣ ದೊಡ್ಡಮನಿ**
ಸಹಾಯಕ ಪ್ರಾಧ್ಯಾಪಕರು, ಭಂಡಾರಿ ಕಾಲೇಜು
ಗುಳೇದಗುಡ್ಡ – ೫೮೭ ೨೦೩, ಬಾದಾಮಿ ತಾಲೂಕು, ಬಾಗಲಕೋಟೆ ಜಿಲ್ಲೆ









# ಅರಿವು

ಡಾ॥ ಸುಧಾ ಕಾಮತ್

ಶ್ರಾವಣ ಮಾಸ ಬಂತೆಂದರೆ, ಹೆಂಗಳೆಯರಲ್ಲಿ ಉತ್ಸಾಹ ಚಿಮ್ಮಲು ಶುರು. ಆ ತಿಂಗಳ ಪೂರ್ತಿ ಶುಕ್ರವಾರ–ಭಾನುವಾರ ಹಬ್ಬ. ಮುತ್ತೈದೆಯರೆಲ್ಲ ಗರಿಕೆ ಹುಲ್ಲು ಮತ್ತು ವಿವಿಧ ಹೂಗಳ ಎಸಳಿನಿಂದ 'ಚೂಡಿ' ಕಟ್ಟಬೇಕು, ತರಾವರಿ ನೈವೇದ್ಯ ತಯಾರಿಸಬೇಕು, ತುಳಸಿ ಪೂಜೆ ಮಾಡಬೇಕು, ನಂತರ ಹಿರಿಯ ಮುತ್ತೈದೆಯರಿಗೆ ಚೂಡಿ ಕುಂಕುಮ ನೀಡಿ ಸುಮಂಗಲಿಯಾಗೇ ಇರುವ ಆಶೀರ್ವಾದ ಪಡೆಯಬೇಕು. ಹಾಗಾಗಿ ಹಿರಿಯ ಮುತ್ತೈದೆಯರು ಇರುವ ಮನೆಗಳು ನೆಂಟರಿಷ್ಟರಿಂದ ಗಿಜಿಗುಡುತ್ತವೆ. ಬಂದವರಿಗೆ ಆದರ, ಆತಿಥ್ಯ, ಆಶೀರ್ವಾದ. ಅಂತೂ ಸಂಭ್ರಮದ ವಾತಾವರಣ !

ಶಾರದಾ ಮಾಯಿಗೆ ಈಗ ಕುಟುಂಬದ ಹಿರಿಯಳ ಪಟ್ಟ. ಸುಂದರವಾಗಿ ಚೂಡಿ ಕಟ್ಟುತ್ತಾರೆ, ರುಚಿರುಚಿಯಾದ ಪ್ರಸಾದ ಮಾಡುತ್ತಾರೆ, ಒಳ್ಳೆಯ ಅತಿಥೇಯರು ಎಂಬ ಹೆಗ್ಗಳಿಕೆ ಬೇರೆ. ಹಾಗಾಗಿ, ಈ ತಿಂಗಳ ಪೂರ್ತಿ ತಮ್ಮ ಕೈಲಾಗದಿದ್ದರೂ ಲವಲವಿಕೆಯಿಂದ ಓಡಾಡಿಕೊಂಡು ಇರುತ್ತಾರೆ. ಹಿಂದೆಲ್ಲ ಅವರೇ, ರಸ್ತೆ ಪಕ್ಕದಿಂದ ಗರಿಕೆ ಹುಲ್ಲು, ಪಕ್ಕದ ಬೀದಿಯಲ್ಲಿಯ ಶೆಣ್ಯೈ ಮಾಮನ ಮನೆಗೆ ಹೋಗಿ ರತ್ನಗಂಧಿ, ಸುಗಂಧಿ ಹೂ ತರುತಿದ್ದುದು. ಇರುವ ಅಪಾರ್ಟ್‌ಮೆಂಟ್‌ನಲ್ಲಿ ಹೂ ಬೆಳೆಸಲು ಜಾಗ ಎಲ್ಲಿಂದ ಬರಬೇಕು ? ಮಿಕ್ಕಂತೆ ಬೇರೆ ಹೂ, ಧವಣ, ಮುರುಗ ಇತ್ಯಾದಿಗಳನ್ನು ಕಿಣಿ ಮಾಮ್, ತಮ್ಮ ಕಛೇರಿಯ ಪಕ್ಕದಲ್ಲೇ ಇರುವ ಮಾರ್ಕೆಟ್ಟಿನಿಂದ ತರುತಿದ್ದರು. ಆದರೆ ಈ ವರ್ಷ ಸಮಸ್ಯೆ ಆಗಿದೆ. ಶಾರದಾ ಮಾಯಿಗೆ ಮಂಡಿನೋವು. ಓಡಾಡುವುದೇ ಕಷ್ಟ. ಕಿಣಿ ಮಾಮ್ ನಿವೃತ್ತಿ ಹೊಂದಿದ್ದಾರೆ, ದೂರದ ಮಾರ್ಕೆಟ್‌ಗೆ ಹೋಗಲಾಗುವುದಿಲ್ಲ. ಬಿಎ ಅಂತಿಮ ವರ್ಷದಲ್ಲಿದ್ದ ಮಗಳು ಶ್ವೇತಾಳಿಗೆ ಅವರು ಗರಿಕೆ ಹುಲ್ಲು ಮತ್ತು ಶೆಣ್ಯೈ ಮಾಮನ ಮನೆಯಿಂದ ರತ್ನಗಂಧಿ, ಸುಗಂಧಿ ಹೂ ತರಲು ಕೇಳಿಕೊಂಡರು.

"ಇಸ್ಸಿ , ರಸ್ತೆ ಪಕ್ಕದಲ್ಲಿ ಬರೀ ಗಲೀಜು, ಅಲ್ಲಿಂದ ಗರಿಕೆ ತರಲು ನನಗಾಗದು. ಮತ್ತೆ, ಶೆಣ್ಯೈ ಮಾಮನ ಸೊಸೆ ಹೂ ಕೊಡಲು ಒಂಥರಾ ಮಾಡುತ್ತಾರೆ. ನಾನು ಹೋಗುವುದಿಲ್ಲ" ಎಂದಳು ಶ್ವೇತಾ. ಮುಂದುವರಿದು, "ಏನು, ಈ ದೊಡ್ಡ ತುಳಸಿ ಪೂಜೆ ! ಅದನ್ನು ಮಾಡಿದವರೆಲ್ಲಾ ಮುತ್ತೈದೆಯರಾಗೇ ಇರುತ್ತಾರೋ ? ವಿಧವೆಯಾರಾಗೋದೇ ಇಲ್ಲವೋ ? ಬರಿಯ ಮೂಢನಂಬಿಕೆ" ಎಂದುಬಿಟ್ಟಳು.

ಶಾರದಾ ಮಾಯಿಯ ಕಣ್ಣಲ್ಲಿ ನೀರು ಬಂತು. ಕಟ್ಟಿದ ಗಂಟಲಲ್ಲಿ, "ನೀನು ತರದಿದ್ದರೆ ಬೇಡ. ಆದರೆ, ಅಪಶಕುನ ಮಾತನಾಡಬೇಡ" ಎಂದು ಹೇಳಿದಾಗ, ಅಲ್ಲೇ ಇದ್ದು ಕೇಳಿಸಿಕೊಳ್ಳುತ್ತಿದ್ದ ಮಗ, ಕಾಲೇಜೊಂದರ ಪ್ರೊಫೆಸರ್ ಡಾ॥ ಮಾಧವ, " ಅಮ್ಮಾ, ನಿನಗೇನು ಬೇಕು ಹೇಳು. ನಾನು ತಂದು ಕೊಡುತ್ತೇನೆ ಅಂದ."

"ಆಹಾ. ತಂದುಕೊಡ್ತಾನಂತೆ ! ಏನಪ್ಪಾ , ಯಾವಾಗಿಂದ ನಿನಗೆ ಈ ದೈವ ಭಕ್ತೀನಪ್ಪಾ ? ಅಪ್ಪ ಅಷ್ಟು ಖರ್ಚು ಮಾಡಿ, ಮುಂಜಿ ಮಾಡಿ ಹಾಕಿದ ಜನಿವಾರಾನಾ ಕಿತ್ತುಹಾಕಿದವನಲ್ಲವಾ ನೀನು ? ಇನ್ನು ಪೂಜೆ ಪುನಸ್ಕಾರ ಬಿಟ್ಟು ಯಾವ ಕಾಲ ಆಯಿತೋ. ಅಲ್ಲದೆ ಶುಚಿ ಕುರಿತು ವಿದ್ಯಾರ್ಥಿಗಳಿಗೆ ಪಾಠ ಹೇಳುವ ಪ್ರೊಫೆಸರ್ ನೀನು. ಆ ಗಲೀಜು ಗರಿಕೆ ಹೇಗ್ ತರ್ತೀಯಾ?" ಎಂದು ಅಣಕವಾಡಿದಳು ಶ್ವೇತಾ.

"ನನ್ನ ಗೆಳೆಯ ಡಾ॥ ವಿಕಾಸ್ ಮನೆ ಅಂಗಳದಲ್ಲಿ ಬೇಕಾದಷ್ಟು ಗರಿಕೆ ಹುಲ್ಲಿದೆ. ಹೇಳಿದರೆ ತಂದುಕೊಡ್ತಾನೆ ಅಮ್ಮ. ಅವನಿಗೆ ನೀನು ಮಾಡುವ ಪ್ರಸಾದ ತುಂಬ ಇಷ್ಟ. ಅದನ್ನು ಕೊಟ್ಟರಾಯಿತು" ಅಂದು ನಗೆಯಾಡಿದ ಮಾಧವ. "ಬೇರೆ ಹೂ ತರುವ ಜವಾಬ್ದಾರಿಯೂ ನನ್ನದೇ" ಎಂದು ಅವನು ಹೇಳಿದಾಗ, ಶ್ವೇತಾ, "ಅಮ್ಮಾ, ಅಣ್ಣನಿಗೂ ನೀನು ಮಾಡುವ ಚುರ್ಮುಂಡೆ, ಪಂಚಕಜ್ಜಾಯ, ಗೋಡಂಬಿ ಬರ್ಫಿ ಆಸೆ. ಅದಕ್ಕೇ ಇಷ್ಟೆಲ್ಲಾ" ಎಂದು ವ್ಯಂಗ್ಯವಾಡಿದರೂ, ಶಾರದಾ ಮಾಯಿ ತುಂಬು ಹೃದಯದಿಂದ, "ದೇವರು ನಿನಗೆ ಒಳ್ಳೇದು ಮಾಡಲಿ ಮಗಾ" ಎಂದು ಹಾರೈಸಿದರು.

ಶ್ರಾವಣ ಮಾಸದ ತುಳಸಿಪೂಜೆ ಸಾಂಗವಾಗಿಯೇ ನಡೆಯಿತು. ಈ ಸಲದ ಶಾರದಾ ಮಾಯಿಯ ಚೂಡಿ ಎಲ್ಲ ಸಲಕ್ಕಿಂತ ಚೆನ್ನಾಗಿತ್ತು. ಕೆಲ ಅಪರೂಪದ ಹೂಗಳು ಅದರಲ್ಲಿದ್ದವು. ಮಾಯಿಗೆ ಖುಷಿಯೋ ಖುಷಿ. ಅವರ ಸಂತೋಷಕ್ಕೆ ಇನ್ನೊಂದು ಕಾರಣವೆಂದರೆ, ಚೂಡಿ ಕೊಡಲು ಬಂದ ನೆಂಟರ ಮೂಲಕ ಶ್ವೇತಾಗೆ ಒಂದು ಒಳ್ಳೆಯ ನೆಂಟಸ್ಥಿಕೆ ಕೂಡಿಬಂದದ್ದು. ಹುಡುಗ ಡಾಕ್ಟರ್, ಸರ್ಜನ್. ಸರ್ಕಾರಿ ಆಸ್ಪತ್ರೆಯೊಂದರಲ್ಲಿ ಕೆಲಸ ಮಾಡುತಿದ್ದ. "ವರದಕ್ಷಿಣೆ ಏನೂ ಬೇಡ. ಒಂದು ದೊಡ್ಡ ಛತ್ರದಲ್ಲಿ ಚೆನ್ನಾಗಿ ಮದುವೆ ಮಾಡಿಕೊಡಿ" ಅಂದಿದ್ದರು ವರ, ಅವಿನಾಶನ ತಂದೆ. ಮದುವೆ, ಶ್ವೇತಾಳ ಪರೀಕ್ಷೆಯ ನಂತರ ಎಂದಾಯಿತು. ಅವಿನಾಶ್ ಯುರಾಲಜಿ ಸೂಪರ್ ಸ್ಪೆಷಾಲಿಟಿ ಮಾಡಬೇಕೆಂದಿದ್ದ. ಅದಕ್ಕೆ ಪರೀಕ್ಷೆಗೆ ತಯಾರಿ ನಡೆಸಿದ್ದ. ಅದರ ಫಲಿತಾಂಶವೂ ಅಷ್ಟೊತ್ತಿಗೆ ಬರುವುದರಲ್ಲಿತ್ತು.

ಶ್ವೇತಾ ಈ ಭೂಮಿಯ ಮೇಲೇ ಇರಲಿಲ್ಲ. ಸುಂದರಾಂಗ ವರ, ಸರ್ಜನ್ ಬೇರೆ. ತಮ್ಮ ಗೆಳತಿಯರ ತಂಡದಲ್ಲಿ ತನಗೇ ಮೊದಲು ಮದುವೆ ಎಂಬ ಹೆಮ್ಮೆ ಬೇರೆ. ಅವಿನಾಶ್ ಬಿಡುವಿದ್ದಾಗಲೆಲ್ಲಾ ಫೋನು ಮಾಡುತ್ತಿದ್ದ. ಒಮ್ಮೊಮ್ಮೆ ಹೊರಗೆ ಸುತ್ತಾಡಲೂ ಕರೆದುಕೊಂಡು ಹೋಗುತ್ತಿದ್ದ. ಅಂತೂ ಇಂತೂ ಇಬ್ಬರ ಪರೀಕ್ಷೆಗಳೂ ಮುಗಿದವು. ಅಷ್ಟೊತ್ತಿಗೆ ಮದುವೆ ತಯಾರಿಯೂ ಶುರುವಾಗಿತ್ತು. ಛತ್ರದ ಬುಕ್ಕಿಂಗ್, ಕೇಟರಿಂಗ್, ಬಟ್ಟೆ, ಒಡವೆ, ಖರೀದಿ... ಹೀಗೆ.

ಇದ್ದಕ್ಕಿದ್ದ ಹಾಗೆ, ಮದುವೆಗೆ ಹತ್ತು ದಿನ ಬಾಕಿ ಇರುವಾಗ ಶ್ವೇತಾ ಬಂದು, "ಅವಿನಾಶ್‌ಗೆ ಕಡಿಮೆ ರ್‍ಯಾಂಕಿಂಗ್ ಬಂದಿದೆ. ಸರ್ಕಾರಿ ಕಾಲೇಜಿನಲ್ಲಿ ಸೀಟು ಸಿಗುವುದಿಲ್ಲವಂತೆ. ಖಾಸಗಿ ಮ್ಯಾನೇಜ್‌ಮೆಂಟ್ ಕೋಟಾಗೆ ಪ್ರಯತ್ನ ಮಾಡಬೇಕಂತೆ. ಅದಕ್ಕೆ ೫೦ ಲಕ್ಷ ಡೊನೇಶನ್. ೨೫ಅನ್ನು ನಾನು ಹೇಗಾದರೂ ಅಡ್ಜಸ್ಟ್ ಮಾಡುತ್ತೇನೆ. ಉಳಿದ ೨೫ ಲಕ್ಷ ನೀನು ಪ್ರಯತ್ನ ಮಾಡು ಅಂದರು" ಎಂದು ಹೇಳಿದಾಗ, ಕಿಣಿ ಮಾಮ್ ತಲೆ ಮೇಲೆ ಕೈ ಹೊತ್ತು ಕುಳಿತರು. ಎಲ್ಲಿಂದ ತರುವುದು ಅಷ್ಟು ಹಣ? ಈಗಾಗಲೇ ಮದುವೆ ತಯಾರಿಗೆಂದು ಸಾಕಷ್ಟು ಹಣ ಚೆಲ್ಲಿಯಾಗಿತ್ತು. ತಮ್ಮ ನಿವೃತ್ತಿ ನಂತರ ಬಂದ ಹಣವನ್ನು ಮೂರು ಭಾಗ ಮಾಡಿ, ಮಗ, ಮಗಳು ಮತ್ತು ಶಾರದಾ ಮಾಯಿಯ ಹೆಸರಿನಲ್ಲಿ ಇರಿಸಿದ್ದರು. ಈಗ ಶ್ವೇತಾಳ ಭಾಗದ್ದು ಖರ್ಚಾಗಿತ್ತು. ಅದೂ ಸಾಲದೆ ಬಂದು ಪತ್ನಿಯ ಹೆಸರಿನಲ್ಲಿ ಇಟ್ಟದ್ದರ ಒಂದು ಪಾಲನ್ನು ತೆಗೆಯಬೇಕಾಗಿ ಬಂದಿತ್ತು. ಮಗನಿಗೆ ಈ ಕುರಿತು ಹೇಳಿರಲಿಲ್ಲ. ಅವನಿಗೆ ಮೊದಲೇ ಈ ಅದ್ದೂರಿ ಮದುವೆ ಬಗ್ಗೆ ಅಸಮಾಧಾನವಿತ್ತು. ಆದರೆ ಅವನ ಮಾತಿಗೆ ತಂದೆ-ತಾಯಿ ಇಬ್ಬರೂ ಕಿವಿಗೊಟ್ಟಿರಲಿಲ್ಲ. ಅಲ್ಲದೆ, ಶ್ವೇತಾಳನ್ನು ಅವನು ಒಪ್ಪಿಸಲು ನೋಡಿದರೆ, ಅವಳು ಸಹ ಇಂಥದ್ದೇ ಮದುವೆ ಬೇಕು, ಎಲ್ಲ ಸಂಪ್ರದಾಯಗಳೂ ಸಾಂಗೋಪಸಾಂಗವಾಗಿ ನಡೆಯಬೇಕು ಎಂದು ಹಟ ಹಿಡಿದಿದ್ದಳು. ಹಾಗಾಗಿ ಅವನು ಸುಮ್ಮನಾಗಿಬಿಟ್ಟಿದ್ದ. ಈಗ ಈ ಸಮಸ್ಯೆಯನ್ನು ಅವನ ಮುಂದೆ ಎತ್ತದೇ ನಿರ್ವಾಹವಿರಲಿಲ್ಲ.

ಕಿಣಿ ಮಾಮ್ ಮೈಯೆಲ್ಲಾ ಹಿಡಿ ಮಾಡಿಕೊಂಡೇ, ಮಾಧವ ತನ್ನ ಪಾಲಿನ ಹಣವನ್ನು ಕೊಡಬಹುದೇ, ಜೊತೆಗೆ ಎಲ್ಲಾದರೂ ಸಾಲ ಮಾಡಿ ಹಣ ಹೊಂದಿಸಬಹುದೇ ಎಂದು ಕೇಳಿದಾಗ ಸಾಮಾನ್ಯವಾಗಿ ಶಾಂತ ಸ್ವಭಾವದ ಮಗ ಕಿಡಿಕಿಡಿಯಾದ. "ವರದಕ್ಷಿಣೆ ಬೇಡ ಅಂಥಾ ಹೇಳಿದರಲ್ಲಪ್ಪಾ. ಈಗ ಏನಿದು?" ಎಂದು ಜೋರಾಗಿಯೇ ಕೇಳಿದ.

"ಅವರಿಗೂ ವರದಕ್ಷಿಣೆ ಬೇಡವಿತ್ತು. ಆದರೆ ಈಗ ಪರಿಸ್ಥಿತಿ ಹಾಗಿದೆ" ಎಂದು ಶ್ವೇತಾ ಸಮಜಾಯಿಷಿ ನೀಡಲು ಬಂದಳು.

"ಏನಂಥಾ ಪರಿಸ್ಥಿತಿ? ಹೇಗಾದರೂ ಅಷ್ಟೊಂದು ಹಣ ಚೆಲ್ಲಿ, ಹುಡುಗಿಯ ಕಡೆಯಿಂದಾದರೂ ಕಿತ್ತು ಕೊಂಡು ಯುರಾಲಜಿ ಮಾಡಲೇ ಬೇಕು ಅಂಥಾ ಏನಿದೆ? ಈಗ ಜೀವನ ನಡೆಯುತ್ತಿಲ್ಲವೇ?" ಎಂದು ರೇಗಿದ ಮಾಧವ.

"ಈ ಪದವಿ ಸಿಕ್ಕರೆ, ತಮ್ಮದೇ ವಿಭಾಗ ತೆರೆಯಬಹುದು. ಮೇಲೇರಲು ಒಳ್ಳೆಯ ಅವಕಾಶ ಎನ್ನುತ್ತಾರೆ. ಅದೂ ನಿಜವೇ ಅಣ್ಣಾ" ಎಂದಳು ಶ್ವೇತಾ.

"ಹೌದು ಮಾಧವ. ಅಳಿಯನಿಗೆ ಒಳ್ಳೆಯ ಸ್ಥಾನಮಾನ ಸಿಕ್ಕರೆ ನಮ್ಮ ಶ್ವೇತಾಳಿಗೂ ಸಂತೋಷ ಅಲ್ಲವೇ" ಎಂದರು ಕಿಣಿ ಮಾಮ್.

"ಅದು ಅವರ ಸ್ವ ಸಾಮರ್ಥ್ಯದಿಂದ ಬರಬೇಕು. ಹೀಗೆ ಕಿತ್ತುಕೊಂಡು ಅಲ್ಲ" ಎಂದ ಮಾಧವ ತನ್ನ ಪಟ್ಟು ಬಿಡದೆ.

ತಂದೆ ಪೆಚ್ಚಾದರು. ಮಗನ ಆದರ್ಶ, ಅವನ ನಿಲುವು ಅವರಿಗೆ ತಿಳಿದದ್ದೇ. ಆದರೆ, ಅವಶ್ಯವಿದ್ದಾಗ ಸ್ವಲ್ಪವೂ ರಾಜಿ ಮಾಡಿಕೊಳ್ಳುವುದಿಲ್ಲ ಅಂದರೆ? "ಮಾಧವ, ನಾವೀಗ ಒಪ್ಪದಿದ್ದರೆ, ಈ ಮದುವೆ ಮುರಿದುಬೀಳುತ್ತದೆ, ನಿನ್ನ ತಂಗಿಯ ಬಾಳಿನ ಪ್ರಶ್ನೆ ಇದು" ಎಂದು ಮತ್ತೊಮ್ಮೆ ಅವನನ್ನು ಒಪ್ಪಿಸಲು ನೋಡಿದರು. ತಾಯಿಯೂ ದನಿಗೂಡಿಸಿದರು, "ಎಲ್ಲಾ ತಯಾರಿ ಆಗಿದೆ ಮಗು. ಈಗ ಮದುವೆ ನಿಂತರೆ, ಕಷ್ಟ, ನಷ್ಟ, ಭ್ರಷ್ಟ!" ಎಂದರಾಕೆ.

"ಅಮ್ಮಾ, ಇದು ದುಡ್ಡಿನ ಪ್ರಶ್ನೆ ಅಲ್ಲ. ವರದಕ್ಷಿಣೆ ತೆಗೆದುಕೊಳ್ಳುವವರಲ್ಲಿ ವ್ಯಾಪಾರೀ ಮನೋಧರ್ಮ ಇರುತ್ತದಮ್ಮಾ. ಅವರು ಹೆಣ್ಣುಮಕ್ಕಳನ್ನು ಗೌರವದಿಂದ ಕಾಣಲಾರರು. ಅಲ್ಲಿ ಶ್ವೇತಾ ಖಂಡಿತ ಸುಖವಾಗಿರುವುದಿಲ್ಲ" ಎಂದ ಮಾಧವ.

ಶ್ವೇತಾ ಮಧ್ಯೆ ಬಾಯಿ ಹಾಕಿ, "ಅಣ್ಣನಿಗೆ ಎಲ್ಲಿ ತನ್ನ ಪಾಲಿನ ಹಣ ಹೋಗಿಬಿಡುತ್ತದೋ ಎಂದು ಭಯ. ನನ್ನ ಸುಖದ ಬಗ್ಗೆ ಅವನಿಗೆಲ್ಲಿದೆ ಕಾಳಜಿ? ಅವನನ್ನು ಏನು ಗೋಗರೆಯುವುದು? ಅಪ್ಪಾ, ಈ ಮದುವೆ ನಡೆಯಲೇ ಬೇಕು. ನಾನು ಅವಿನಾಶನನ್ನು ಬಿಟ್ಟು ಇರಲು ಸಾಧ್ಯವೇ ಇಲ್ಲ. ನೀನೇ ಏನಾದರು ಮಾಡು" ಎಂದಳು.

"ಬದಲಿಗೆ, ನೀನೇ ಅವಿನಾಶನನ್ನು ಒಪ್ಪಿಸಬಾರದೇ? ಈ ಸಲ ಸಿಗದಿದ್ದರೆ ಬೇಡ. ಮುಂದಿನ ಸಲ ಪ್ರಯತ್ನ ಮಾಡಬಹುದಲ್ಲ" ಎಂದರು ಮಾಯಿ.

"ಅದು ಅಷ್ಟು ಸುಲಭ ಅಲ್ಲ ಅಮ್ಮಾ. ಯಾರದೋ ಶಿಫಾರಸ್ಸಿನಿಂದ ೫೦ಕ್ಕೆ ಸಿಗುವ ಹಾಗಿದೆ. ಮುಂದಿನ ವರ್ಷ ಹೇಗೋ, ಏನೋ? ನಿನಗೇನು ಗೊತ್ತು ಇವೆಲ್ಲಾ? ಓದಿದ್ದರೆ ಅರ್ಥ ಆಗುತ್ತಿತ್ತು." ಎಂದು ಶ್ವೇತಾ ನುಡಿದಾಗ ಮಾಯಿ ಸುಮ್ಮನೇ ಕುಳಿತುಬಿಟ್ಟರು.

"ಏನಾದರೂ ಮಾಡು ಅಂದರೆ ಏನು ಮಾಡಲಿ ಮಗಳೇ? ಮನೆಯ ಮೇಲೆ ಸಾಲ ಮಾಡೋಣ ವೆಂದರೆ, ಈ ಅಪಾರ್ಟ್‌ಮೆಂಟ್ ಮೇಲೆ ಅದು ಸಿಗುವುದಿಲ್ಲ. ನಿವೃತ್ತನಾದ ನನಗೆ ಇನ್ಯಾವ ಸಾಲ ಸಿಗುತ್ತದೆ ಹೇಳು?" ಕಿಣಿ ಮಾಮ್ ಹತಾಶೆಯಿಂದ ನುಡಿದರು.

"ಅಪ್ಪಾ, ಈ ಮನೆಯಲ್ಲಿ ಅರ್ಧ ಭಾಗ ನನ್ನದು. ಅದನ್ನು ಮಾರಿಬಿಡು. ೫೦-೬೦ ಲಕ್ಷ ಬರಬಹುದು. ನನ್ನ ಪಾಲು ಕೊಡು. ಆಗ ಸರಿಹೋಗುತ್ತದೆ" ಎಂದುಬಿಟ್ಟಳು ಶ್ವೇತಾ.

ಕಿಣಿ ಮಾಮ್ ಅವಕ್ಕಾಗಿಬಿಟ್ಟರು. ಬಹಳ ಕಷ್ಟಪಟ್ಟು ೧೦ ವರ್ಷದ ಹಿಂದೆ ಕೊಂಡ ಅಪಾರ್ಟ್‌ಮೆಂಟ್ ಅದು. ತಮ್ಮ ಸಂಬಂಧಿಕರಲ್ಲಿ ಕಿರಿಯರೆಲ್ಲಾ ಮನೆ ಕಟ್ಟಿಸಿಕೊಂಡ ಮೇಲೆ, ಮಧ್ಯ ವಯಸ್ಸು ದಾಟಿದ ಮೇಲೆ, ಇನ್ನು ನಿವೃತ್ತಿಹೊಂದಿದ ಮೇಲಾದರೂ ತಮ್ಮ ತಲೆಯ ಮೇಲೊಂದು ಸೂರಿಲ್ಲದಿದ್ದರೆ ಹೇಗೆ ಅಂತಾ ಯೋಚನೆ ಮಾಡಿ ತಮ್ಮ ಉಳಿತಾಯವನ್ನೆಲ್ಲ ಕೂಡಿ ಹಾಕಿ, ಮತ್ತೂ ಸಾಲ ಮಾಡಿ ಕೊಂಡದ್ದು. ಇದೀಗ ತಾನೇ ಸಾಲ ತೀರಿತ್ತು. ಸುಮಾರು ಮುಕ್ಕಾಲು ಪಾಲು ಮುಗಿದ ಮನೆಯಲ್ಲಿ ಮಾಯಿ ತಾವೇ ನಿಂತು, ಓಡಾಡಿ, ತಮಗೆ ಬೇಕಾದ ಹಾಗೆ ದೇವರ ಮನೆ, ಅಡುಗೆ ಮನೆ ಸಿದ್ಧಪಡಿಸಿದ್ದರು. ಅದು ಅವರ ಪ್ರೀತಿಯ ಗೂಡು. ಅದನ್ನು ಮಾರಿ ಹೋಗುವುದಾದರೂ ಎಲ್ಲಿಗೆ? ಇದನ್ನು ಹೇಳುತ್ತಿರುವುದು ತಮ್ಮ ಪ್ರೀತಿಯ ಮಗಳು. ತಮ್ಮ ಸಂಪ್ರದಾಯವೆಲ್ಲವನ್ನೂ ತ್ಯಜಿಸಿ ಬೇರೆಯೇ ದಾರಿ ಹಿಡಿದ ಮಗನೆಂದರೆ ಅವರಿಗೆ ಸ್ವಲ್ಪ ಅಸಡ್ಡೆಯೇ. ಆದರೆ ಈಗ...

ಮಗನತ್ತ ಕಣ್ಣು ಹಾಯಿಸಿದರೆ, ಅವನು ನಿರ್ಲಿಪ್ತನಂತೆ ಸುಮ್ಮನೆ ಕುಳಿತಿದ್ದ.

ಈಗ ಮಾತನಾಡಿದ್ದು ಶಾರದಾ ಮಾಯಿಯೇ. "ಮಾಧವ ಹೇಳಿದ್ದು ಸರಿ. ಮದುವೆಗೆ ಇಷ್ಟು ಹತ್ತಿರದಲ್ಲಿ ಹೀಗೆ ಬೇಡಿಕೆ ಇಡುವ ಸಂಬಂಧ ನಮಗೆ ಬೇಡ. ಹಾಗೆಯೇ, ಅಪ್ಪ ಅಮ್ಮನನ್ನು ಬೀದಿಗೆ ತಂದು ನಿಲ್ಲಿಸುವ ಮಗಳು ಇವಳು. ಅವಳಿಗಾಗಿ ನಾವು ಕೊರಗಬೇಕಾಗಿಲ್ಲ. ಹಣ ಕೊಡಲು ಸಾಧ್ಯವಿಲ್ಲ ಎಂದು ಹೇಳಿಬಿಡಮ್ಮಾ" ಎಂದವರು ದೃಢವಾಗಿ ಹೇಳಿದಾಗ ಕಿಣಿ ಮಾಮ್ ಆಶ್ಚರ್ಯದಿಂದ ಮಡದಿಯತ್ತ ನೋಡಿದರೆ, ಮಾಧವ ಹೆಮ್ಮೆ, ಗೌರವದಿಂದ ತಾಯಿಯತ್ತ ನೋಡಿದ.

**ಡಾ॥ ಸುಧಾ ಕಾಮತ್**
೧೩, ಹಿಮಗಿರಿ ಅಪಾರ್ಟ್‌ಮೆಂಟ್ಸ್
೪ನೇ ಮುಖ್ಯರಸ್ತೆ, ೧೫ನೇ ಅಡ್ಡರಸ್ತೆ, ಮಲ್ಲೇಶ್ವರ
ಬೆಂಗಳೂರು – ೫೬೦ ೦೫೫

# ತಿಥಿ ಇಲ್ಲಿ ಯಾರೂ ಮುಖ್ಯರಲ್ಲ ಯಾರೂ ಅಮುಖ್ಯರಲ್ಲ

೨೦೧೬ನೇ ಸಾಲಿನಲ್ಲಿ ಬಿಡುಗಡೆಯಾದ ಹಲವು ಕನ್ನಡ ಚಿತ್ರಗಳು ಅವುಗಳ ಹೊಸತನಕ್ಕಾಗಿ ಗುರುತಿಸಿಕೊಳ್ಳುತ್ತಿವೆ. ಈ ಚಿತ್ರಗಳ ಮೂಲಕ ಕನ್ನಡ ಚಿತ್ರರಂಗದಲ್ಲಿ ಹೊಸ ಅಲೆಯೊಂದು ಪ್ರಾರಂಭವಾಗಿದೆ ಎಂಬ ಅಭಿಪ್ರಾಯಗಳೂ ಕೇಳಿಬರುತ್ತಿವೆ. ಒಳ್ಳೆಯ ಚಿತ್ರಗಳು ಎಂದು ಗುರುತಿಸಿಕೊಳ್ಳುವುದಕ್ಕೆ ಮಾತ್ರ ಸೀಮಿತವಾಗದೆ ಚಿತ್ರಮಂದಿರಗಳಲ್ಲಿ ತೆರೆಕಂಡು ಆರ್ಥಿಕ ಯಶಸ್ಸನ್ನೂ ಪಡೆದಿರುವುದು ಇವುಗಳ ಹೆಗ್ಗಳಿಕೆ. ಕನ್ನಡದ ಪ್ರೇಕ್ಷಕರು ಈ ಚಿತ್ರಗಳನ್ನು ಪ್ರೀತಿಸುವ ಬಗೆಯನ್ನು ನೋಡಲು ಯಾವುದೇ ಸಾಮಾಜಿಕ ಜಾಲತಾಣವನ್ನು ಗಮನಿಸಬಹುದು. ಎಲ್ಲದ್ದಕ್ಕಿಂತ ಮುಖ್ಯವಾಗಿ ಈ ಎಲ್ಲಾ ಚಿತ್ರಗಳ ನಿರ್ದೇಶಕರುಗಳು ಇನ್ನೂ ಯುವಕರು. ತಮ್ಮ ಪ್ರಾರಂಭದ ಪ್ರಯತ್ನದಲ್ಲೇ, ತಮಗಿದ್ದ ಸೀಮಿತ ಅನುಕೂಲಗಳ ನಡುವೆಯೇ ಇವರೆಲ್ಲರೂ ಈ ರೀತಿಯ ಯಶಸ್ಸನ್ನು ಗಳಿಸಿರುವುದು ಕನ್ನಡ ಚಿತ್ರರಂಗದ ಭವಿಷ್ಯಕ್ಕೆ ಆಶಾದಾಯಕವಾದ ಸೂಚನೆ ಎಂಬ ಭಾವನೆ ಎಲ್ಲೆಡೆ ಮೂಡಿದೆ.

ಇತ್ತೀಚೆಗೆ ತೆರೆಕಂಡ 'ತಿಥಿ' ಚಿತ್ರವನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ಈ ಚಿತ್ರವು ಇತರ ಚಿತ್ರಗಳಂತೆ ನೇರವಾಗಿ ಚಿತ್ರಮಂದಿರಗಳನ್ನು ಪ್ರವೇಶಿಸದೆ, ಕನ್ನಡದ ಮಟ್ಟಿಗೆ ಅಭೂತಪೂರ್ವ ಎಂಬಂತೆ ಜಗತ್ತಿನ ಪ್ರಮುಖ ಸಿನಿಮೋತ್ಸವಗಳಲ್ಲಿ ಸಂಚರಿಸಿ, ಪ್ರತಿಷ್ಠಿತ ಪ್ರಶಸ್ತಿಗಳನ್ನು ಸಂಪಾದಿಸಿ ಎಲ್ಲರ ಗಮನ ಸೆಳೆಯಿತು. ಆದರೆ, ಹೀಗೆ ಪ್ರಪಂಚ ಪರ್ಯಟನೆಯಲ್ಲಿ ತೊಡಗಿದ ಈ ಚಿತ್ರದ ಆಂತರ್ಯದಲ್ಲಿರುವುದು ಅಪ್ಪಟ ಹಳ್ಳಿಗಾಡಿನ ಸೊಗಡು. ಹಾಗಾಗಿ, ಹೊಸ ಅಲೆಯ ಚಿತ್ರಗಳೆಂದು ಗುರುತಿಸಲಾಗುತ್ತಿರುವ ಇತರ ಚಿತ್ರಗಳ ಜೊತೆ ಹೋಲಿಸಿ ನೋಡಿದರೆ 'ತಿಥಿ' ಚಿತ್ರದ ಸಂವೇದನೆಯು ಅತ್ಯಂತ ಸ್ವೋಪಜ್ಞ ಹಾಗೂ ಅಪರೂಪದ್ದು ಎಂದೆನಿಸುತ್ತದೆ.

'ತಿಥಿ'ಯ ಕಥೆಯು ಮಂಡ್ಯದ ನೊದೆಕೊಪ್ಪಲು ಎಂಬ ಗ್ರಾಮದಲ್ಲಿ ನಡೆಯುತ್ತದೆ. ಸೆಂಚುರಿಗೌಡನೆಂಬ ಶತಾಯುಷಿ ಮುದುಕ ಸತ್ತ ದಿನದಿಂದ ಪ್ರಾರಂಭಿಸಿ, ಆತನ ತಿಥಿಯವರೆಗಿನ ಹನ್ನೊಂದು ದಿನಗಳ ಕಾಲಾವಧಿಯಲ್ಲಿ ನಡೆಯುವ ಘಟನೆಗಳನ್ನು ಈ ಚಿತ್ರವು ಕಟ್ಟಿಕೊಡುತ್ತದೆ. ಬಿಡಿಬಿಡಿಯಾಗಿಸಿ ನೋಡಿದರೆ ಗ್ರಾಮಜೀವನದಲ್ಲಿ ನಡೆಯುವ ಸರ್ವೇಸಾಧಾರಣ ಘಟನೆಗಳಂತೆ ಇವು ಕಂಡರೂ, ಅವುಗಳನ್ನು ಒಂದರ ಜೊತೆಗೆ ಒಂದನ್ನು ಹೆಣೆಯುವ ಮೂಲಕ ಒಂದು ಆಸಕ್ತಿದಾಯಕ ಕಥೆಯನ್ನು 'ತಿಥಿ' ಚಿತ್ರವು ಹೇಳುತ್ತದೆ. ಸೆಂಚುರಿಗೌಡನ ಮಗ, ಮೊಮ್ಮಗ ಹಾಗೂ ಮರಿಮಗ, ಹೀಗೆ ಒಂದೇ ಕುಟುಂಬದ ಮೂರು ತಲೆಮಾರಿನ ವ್ಯಕ್ತಿಗಳ ಕಥೆಯನ್ನು 'ತಿಥಿ'ಯು ಮೂರು ಧಾರೆಗಳಲ್ಲಿ ನಿರೂಪಿಸುತ್ತದೆ.

ಸೆಂಚುರಿಗೌಡನ ಮಗನಾದ ಗಡ್ಡಪ್ಪ, ಎಲ್ಲಾ ಬಗೆಯ ಸಾಂಸಾರಿಕ ಆಸಕ್ತಿಗಳನ್ನು ಮೀರಿದ ಅರೆ–ಜಂಗಮನಂತೆ ಬದುಕುತ್ತಿರುವ ಮುದುಕ. ಬರಿಗಾಲಲ್ಲಿ ನಿರಂತರವಾಗಿ ಅಲೆಯುವುದಷ್ಟೇ ಅವನ ಕಾಯಕ. ಆದರೆ ಗಡ್ಡಪ್ಪನ ಮಗ ತಮ್ಮಣ್ಣಗೌಡ, ವ್ಯಾವಹಾರಿಕ ಜಗತ್ತಿನಲ್ಲಿ ಮುಳುಗಿಹೋಗಿರುವವ. ತನಗಿರುವ ಅನೇಕ ಸಮಸ್ಯೆಗಳ ಜೊತೆಗೆ ತನ್ನ ತಾತನ ತಿಥಿ ಮಾಡುವ ಜವಾಬ್ದಾರಿ ಈಗ ತಮ್ಮಣ್ಣನದೇ. ತನ್ನ ಗೌಡ ಮನೆತನದ ಪ್ರತಿಷ್ಠೆ ಕಾಯಲು ಇಡೀ ಊರಿಗೇ ಬಾಡೂಟ ಹಾಕಿಸುವ ಒತ್ತಡವೂ ಅವನ ಮೇಲೆಯೇ ಇರುವುದರಿಂದ ತನ್ನ ಆರ್ಥಿಕ ತೊಂದರೆಗಳಿಗೆ ಪರಿಹಾರ ಕಂಡುಕೊಳ್ಳಲು ಅವನು ತಿಣುಕಾಡುತ್ತಲೇ ಇರುತ್ತಾನೆ. ಆದರೆ ತಮ್ಮಣ್ಣನ ಮಗನಾದ ಅಭಿ, ಜಗತ್ತಿನ ಯಾವ ಸಮಸ್ಯೆಯ ಪರಿವೆಯೇ ಇಲ್ಲದಂತೆ



**ಉತ್ಥಾನ ಭಾರಿಘಾಟ್**





ಪುಡಿಗಾಸು, ಮೊಬೈಲು, ಬೈಕುಗಳಂತಹ ಶೋಕಿಗಳು ಗಳಿಸಿಕೊಡುವ ಸಣ್ಣ ಸಂತೋಷಗಳನ್ನು ತನ್ನ ಗೆಳೆಯರೊಂದಿಗೆ ಸಂಪೂರ್ಣವಾಗಿ ಅನುಭವಿಸುತ್ತಿರುವ ಯುವಕ. ಅಂತಹವನಿಗೆ ಕುರಿಕಾಯುವ ಅಲೆಮಾರಿ ಹುಡುಗಿಯ ಮೇಲೆ ಪ್ರಣಯಾಸಕ್ತಿ ಹುಟ್ಟಿ ಅವನ ತುಂಟಾಟಕ್ಕೆ ಮತ್ತೊಂದು ಆಯಾಮವೂ ದೊರೆಯುತ್ತದೆ. ಈ ಮೂವರ ಪ್ರತ್ಯೇಕ ಜಗತ್ತುಗಳನ್ನು ಸೆಂಚುರಿಗೌಡನ ಸಾವಿನ ನೆಪದಿಂದ 'ತಿಥಿ' ಚಿತ್ರವು ಒಂದು ಸೂತ್ರದಲ್ಲಿ ಬಂಧಿಸುತ್ತದೆ.

ಮೇಲೆ ಹೆಸರಿಸಿದ ಮೂರು ಪಾತ್ರಗಳು ಮೇಲ್ನೋಟಕ್ಕೆ ಮುಖ್ಯ ಪಾತ್ರಗಳಂತೆ ಕಾಣುತ್ತವೆಯಾದರೂ, 'ತಿಥಿ' ಚಿತ್ರಕ್ಕಂತೂ ಯಾವುದೇ ಒಬ್ಬ ವ್ಯಕ್ತಿಯ ಕಥೆಯನ್ನು ಹೇಳುವುದರಲ್ಲಿ ಆಸಕ್ತಿಯಿಲ್ಲ. ತನ್ನ ಮುಖ್ಯ ಕಥನವನ್ನು ಹಂತಹಂತವಾಗಿ ಬಿಚ್ಚಿಡುವ ಪ್ರಕ್ರಿಯೆಯ ಜೊತೆಗೇ ಗ್ರಾಮಜೀವನದ ಅನೇಕ ಜೀವಂತ ಚಿತ್ರಗಳನ್ನು ತನ್ನೊಳಗೆ ಬಾಚಿ ಹಿಡಿದಿಟ್ಟುಕೊಳ್ಳಲು 'ತಿಥಿ'ಯು ಬಹಳ ಆಸ್ಥೆಯಿಂದ ಪ್ರಯತ್ನಿಸುತ್ತದೆ. ಹೂಮಾಲೆ ಕಟ್ಟುವ ರೀತಿಯಲ್ಲಿ ಚಿತ್ರದ ಪ್ರತಿ ದೃಶ್ಯದಲ್ಲೂ ಒಂದಿಲ್ಲೊಂದು ಹೊಸ ಪಾತ್ರವು 'ತಿಥಿ'ಯ ಕಥನದ ಮುಖ್ಯ ಎಳೆಗೆ ಸೇರುತ್ತಾ ಹೋಗುತ್ತದೆ. ನಗರ ಕೇಂದ್ರಿತ ಬದುಕಿನಲ್ಲಿ ಈಗಾಗಲೇ ಮಾಯವಾಗಿರುವ, ಆದರೆ ನಮ್ಮ ಹಳ್ಳಿಗಳಲ್ಲಿ ಇನ್ನೂ ಜೀವಂತವಾಗಿರುವ ಸಂಘಜೀವನದ ಒಂದು ಮಾದರಿಯನ್ನು 'ತಿಥಿ' ಚಿತ್ರವು ತನ್ನ ಕಥನವನ್ನು ಮುನ್ನಡೆಸಲು ಅತ್ಯಂತ ಸೃಜನಾತ್ಮಕವಾಗಿ ಬಳಸಿಕೊಳ್ಳುತ್ತದೆ.

ಅದೇ ಕಾರಣಕ್ಕಾಗಿ 'ತಿಥಿ'ಯಲ್ಲಿ ಕಾಣಿಸಿಕೊಳ್ಳುವ ಪಾತ್ರಗಳ ಸಂಖ್ಯೆ ಅಚ್ಚರಿ ಹುಟ್ಟಿಸುತ್ತದೆ. ನೂರಾರು ಪಾತ್ರಗಳಿಂದ ಸುತ್ತುವರಿದಿದ್ದರೂ, ಈ ಚಿತ್ರದ ಎಲ್ಲಾ ಪಾತ್ರಗಳೂ ತಮ್ಮ ಚಹರೆಯನ್ನು ಕಳೆದುಕೊಳ್ಳದೆ, ಒಂದು ಸ್ಪಷ್ಟ ವ್ಯಕ್ತಿತ್ವವನ್ನು ಹೊಂದಿರುವ ಜೀವಂತ ವ್ಯಕ್ತಿಗಳಾಗಿ ತೆರೆಯ ಮೇಲೆ ರೂಪುಗೊಳ್ಳುತ್ತವೆ. ತಮ್ಮ ನಿರ್ದಿಷ್ಟ ವ್ಯಕ್ತಿತ್ವಗಳ ಕಾರಣದಿಂದಾಗಿಯೇ ಈ ಎಲ್ಲಾ ವ್ಯಕ್ತಿಗಳೂ ಒಂದಲ್ಲಾ ಒಂದು ಬಗೆಯಲ್ಲಿ ಕಥೆಯ ಹರಿವನ್ನು ಪ್ರಭಾವಿಸುತ್ತಾ, ಅದರ ಚಲನೆಯನ್ನು ನಿರ್ಧರಿಸುತ್ತ ಮುನ್ನಡೆಯುತ್ತಾರೆ. ಹೀಗೆ 'ತಿಥಿ' ಚಿತ್ರದಲ್ಲಿ ಕಥಿಸಲ್ಪಡುವ ಘಟನೆಗಳು ಒಂದು ಸಾಮುದಾಯಿಕ ಬದುಕಿನಲ್ಲಿ ಮಾತ್ರ ಸಾಧ್ಯವಾಗುವಂತಹವು. ಈ ಬಗೆಯ ಸಾಮುದಾಯಿಕ ಬದುಕನ್ನು ಅದರ ಮೂಲರೂಪದಲ್ಲೇ ಸೆಲೆಬ್ರೇಟ್ ಮಾಡುವ ಉತ್ಸಾಹವು 'ತಿಥಿ' ಚಿತ್ರದ ಆತ್ಮವನ್ನು ಹಾಗೂ ಅದರ ಶೈಲಿಯನ್ನು ಪ್ರಭಾವಿಸಿರುವುದನ್ನು ಗಮನಿಸಬಹುದು.

'ತಿಥಿ' ಚಿತ್ರದ ಕೊನೆಯಲ್ಲಿ, ಹನ್ನೊಂದನೇ ದಿನದ ತಿಥಿ ಕಾರ್ಯದ ನಿಮಿತ್ತ ಶನಿಕಥೆ ಓದಿಸುವ ದೃಶ್ಯವಿದೆ. ಅಲ್ಲಿ ಶನಿಕಥೆ ಹಾಡುವವರು ಪುಟ್ಟ ಸ್ಟೇಜಿನ ಮೇಲೆ ವಾದ್ಯವೃಂದದೊಡನೆ ನಿಂತು 'ನೊದೆಕೊಪ್ಪಲು ಗ್ರಾಮಸ್ಥರಿಗಾಗಿ ಹಾಗೂ ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಮರಿಮರಿಮಕ್ಕಳು, ಇವರೆಲ್ಲರ ಮನರಂಜನೆಗೆ ಈ ಕಥೆಯನ್ನು ಹೇಳುತ್ತಿದ್ದೇವೆ' ಎಂದು ಕಾರ್ಯಕ್ರಮವನ್ನು ಪ್ರಾರಂಭಿಸುತ್ತಾರೆ. ಆ ಕಥೆಗಾರನ ಮಾತಿನ ವೈಖರಿಗೆ ಇಡೀ ಸಭೆಯು ನಗಲು ತೊಡಗುತ್ತದೆ. ಸಾಮಾನ್ಯವಾಗಿ ಹಳೇ ಮೈಸೂರು ಭಾಗದ ಹಳ್ಳಿಗಳಲ್ಲಿ ಕಾಣಸಿಗುವ ಶನಿಕಥಾ ಕಾರ್ಯಕ್ರಮದ ಸರಳ ಶೈಲಿ; ಅದರಲ್ಲಿ ಆಗಾಗ್ಗೆ ಕೇಳಿ ಬರುವ ಚಿನಕುರುಳಿಯಂತಹ ಹಾಸ್ಯ ಹಾಗೂ ಈ ಮನರಂಜನಾ ಕಾರ್ಯಕ್ರಮದ ಹಿಂದಿರುವ ಸಾವಿನಂತಹ ಒಂದು ಅನಿವಾರ್ಯ ಮನುಷ್ಯ ಸ್ಥಿತಿಯ ವಾಸ್ತವ; ಜೊತೆಗೆ ಇವೆಲ್ಲವನ್ನೂ ನೋಡಲಿಚ್ಛಿಸಿ ಕತ್ತಲಲ್ಲಿ ಬಂದು ಕುಳಿತಿರುವ ಜನ. ಸ್ವಲ್ಪ ಕೂಲಂಕಷವಾಗಿ ನೋಡಿದರೆ ಮೇಲಿನ ಈ ಎಲ್ಲಾ ಅಂಶಗಳನ್ನು ಕೂಡ 'ತಿಥಿ' ಚಿತ್ರದ ಕಥೆಗಾರಿಕೆಯಲ್ಲಿ ಗುರುತಿಸಲು ಸಾಧ್ಯವಿದೆ. 'ತಿಥಿ' ಚಿತ್ರದ ವಿಶಿಷ್ಟ ಕಥನಶೈಲಿಯ ಮೂಲ ಚಹರೆಯನ್ನು ನೊದೆಕೊಪ್ಪಲು ಗ್ರಾಮದ 'ಶನಿಕಥೆ ಓದುವಿಕೆ'ಯಲ್ಲಿ ಗುರುತಿಸಬಹುದು ಎನ್ನುವುದು, ಈ ಚಿತ್ರವು ಅತ್ಯಂತ ಶ್ರದ್ಧೆಯಿಂದ ಮೈಗೂಡಿಸಿಕೊಂಡಿರುವ ಸ್ಥಳೀಯ ಪ್ರಜ್ಞೆಯನ್ನು ಸೂಚಿಸುತ್ತದೆ. ಚಲನಚಿತ್ರ ರೂಪದಲ್ಲಿರುವ ಒಂದು ಸಮಕಾಲೀನ ಕಥನವಾಗಿ ಬಹುಶಃ 'ತಿಥಿ' ಚಿತ್ರದ ಅತಿ ಮುಖ್ಯ ಸಾಧನೆ ಇದೇ ಆಗಿದೆ.

ಮೇಲ್ನೋಟಕ್ಕೆ 'ತಿಥಿ'ಯು ಆಧುನಿಕ ಗ್ರಾಮ ಭಾರತದ ಒಂದು ಅತ್ಯಂತ ಸರಳ ದೃಶ್ಯರೂಪಿ ಕಥನದಂತೆ ಕಾಣುತ್ತದೆ. ಆದರೆ ಇಲ್ಲಿರುವ ಸರಳತೆ ಅದರ ಕಥನಕ್ಕೆ ಮಾತ್ರ ಸೀಮಿತವಾಗದೆ ಅದರ ಚಿತ್ರೀಕರಣದ ಶೈಲಿಗೂ ಒದಗಿಬಂದಿದೆ. ಹಾಗಾಗಿ ಸಾಧಾರಣವಾಗಿ ಇತರೆ ಚಿತ್ರಗಳಲ್ಲಿ ಅತಿ ಸುಂದರವಾಗಿ, ಹಚ್ಚ ಹಸಿರಿನಿಂದ ಕಂಗೊಳಿಸುವ ಮಂಡ್ಯದ ಹಳ್ಳಿಗಾಡು ಇಲ್ಲಿ ಅದರ ಸಹಜ ರೂಪದಲ್ಲೇ ಯಾವುದೇ ಬಗೆಯ ತಾಂತ್ರಿಕ ಸೌಂದರ್ಯವರ್ಧಕಗಳಿಲ್ಲದೆ ಕಾಣಿಸಿಕೊಳ್ಳುತ್ತದೆ. ಈ ಮೂಲಕ ಯಾವುದೇ ಬಗೆಯ ಕೃತಕ ಚೆಂದಗಾಣಿಸುವಿಕೆಯನ್ನು ಈ ಚಿತ್ರವು ಪ್ರಾಮಾಣಿಕವಾಗಿ ನಿರಾಕರಿಸುತ್ತದೆ. ತಾನು ಅಳವಡಿಸಿಕೊಳ್ಳಲು ಯತ್ನಿಸುತ್ತಿರುವ ದೇಸೀ ಕಥೆಗಾರಿಕೆಯನ್ನು ಸಾಧಿಸುವ ಒಂದು ಮಾರ್ಗವಾಗಿ, ತನ್ನ ದೃಶ್ಯಗಳಲ್ಲಿ ಸಹಜತೆಯನ್ನು ತರಲು 'ತಿಥಿ' ಚಿತ್ರವು ಪ್ರಯತ್ನಿಸುತ್ತದೆ. ಬಹುಶಃ ಭಾರತದಲ್ಲಿ ಇತ್ತೀಚೆಗೆ ನಿರ್ಮಾಣವಾಗಿರುವ ಇನ್ಯಾವುದೇ ಚಿತ್ರವು ತೆರೆಯ ಮೇಲಿನ ಸಹಜತೆಯನ್ನು ಸಾಧಿಸಲು ಪ್ರಯತ್ನಿಸಿ ಈ ಮಟ್ಟದ ಯಶಸ್ಸನ್ನು ಪಡೆದಿಲ್ಲವೇನೋ (ಬಹುಶಃ ಈ ವಿಷಯದಲ್ಲಿ 'ತಿಥಿ'ಯ ಹತ್ತಿರಕ್ಕೆ ಬರುವುದು ಹಿಂದಿನ ವರ್ಷದ ಮರಾಠಿ ಚಿತ್ರ 'ಕೋರ್ಟ್' ಮಾತ್ರ). ಹೀಗೆ 'ತಿಥಿ' ಚಿತ್ರವು ತನ್ನ ಕಲೆಗಾರಿಕೆಯನ್ನು ರಮ್ಯವಾಗಿಸುವ ಎಲ್ಲಾ ಬಗೆಯ ತುಡಿತಗಳಿಂದ ತಪ್ಪಿಸಿಕೊಂಡು ಮನುಷ್ಯ ಜೀವನ ಹಾಗೂ ಆತನ ಪರಿಸರವನ್ನು ಅವುಗಳ ಅತ್ಯಂತ ಸಹಜ ರೂಪದಲ್ಲೇ ಸೆರೆಹಿಡಿಯಲು ಮುಂದಾಗುತ್ತದೆ.

'ತಿಥಿ' ಚಿತ್ರವು ಇಂದಿಗೆ ಮುಖ್ಯವಾಗುವುದು ಒಂದು ಸಮುದಾಯದ ಕಥೆಯನ್ನು ಯಾವುದೇ ರಮ್ಯ ಆಡಂಬರಗಳಿಲ್ಲದೆ ಕಟ್ಟಿಕೊಡುವುದು ಅದಕ್ಕೆ ಸಾಧ್ಯವಾಗುತ್ತದೆ ಎಂಬ ಕಾರಣಕ್ಕಾಗಿ. ಸಾಮಾನ್ಯವಾಗಿ ವ್ಯಕ್ತಿಕೇಂದ್ರಿತ ಕಥೆಗಳನ್ನೇ ಹಿಂಬಾಲಿಸಿ ಹೋಗುವ ಚಿತ್ರಗಳ ದಾರಿಯಲ್ಲಿ ಸಾಗದೆ, 'ತಿಥಿ'ಯು ಪ್ರಜ್ಞಾಪೂರ್ವಕವಾಗಿ ವ್ಯಕ್ತಿಯನ್ನು

(೫೭ನೇ ಪುಟಕ್ಕೆ)



ಸಾವಿರ, ಎರಡು ಸಾವಿರ ಮುಟ್ಟೋಲಾ ಸಾರ್, ಏನಿದ್ದರೂ ಮನೆಕಟ್ಟಿ ಕೊಡುವಹಾಗಿದ್ದರೆ ಓಟು ಹಾಕುತ್ತೇನೆ ಬುದ್ಧಿ...!



# ಉನ್ನತ ಶಿಕ್ಷಣ : ಗತಿ–ಸ್ಥಿತಿ

ಡಾ|| ಪ್ರಸಾದಸ್ವಾಮಿ ಎಸ್.

**ಭಾ**ರತದ ಶಿಕ್ಷಣ ಪದ್ಧತಿಗೆ ಭದ್ರ ಬುನಾದಿ ಇದೆ. ಈ ಭದ್ರತೆಗೆ ಪ್ರಾಚೀನ ಮತ್ತು ಆಧುನಿಕ ನೆಲೆಗಳಿವೆ. ಅಪಾರ ಮಾನವ ಸಂಪನ್ಮೂಲದಿಂದ ತುಂಬಿ ತುಳುಕುತ್ತಿರುವ ವಿಶಾಲ ದೇಶ ನಮ್ಮದು. ಪಾರಂಪರಿಕ ಶಿಕ್ಷಣದ ಔಪಚಾರಿಕ ಮತ್ತು ಅನೌಪಚಾರಿಕ ಆಯಾಮಗಳು ಇಂದು ಹೊಸ ಸ್ವರೂಪ ಪಡೆದುಕೊಳ್ಳುತ್ತಿವೆ. ಇಂತಹ ಸಂಕ್ರಮಣ ಸಂದರ್ಭದಲ್ಲಿ ಶಿಕ್ಷಣ ಕುರಿತ ಚಿಂತನೆಗಳು ಪ್ರಸ್ತುತವೆನಿಸಿವೆ.

ಕರ್ನಾಟಕದ ಉನ್ನತ ಶಿಕ್ಷಣ ಕುರಿತಂತೆ ಇಲ್ಲಿನ ಚಿಂತನೆಗಳು ರೂಪುಗೊಂಡಿವೆ. ಶಿಕ್ಷಣ ಈಗ ಸಾರ್ವತ್ರಿಕ ನೆಲೆಯಾಗಿದೆ. ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳು ಶಿಕ್ಷಣ ನೀಡುವಲ್ಲಿ ಮುಂಚೂಣಿಯಲ್ಲಿವೆ. ಶಿಕ್ಷಣ, ಅದರಲ್ಲೂ ಉನ್ನತ ಶಿಕ್ಷಣ ಸೇವೆಯೋ ಅಥವಾ ಉದ್ಯಮವೋ ಎಂಬ ಜಿಜ್ಞಾಸೆ ಈ ಹೊತ್ತಿನ ತುರ್ತು ಎಂದು ಭಾವಿಸಬಹುದು.

ಪಿಯುಸಿ ನಂತರದ ಪದವಿ ಮತ್ತು ಸ್ನಾತಕೋತ್ತರ ಶಿಕ್ಷಣ ಉನ್ನತ ಶಿಕ್ಷಣ ಎಂದು ಗುರುತಿಸಲ್ಪಟ್ಟಿದೆ. ಕಲೆ, ವಿಜ್ಞಾನ, ವಾಣಿಜ್ಯ ಎಂಬ ಮೂರು ಮುಖ್ಯ ಧಾರೆಗಳಲ್ಲಿ ಇದು ಪ್ರವಹಿಸುತ್ತಿದೆ. ಸ್ವಾತಂತ್ರ್ಯ ಬಂದು ಅರವತ್ತೆಂಟು ವರ್ಷಗಳಾಗಿವೆ. ಈ ಅವಧಿ ಶಿಕ್ಷಣ ಅತ್ಯಂತ ಅಗತ್ಯ ಮತ್ತು ಅಪೇಕ್ಷಣೀಯ ಎಂಬುದನ್ನು ಸಾಬೀತುಪಡಿಸಿದೆ.

ಆಧುನಿಕತೆ, ನಾಗರಿಕತೆ, ಯಾಂತ್ರಿಕತೆಗಳು ನಮ್ಮ ಶಿಕ್ಷಣದ ಸ್ವರೂಪವನ್ನು ನಿರ್ಧರಿಸುವ ಅಂಶಗಳು. ಇವುಗಳ ಪ್ರಭಾವದಿಂದ ಕಳೆದ ಎರಡು ದಶಕಗಳಲ್ಲಿ ಶಿಕ್ಷಣದ ಸ್ವರೂಪದಲ್ಲಿ ಗಮನಾರ್ಹ ಬದಲಾವಣೆ ಆಗಿದೆ. ಆದರೆ ಈ ಬದಲಾವಣೆ ಧನಾತ್ಮಕವೋ, ಋಣಾತ್ಮಕವೋ ಎಂಬ ಪ್ರಶ್ನೆ ಕಾಡುವುದು ಸಹಜವೇ.

ಭಾರತ ಕೃಷಿ ಪ್ರಧಾನ ದೇಶ. ಕೃಷಿಗೆ ಬೆಂಬಲ ನೀಡುವ ಅನೇಕ ವೃತ್ತಿಗಳು ನಮ್ಮಲ್ಲಿದ್ದವು. ಈ ವೃತ್ತಿಗಳಿಗೆ ಅನೌಪಚಾರಿಕ ಕೌಶಲಗಳೂ ಇದ್ದವು. ಆದರೆ ಇತ್ತೀಚೆಗೆ ಕೃಷಿ ಹಿನ್ನೆಲೆಗೆ ಸರಿದಂತೆ ಕಾಣುತ್ತಿದೆ. ವಾಣಿಜ್ಯ, ವ್ಯಾಪಾರ, ವೈಜ್ಞಾನಿಕ ಆವಿಷ್ಕಾರ ಇವೇ ಮುಖ್ಯ ಎಂಬಂತಾಗಿದೆ. ಪಾರಂಪರಿಕ ಶಿಕ್ಷಣ ಈ ಹೊತ್ತಿನ ಸ್ಪರ್ಧಾಲೋಕದಿಂದ ಹೊರಗುಳಿದಿದೆ ಎನಿಸುತ್ತದೆ. ಈ ನೆಲೆಯಲ್ಲಿ ಕಲಾನಿಕಾಯಗಳ ಅಧ್ಯಯನ ನೇಪಥ್ಯಕ್ಕೆ ಸರಿದಂತೆ ಭಾಸವಾಗುತ್ತಿದೆ. ಸಾಹಿತ್ಯ, ಭಾಷೆ, ಸಂಸ್ಕೃತಿ, ತತ್ವಜ್ಞಾನ, ಇತಿಹಾಸ – ಇವುಗಳಿಗೆ ಹೋಲಿಸಿದಲ್ಲಿ ಪತ್ರಿಕೋದ್ಯಮ, ವಾಣಿಜ್ಯ, ತಂತ್ರಜ್ಞಾನ, ರಾಜ್ಯಶಾಸ್ತ್ರ, ಆಡಳಿತ ಇವಕ್ಕೆ ಹೆಚ್ಚಿನ ಒತ್ತು ಇರುವಂತೆ ಕಾಣಿಸುತ್ತಿದೆ.

ಇಂತಹ ಪರಿವರ್ತನೆಯ ಅವಧಿಯಲ್ಲಿ ಉನ್ನತ ಶಿಕ್ಷಣ ಹೇಗಿದೆ, ಹೇಗಿರಬೇಕು ಎಂದು ಆಲೋಚಿಸುವುದು ಸಹಜವೇ. ವಿಶೇಷವಾಗಿ, ಪದವಿ ಶಿಕ್ಷಣದ ಸ್ವರೂಪ ಕುರಿತು ಹೆಚ್ಚಿನ ಆದ್ಯತೆ ನೀಡಬೇಕಿದೆ. ಪದವಿ ಶಿಕ್ಷಣ ಜ್ಞಾನಕ್ಕೂ, ಬದುಕಿಗೂ ಆರ್ಥಿಕ ತಳಹದಿ ಆಗಬೇಕು ಎಂಬ ಆಶಯ ಮುಂಚೂಣಿಯಲ್ಲಿದೆ. ಎಲ್ಲ ಉದ್ಯೋಗಗಳ ಕನಿಷ್ಠ ವಿದ್ಯಾರ್ಹತೆ ಆಗಿ ಇಂದು ಪದವಿ ಶಿಕ್ಷಣ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ ಮತ್ತು ಅದು ಹಾಗಾಗಲೂಬೇಕು.

ಕಳೆದ ಮೂರು ದಶಕಗಳಲ್ಲಿ ಪದವಿ ಕಾಲೇಜುಗಳ ಸಂಖ್ಯೆ ಮತ್ತು ವಿಶ್ವವಿದ್ಯಾಲಯಗಳ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿದೆ. ಹೋಬಳಿ, ತಾಲ್ಲೂಕು ಮಟ್ಟದಲ್ಲಿ ಪದವಿ ಕಾಲೇಜುಗಳಿವೆ. ಜಿಲ್ಲೆಗೊಂದು ವಿಶ್ವವಿದ್ಯಾಲಯ ಆರಂಭವಾಗುತ್ತಿದೆ. ಸಹಜವಾಗಿಯೇ ಹೊಸ ಉದ್ಯೋಗಗಳ ಸೃಷ್ಟಿಯೂ ಆಗುತ್ತಿದೆ. ವಿದ್ಯಾರ್ಥಿಗಳ ಸಂಖ್ಯೆಯೂ ತೃಪ್ತಿಕರವಾಗಿದೆ. ಶತಮಾನಗಳ ಕಾಲ ಈ ದೇಶದಲ್ಲಿ ಒಂದೇ ಜಾತಿಯವರು ಶಿಕ್ಷಣ ಪಡೆಯುತ್ತಿದ್ದರು. ಕಳೆದ ಐವತ್ತು ವರ್ಷಗಳಿಂದ ಶಿಕ್ಷಣದ ಸಾರ್ವತ್ರೀಕರಣವಾಗಿದೆ.

ಈ ಮೊದಲು ಉನ್ನತ ಶಿಕ್ಷಣ ಎಲ್ಲರಿಗೂ ಅಲ್ಲ ಎಂಬ ಅಭಿಪ್ರಾಯವಿತ್ತು. ಅದೀಗ ಬದಲಾಗಿದೆ. ಕಲಿಯಲು ಅಪೇಕ್ಷೆ ಇರುವವರು ಏನನ್ನಾದರೂ ಓದಬಹುದು, ಎಷ್ಟಾದರೂ ಓದಬಹುದು. ಹೀಗೆ ಓದಲು ಬಯಸುವವರಿಗೆ ಸೂಕ್ತ ಅವಕಾಶ, ಕ್ರಮ, ವ್ಯವಸ್ಥೆ ರೂಪುಗೊಂಡಿವೆಯಾ ಎಂಬ ಪ್ರಶ್ನೆಯೂ ಇದೆ. ಪದವಿ ಮತ್ತು ಪಿ.ಜಿ. ಶಿಕ್ಷಣದಲ್ಲಿನ ಪಠ್ಯಕ್ರಮ, ಪರೀಕ್ಷೆ ವ್ಯವಸ್ಥೆ ಕುರಿತು ಸರಿಯಾದ ನಿಲುವು ತಳೆಯಲು ಇದು ಸೂಕ್ತ ಸನ್ನಿವೇಶ.

**ಪದವಿ ಮತ್ತು ಪಿ.ಜಿ.ಗಳ ಪಠ್ಯಗಳು :** ಔಪಚಾರಿಕ ಶಿಕ್ಷಣದಲ್ಲಿ ಕಲಿಕೆ ಮುಖ್ಯ ನೆಲೆ. ವಿದ್ಯಾರ್ಥಿ ಏನು ಕಲಿಯಬೇಕು, ಹೇಗೆ ಕಲಿಯಬೇಕು, ಏಕೆ ಕಲಿಯಬೇಕು ಎಂಬ ಪ್ರಶ್ನೆ ಅತ್ಯಂತ ಮುಖ್ಯವಾದ್ದು. ಪದವಿ ಶಿಕ್ಷಣಕ್ಕೆ ಸೇರುವ ವಿದ್ಯಾರ್ಥಿಗಳು ಹದಿವಯಸ್ಸಿನವರು. ಗೊಂದಲ, ಕುತೂಹಲ, ಉತ್ಸಾಹ ಮತ್ತು ಪ್ರಯೋಗಗಳ ಅವಧಿ ಇದು. ಇತ್ತ ಬಾಲಕರೂ ಅಲ್ಲದ, ಅತ್ತ ತಿಳಿದವರೂ ಅಲ್ಲದ ಪೀಳಿಗೆಗೆ ಎಂತಹ ಪಠ್ಯ ಇರಬೇಕು ? ಅದನ್ನು ಹೇಗೆ ಕಲಿಸಬೇಕು ? ಕಲಿತ ವಿದ್ಯಾರ್ಥಿ ಅದನ್ನು ಹೇಗೆ ನಿರೂಪಿಸಬೇಕು ? ಶಿಕ್ಷಣ ಮತ್ತು ಸಾಮಾಜಿಕ ವಿವೇಕಗಳನ್ನು ಹೇಗೆ ವಿದ್ಯಾರ್ಥಿ ಗ್ರಹಿಸಬೇಕು ? – ಎಂಬ ಅಂಶಗಳು ಈ ಸಂದರ್ಭದ ಕೇಂದ್ರ ಕಾಳಜಿಗಳು. ಆದರೆ ಸದ್ಯ ಚಾಲ್ತಿಯಲ್ಲಿರುವ ಪಠ್ಯಕ್ರಮ ವಿದ್ಯಾರ್ಥಿಗಳ ಅಪೇಕ್ಷೆಯನ್ನು ಗಮನಿಸಿರುವುದೇ ಎಂದು ನೋಡಿದಲ್ಲಿ ಸಿಗುವ ಉತ್ತರ ಸಮಾಧಾನಕರವಾಗಿಲ್ಲ !

ಪದವಿ ಹಂತದಲ್ಲಿ ಭಾಷೆ ಕಲಿಸಬೇಕೆ ? ಸಾಹಿತ್ಯ ಕಲಿಸಬೇಕೆ ? ಇತಿಹಾಸ ಕಲಿಸಬೇಕೆ ? ಅರ್ಥಶಾಸ್ತ್ರ ಕಲಿಸಬೇಕೆ ? ಒಟ್ಟಾರೆ, ಏನು ಕಲಿಸಬೇಕು ? ಹೇಗೆ

ಕಲಿಸಬೇಕು ? – ಎಂದು ಶಿಕ್ಷಣತಜ್ಞರು ಚಿಂತಿಸುತ್ತಿದ್ದಾರೆ. ಶಿಕ್ಷಣತಜ್ಞರು, ಎಂದರೆ ಆಡಳಿತಗಾರರು ಮತ್ತು ಶಿಕ್ಷಣ ಸಂಸ್ಥೆಗಳ ನಿರ್ವಹಣೆದಾರರು ಎಂಬಂತೆ ಆಗಿರುವುದು ! ಅದೂ ಅಲ್ಲದೆ ಪದವಿ ಹಂತದಲ್ಲೇ ವಿದ್ಯಾರ್ಥಿ ಎಲ್ಲವನ್ನೂ ಕಲಿತುಬಿಡಬೇಕಂತೆ ! ಸಂವಿಧಾನ, ಪರಿಸರ, ಕಂಪ್ಯೂಟರ್ ಇತ್ಯಾದಿ ಉಪವಿಷಯಗಳೂ ಮುಖ್ಯ ವಿಷಯಗಳ ಜತೆ ಸೇರತೊಡಗಿವೆ. ಹೀಗೆ ಪಠ್ಯವನ್ನು ವಿದ್ಯಾರ್ಥಿಗಳ ಮೇಲೆ ಹೇರುತ್ತಿರುವಾಗ, ವಿದ್ಯಾರ್ಥಿಗಳು ಏನನ್ನು ನಿರೀಕ್ಷಿಸುತ್ತಿದ್ದಾರೆ ಎಂಬ ಅಂಶ ಹಿನ್ನೆಲೆಗೆ ಸರಿದಿದೆ. ಇದರ ನಡುವೆ ಮಾಧ್ಯಮ ಎಂಬ ಗೋಡೆ ಬೇರೆ ! ಕಲಿಯುವ, ಕಲಿಸುವ ಭಾಷೆ ಮಾತೃಭಾಷೆಯೊ, ಇಂಗ್ಲಿಷೊ ಎಂಬ ಗೊಂದಲ ಬೇರೆ !

ಅದೇನೇ ಇರಲಿ, ಪದವಿ ಶಿಕ್ಷಣದಲ್ಲಿ ವಿದ್ಯಾರ್ಥಿಯ ಗ್ರಹಿಕೆ ಮತ್ತು ಅಭಿವ್ಯಕ್ತಿಗೆ ವೇದಿಕೆ ಸಿಗಬೇಕು. ಕಲಿಕೆ ಒಂದು ಪ್ರಕ್ರಿಯೆ. ಇಲ್ಲಿ ಅಧ್ಯಾಪಕ ವಾಹಕ ಮಾತ್ರ. ಪಠ್ಯ ನೆಪಮಾತ್ರ. ಶಿಕ್ಷಣದ ಕೇಂದ್ರ ವಿದ್ಯಾರ್ಥಿಗಳೆ, ಅಂದಮೇಲೆ ನಾವು ರೂಪಿಸುವ ಪಠ್ಯ ಸರಳತೆಯಿಂದ ಸಂಕೀರ್ಣತೆ ಕಡೆಗೆ ಹಂತಹಂತವಾಗಿ ಸಾಗಬೇಕು. ನಿದರ್ಶನಕ್ಕೆ ಬಿ.ಕಾಂ ಮತ್ತು ಬಿ.ಎಸ್ಸಿ ಓದುವ ವಿದ್ಯಾರ್ಥಿಗಳಿಗೆ ಭಾಷೆಯ ಪಠ್ಯವಾಗಿ ಪಂಪ, ರನ್ನ ಇರುವ ಬದಲು ಆಧುನಿಕ ಗದ್ಯವೇ ವಾಸಿ. ಕಾವ್ಯವಾದರೆ ಭಾವಗೀತೆ ಉತ್ತಮ. ಇನ್ನು ಐಚ್ಛಿಕ ಕನ್ನಡ, ಇಲ್ಲವೆ ಎಂ.ಎ. ಕನ್ನಡ ವಿದ್ಯಾರ್ಥಿಗಳಿಗೆ 'ಶೂನ್ಯ ಸಂಪಾದನೆ'ಯಂತಹ ಕೃತಿಗಳು ರುಚಿಸದೆ ಇರಬಹುದು. ಹಾಗೆಯೇ ಇಂಗ್ಲಿಷ್ ಅಂದಾಕ್ಷಣ ಶೇಕ್ಸ್‌ಪಿಯರ್ ಅಲ್ಲ. ನಮ್ಮ ಸಮಾಜದ ಎಲ್ಲ ಸಮಸ್ಯೆಗಳನ್ನು ಪಠ್ಯರೂಪದಲ್ಲಿ ಮಕ್ಕಳಿಗೆ ಹೇರುವುದು ಸರಿಯಲ್ಲ. ಪಠ್ಯ ಚಿಕ್ಕದಿರಬೇಕು, ಸ್ಪಷ್ಟತೆ ಇರಬೇಕು, ಧ್ವನಿಸಾಧ್ಯತೆ ಹೊಂದಿರಬೇಕು, ವಿದ್ಯಾರ್ಥಿಗಳಿಗೆ ಸರಳವಾಗಿ ಅರ್ಥವಾಗುವಂತಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಪದವಿ ಮತ್ತು ಪಿ.ಜಿ.ಗಳ ಪಠ್ಯ ವಿದ್ಯಾರ್ಥಿಗಳ ಕ್ರಿಯಾಶೀಲತೆ ಮತ್ತು ಸೃಜನಶೀಲತೆ ಗಳಿಗೆ ಪೂರಕವಾಗುವಂತಿರಬೇಕು.

ಪದವಿ ಪಠ್ಯ ಸಾಮಾನ್ಯಜ್ಞಾನ ನೀಡಿದರೆ ಸಾಕು. ಪಿ.ಜಿ. ಜ್ಞಾನ ಆಳ ಮತ್ತು ವಿಸ್ತಾರ ಅರಿಯುವ ಹಂತವಾಗ ಬೇಕು. ಈ ಹಂತದಲ್ಲಿ ವಿದ್ಯಾರ್ಥಿ ಪ್ರಾಯೋಗಿಕ ಸಾಧ್ಯತೆಗೆ ಪಕ್ಕಾಗಬೇಕು. ಇಲ್ಲಿ ಮುಖ್ಯ ಅಂಶವೆಂದರೆ ಪದವಿ ಶಿಕ್ಷಣಕ್ಕೂ, ನೌಕರರಿಗೂ ಇರುವ ನಂಟನ್ನು ಕಳಚುವುದು. ವಿದ್ಯಾರ್ಥಿ ತನಗಿಷ್ಟವಿರುವ ವಿಷಯ ಗಳನ್ನು ಗ್ರಹಿಸಿ, ಮರುನಿರೂಪಿಸುವ ಸ್ವಸಾಮರ್ಥ್ಯವನ್ನು ಪದವಿ ಶಿಕ್ಷಣ ಕಲ್ಪಿಸಬೇಕು. ಇದಕ್ಕಿಂತಲೂ ಮುಖ್ಯ ವಿಷಯವೆಂದರೆ, ಗಾಂಧೀಜಿ ಹೇಳಿದಂತೆ ಪದವಿ ಶಿಕ್ಷಣ ವಿದ್ಯಾರ್ಥಿಗೆ ಮಾನವೀಯ ಮೌಲ್ಯಗಳನ್ನು ಮನವರಿಕೆ ಮಾಡಿಕೊಡಬೇಕು. ಇದಕ್ಕಾಗಿ ನಾವು ರೂಪಿಸುವ ಶೈಕ್ಷಣಿಕ ಪರಿಸರ ಧನಾತ್ಮಕವಾಗಿರಬೇಕು.

ಇಂದಿಗೂ ಅನೇಕ ಕಾಲೇಜುಗಳು, ವಿಶ್ವವಿದ್ಯಾಲಯಗಳು ಮೂಲಸೌಕರ್ಯಗಳಾದ ಶೌಚಾಲಯ, ಕುಡಿವ ನೀರು, ಗ್ರಂಥಾಲಯ, ತರಗತಿ ಕೋಣೆಗಳು, ಪ್ರಾಯೋಗಿಕ ಕೋಣೆಗಳಿಲ್ಲದೆ ಸೊರಗಿವೆ. ಇದನ್ನು ಸಂಬಂಧ ಪಟ್ಟವರು ಗಮನಿಸಬೇಕು.




**ಮೌಲ್ಯಮಾಪನ :** ಶಿಕ್ಷಣದ ಮುಖ್ಯ ನೆಲೆಯಾಗಿ ಮೌಲ್ಯಮಾಪನ ಗಮನ ಸೆಳೆಯುತ್ತದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಜಾರಿಯಲ್ಲಿರುವ ಸೆಮಿಸ್ಟರ್ ಪದ್ಧತಿ ಈ ದಿಸೆಯಲ್ಲಿ ಅಷ್ಟೇನೂ ಉತ್ತಮ ಎನಿಸದು. ಕೇವಲ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತಯಾರು ಮಾಡುವ ಸಾಧನವಾಗಿ ಮಾತ್ರ ಸೆಮಿಸ್ಟರ್ ಪದ್ಧತಿ ಕಾರ್ಯ ನಿರ್ವಹಿಸುತ್ತಿದೆ. ವರ್ಷಕ್ಕೆ ಎರಡು ಪರೀಕ್ಷೆಗಳು. ಅದರ ಮೌಲ್ಯಮಾಪನದಲ್ಲಿ ನಾಲ್ಕು ತಿಂಗಳು ವ್ಯಯವಾಗುತ್ತಿವೆ. ಕಲಾನಿಕಾಯಕ್ಕಂತೂ ಸೆಮಿಸ್ಟರ್ ಮಾರಕವಾಗಿ ಪರಿಣಮಿಸಿದೆ. ಅಲ್ಲದೆ, ಈಗಿನ ಮೌಲ್ಯಮಾಪನ ವಿದ್ಯಾರ್ಥಿಗಳ ಬರಹವನ್ನಷ್ಟೇ ಗಮನಿಸುತ್ತಿದೆ. ವಿದ್ಯಾರ್ಥಿಗಳ ಮೌಖಿಕ ಸಾಮರ್ಥ್ಯವನ್ನು ರೂಪಿಸುವ, ಅಳೆಯುವ ಅವಕಾಶ ಈ ಪದ್ಧತಿಯಲ್ಲಿ ಇಲ್ಲ ಎನ್ನಬಹುದು, ಬರೆದಷ್ಟೇ ಚೆನ್ನಾಗಿ ವಿದ್ಯಾರ್ಥಿ ಮಾತನಾಡಬೇಕು. ಆದರೆ ಪದವಿ ಮತ್ತು ಪಿ.ಜಿ.ಗಳಲ್ಲಿ ವಿದ್ಯಾರ್ಥಿಗಳಿಗೆ ಇರುವ ಮೌಖಿಕ ಅಭಿವ್ಯಕ್ತಿ ಅವಕಾಶ ತುಂಬ ಕ್ಷೀಣ. ಸೆಮಿಸ್ಟರ್‌ನಿಂದಾಗಿ ಆಟೋಟಗಳೂ ಕಡಿಮೆ ಆಗಿವೆ, ಸಾಂಸ್ಕೃತಿಕ ಚಟುವಟಿಕೆ ಕೇವಲ ಉದ್ಘಾಟನೆ, ಸಮಾರೋಪಕ್ಕೆ ಸೀಮಿತವಾಗಿದೆ. ಬಿಡುವಿಲ್ಲದ ದಿನಚರಿಯಿಂದಾಗಿ ವಿದ್ಯಾರ್ಥಿಗಳು ಒತ್ತಡಕ್ಕೆ ಒಳಗಾಗುವ ಸಾಧ್ಯತೆಗಳಿವೆ.

**ಬೋಧಕರು ಮತ್ತು ಸಿಬ್ಬಂದಿ :** ಕಾಲೇಜು, ವಿಶ್ವವಿದ್ಯಾಲಯಗಳಿಗೆ ವಿದ್ಯಾರ್ಥಿಗಳು ಮುಖ್ಯ. ಅಂತೆಯೇ ಬೋಧಕರು, ಸಿಬ್ಬಂದಿಗಳೂ ಮುಖ್ಯ. ಕಾಲಕಾಲಕ್ಕೆ ನೇಮಕ, ಬಡ್ತಿ ಇತ್ಯಾದಿಗಳು ನಡೆದಲ್ಲಿ ಶಿಕ್ಷಣ ಸಂಸ್ಥೆಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುವುದು ಸಾಧ್ಯ. ಆದರೆ ಇತ್ತೀಚೆಗೆ ಆರ್ಥಿಕ ಹಿಂಜರಿಕೆ ಮತ್ತು ಇತರೆ ಕಾರಣಕ್ಕೆ ಅಗತ್ಯ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕ ಆಗದೆ ಎಲ್ಲರೂ ಪರಿತಪಿಸುವಂತಾಗಿದೆ. ಒಂದು ಶಿಕ್ಷಣ ಸಂಸ್ಥೆಯಲ್ಲಿ 'ಡಿ' ಗ್ರೂಪ್, 'ಸಿ' ಗ್ರೂಪ್, 'ಬಿ' ಗ್ರೂಪ್ ಮತ್ತು 'ಎ' ಗ್ರೂಪ್ ಸಿಬ್ಬಂದಿ ಸರಿಯಾದ ಸಂಖ್ಯೆಯಲ್ಲಿ ಇರಲೇಬೇಕು. ಅರೆಕಾಲಿಕ ಮತ್ತು ಅತಿಥಿ ವ್ಯವಸ್ಥೆಗಳು ಸಮಸ್ಯೆಗಳಿಗೆ ಪೂರ್ಣಪ್ರಮಾಣದ ಪರಿಹಾರ ನೀಡಲಾರವು.

**ಬೋಧನೆ :** ಪದವಿ ಮತ್ತು ಪಿ.ಜಿ. ಬೋಧನೆ ಭಿನ್ನ. ಇಲ್ಲಿ ಬೋಧಕರು ಪಠ್ಯವನ್ನು ನೆಪಮಾತ್ರಕ್ಕೆ ಕೇಂದ್ರವಾಗಿಸಿಕೊಂಡು, ವಿಷಯದ ಆಳ, ಅಗಲಗಳನ್ನು ವಿಶ್ಲೇಷಿಸಲು ಯತ್ನಿಸಬೇಕು. ಸಾಂಸ್ಕೃತಿಕ ಮತ್ತು ವಿಮರ್ಶಾಕೇಂದ್ರಿತ ದೃಷ್ಟಿಕೋನಗಳಿಂದ ಪಠ್ಯವನ್ನು ನಿರೂಪಿಸಬೇಕು. ಪರಾಮರ್ಶನ ಗ್ರಂಥಗಳ ಪಟ್ಟಿ ನೀಡುವುದು, ಹಳೆಯ ಟಿಪ್ಪಣಿಗಳನ್ನು ನೀಡುವುದು ಉತ್ತಮ ಬೋಧನೆಯ ಲಕ್ಷಣವಲ್ಲ. ಅಧ್ಯಾಪಕರು ಜ್ಞಾನದ ಭೂತ, ವರ್ತಮಾನ, ಭವಿಷ್ಯತ್ ನೆಲೆಗಳನ್ನು ಚರ್ಚಿಸಬೇಕು. ಅದಕ್ಕಾಗಿ ಅಧ್ಯಾಪಕರು ವಿಶೇಷವಾಗಿ ಸಿದ್ಧವಾಗಬೇಕು. ಇತ್ತೀಚೆಗೆ ಪಿ.ಯು ಬೋಧಕರಿಗೆ ಬಿ.ಇಡಿ.ಯನ್ನು ಕಡ್ಡಾಯ ಮಾಡಲಾಗಿದೆ. ಹಾಗೆಯೆ ಪದವಿ ಮತ್ತು ಪಿ.ಜಿ. ಅಧ್ಯಾಪಕರಿಗೆ ಎಂ.ಇಡಿ. ಕಡ್ಡಾಯ ಆಗಬೇಕು. ಇದರಿಂದಾಗಿ ಏನು ಕಲಿಸಬೇಕು, ಹೇಗೆ ಕಲಿಸಬೇಕು ಎಂಬುದು ಖಚಿತವಾಗಿರುತ್ತದೆ. ಅಲ್ಲದೆ ಶೈಕ್ಷಣಿಕ ವೇಳಾಪಟ್ಟಿ, ನಿರಂತರ ಮೌಲ್ಯಮಾಪನ, ಇವು ವಿದ್ಯಾರ್ಥಿಗಳ ಮನಸ್ಸನ್ನು ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತವೆ. ಅಧ್ಯಾಪಕರು ಹೆಚ್ಚು ವಿದ್ಯಾರ್ಹತೆ ಗಳಿಸಿಕೊಂಡಷ್ಟೂ ಅವರ ಬೋಧನೆ ಪರಿಣಾಮಕಾರಿಯಾಗಿರುತ್ತದೆ. ಗ್ರಂಥಾಲಯದ ಸದ್ಬಳಕೆ ಕುರಿತು ವಿದ್ಯಾರ್ಥಿಗಳಿಗೆ ತಿಳಿಸಬೇಕು.

ಇತ್ತೀಚೆಗೆ ಸ್ಮಾರ್ಟ್ ಕ್ಲಾಸ್, ವರ್ಚುಯಲ್ ಕ್ಲಾಸ್, ಎಜುಸ್ಯಾಟ್ ಕಾರ್ಯಕ್ರಮಗಳು ಚಾಲ್ತಿಯಲ್ಲಿವೆ. ಸರಿಯಾಗಿ ಐದು ಗಂಟೆಗೆ ಕಮಿಷನರ್ ಮತ್ತು ನಿರ್ದೇಶಕರು ಎಜುಸ್ಯಾಟ್ ಮೂಲಕ ಅಧ್ಯಾಪಕ ರೊಂದಿಗೆ ಮಾತನಾಡಲು ತೊಡಗಿದಾಗ ಕರೆಂಟ್ ಹೋಗುವುದು ವಿಶೇಷ ! ವಿಜ್ಞಾನ ಬೋಧನೆಗೆ ಆಧುನಿಕ ತಂತ್ರಜ್ಞಾನ ಅಗತ್ಯ. ಆದರೆ ಕಂಪ್ಯೂಟರ್ ನಾವು ಹೇಳಿದ್ದನ್ನು ಮಾತ್ರ ಮಾಡುತ್ತದೆ, ಅದು ಸ್ವಂತವಾಗಿ ಯೋಚಿಸುವುದಿಲ್ಲ. ಒಬ್ಬ ಅಧ್ಯಾಪಕ/ಕಿ ಮನಸ್ಸು ಮಾಡಿದರೆ ಸ್ಥಳ, ಕಾಲ, ದೇಶ, ಭಾಷೆ ಮೀರಿದ ಸಂವೇದನೆಗಳನ್ನು ವಿದ್ಯಾರ್ಥಿಗಳಿಗೆ ನಿರೂಪಿಸಬಲ್ಲರು. ಯಂತ್ರ ಯಂತ್ರವೇ, ಮನುಷ್ಯ ಮನುಷ್ಯನೇ. ಪ್ರಜಾಪ್ರಭುತ್ವ, ಸಂವಿಧಾನ, ಸಂಸ್ಕೃತಿ, ಸಮಾಜ, ಮೌಲ್ಯಗಳು, ನೈತಿಕತೆ, ಸೃಜನಶೀಲತೆ ಗಳನ್ನು ಮೇಳೈಸಿ ಬೋಧಿಸುವವರೇ ಉತ್ತಮ ಅಧ್ಯಾಪಕರು. ಇಂತಹ ಕ್ರಿಯೆಯನ್ನು ಎಲ್ಲ ಅಧ್ಯಾಪಕರು ಕೈಗೊಳ್ಳಬೇಕು. ಸಮಾಜದ, ಜ್ಞಾನದ ಋಣ ಅಧ್ಯಾಪಕರ ಮೇಲಿದೆ.

**ಆಡಳಿತ :** ಶೈಕ್ಷಣಿಕ ಆಡಳಿತ ಉಳಿದವುಕ್ಕಿಂತ ಭಿನ್ನ ವಾದುದು, ಇಲ್ಲಿ ಅಧಿಕಾರಶಾಹಿ ಧೋರಣೆ ಸಫಲ ವಾಗುವುದಿಲ್ಲ. ಬೌದ್ಧಿಕ ಪರಿಸರ ಇದು. ಪ್ರಿನ್ಸಿಪಾಲರಿ ಗಿಂತಲೂ ಹೆಚ್ಚು ಓದಿದ ಅಧ್ಯಾಪಕರಿರುತ್ತಾರೆ. ಕೆಲವು ಅಧ್ಯಾಪಕರು ವಿಶೇಷ ಜ್ಞಾನ, ಸಾಮರ್ಥ್ಯ ಹೊಂದಿರುತ್ತಾರೆ. ಅಂಥವರ ಪ್ರತಿಭೆ ಮತ್ತು ಶ್ರಮವನ್ನು ಆಡಳಿತಗಾರರು ಗುರುತಿಸಿ, ಸದ್ಬಳಕೆ

ಮಾಡಿಕೊಳ್ಳಬೇಕು. ಕರ್ನಾಟಕದ ಕಾಲೇಜು ಶಿಕ್ಷಣ ಇಲಾಖೆ ಕಳೆದ ಎರಡು ವರ್ಷಗಳಿಂದ ಖಾಯಂ ಪ್ರಿನ್ಸಿಪಾಲರನ್ನು ನೇಮಿಸಿಲ್ಲ. ಸುಮಾರು ಮುನ್ನೂರ ಐವತ್ತು ಕಾಲೇಜುಗಳಲ್ಲಿ ಓಓಡಿ ಪ್ರಿನ್ಸಿಪಾಲರಿದ್ದಾರೆ. ಇದೀಗ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಜಂಟಿ ನಿರ್ದೇಶಕ, ಅಪರ ನಿರ್ದೇಶಕ, ನಿರ್ದೇಶಕ ಮೊದಲಾದ ಸ್ಥಾನಗಳು ಖಾಲಿ ಇವೆ. ಕೆಎಎಸ್ ಅಧಿಕಾರಿ ಹೇಗೆ ಕಾಲೇಜು ಶಿಕ್ಷಣದ ನಿರ್ದೇಶಕ ನಾಗಬಲ್ಲ ? ಇದಕ್ಕೆ ವಿದ್ಯಾರ್ಹತೆ ಮತ್ತು ಬೋಧನಾ ಅನುಭವ, ಅಲ್ಲದೆ ಶೈಕ್ಷಣಿಕ ಮನೋಭಾವದ ಅಗತ್ಯವಿದೆ. ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಈಗ ಪ್ರೊಫೆಸರ್‌ಗಳೇ ಇಲ್ಲ ! ಬರೀ ಸಹಾಯಕ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಮಾತ್ರ ಇದ್ದಾರೆ. ಯುಜಿಸಿ ವೇತನ ಪಡೆಯುತ್ತಿರುವ ಇವರಿಗೇಕೆ ಬಡ್ತಿ ಎಂಬ ಕ್ಷುಲ್ಲಕ ಚಿಂತನೆ, ಅಸಹನೆ, ಮತ್ಸರ ಇದಕ್ಕೆ ಕಾರಣ ! ನಮ್ಮ ರಾಜ್ಯದಲ್ಲಿ ಯುಜಿಸಿ ವೇತನ ಪಡೆಯುವವರ ಸಂಖ್ಯೆ ಬಹಳ ಕಡಿಮೆ. ಎಲ್ಲಾ ಅತಿಥಿ ಉಪನ್ಯಾಸಕರೇ ಆಗಿಬಿಟ್ಟಿದ್ದಾರೆ. ಅನನುದಾನಿತ ಕಾಲೇಜುಗಳಿಗೆ ಸೇವಾ ನಿಯಮಗಳಿಲ್ಲ, ನಿರ್ದಿಷ್ಟ ವೇತನವೂ ಇಲ್ಲ. ವಿಶ್ವವಿದ್ಯಾನಿಲಯ ಮತ್ತು ಸರ್ಕಾರಿ ಕಾಲೇಜುಗಳಲ್ಲಿ ಸಹ ಅತಿಥಿ ಉಪನ್ಯಾಸಕರೇ ಹೆಚ್ಚು. ಇದು ಸಾಮಾಜಿಕ ಬೇಜವಾಬ್ದಾರಿತನವೂ ಹೌದು. ಎರಡೆರಡು ಪಿ.ಜಿ., ಪಿಎಚ್.ಡಿ. ಮಾಡಿದ ಅಧ್ಯಾಪಕರು, ಪ್ರಕಟಣೆ, ಸೃಜನಶೀಲ ಅಭಿವ್ಯಕ್ತಿ ಹೊಂದಿರುವ ಅಧ್ಯಾಪಕರೂ, ಉಳಿದವರೂ ವ್ಯವಸ್ಥೆಯ ದೃಷ್ಟಿಯಲ್ಲಿ ಒಂದೇ ಆಗಿದ್ದಾರೆ. ಇಂತಹ ನಿರ್ಧಾರಗಳನ್ನು ಸೂಕ್ತ ಸಮಯದಲ್ಲಿ ತೆಗೆದುಕೊಳ್ಳುವ ಮೂಲಕ ಶೈಕ್ಷಣಿಕ ಸಂಸ್ಥೆಗಳ ಆಡಳಿತ ಸುಲಭವೂ, ವಿದ್ಯಾರ್ಥಿ ಪ್ರಿಯವೂ ಆಗುವಂತೆ ನೋಡಿಕೊಳ್ಳಬೇಕು.

ವರ್ಷಕ್ಕೆ ಒಬ್ಬರೊ, ಇಬ್ಬರೊ ಬಂದುಹೋಗುವ ಕಮಿಷನರ್‌ಗಳು ಉಳಿದ ಇಲಾಖೆಗಳಂತೆ ಕಾಲೇಜು ಶಿಕ್ಷಣವನ್ನು ನೋಡಿದರೆ ಉಪಯೋಗವಿಲ್ಲ. ಇದು ಪೂರ್ಣವಾಗಿ ಬೌದ್ಧಿಕ ಆವರಣ. ಕಾರ್ಖಾನೆಗಳಂತೆ ಕಾಲೇಜುಗಳನ್ನು ನಡೆಸುವುದು ಉಚಿತವಲ್ಲ. ಹಾಗೆಂದು ಪೂರ್ಣ ಸ್ವಾಯತ್ತತೆ ನೀಡುವುದೂ ಸರಿಯಲ್ಲ. ಪಠ್ಯ ರೂಪಿಸುವ ವಿ.ವಿ. ಬೋಧಕರು, ಪಠ್ಯ ಬೋಧಿಸುವ ಕಾಲೇಜು ಅಧ್ಯಾಪಕರು, ಶೈಕ್ಷಣಿಕ ಪರಿಸರ ರೂಪಿಸುವ ಇಲಾಖೆ, ದಕ್ಷ ಪ್ರಿನ್ಸಿಪಾಲರು ಸಂಯೋಜಿತಗೊಂಡು ಉನ್ನತ ಶಿಕ್ಷಣ, ಕಾಲೇಜು ಶಿಕ್ಷಣದ ಘನತೆ ಕಾಪಾಡಬೇಕಿದೆ. ಅಧ್ಯಾಪಕರಿಗಿರುವ ಸವಲತ್ತುಗಳನ್ನು ಕಡಿತಗೊಳಿಸುವುದರ ಮೂಲಕ ತಮ್ಮ ಪೈಚಾಚಿಕ ಗುಣ ತೋರಿಸುವ ಬದಲು, ಸಂವಿಧಾನ ಹಾಗೂ ಕಾನೂನಿನ ಮೂಲಕ, ಯುಜಿಸಿ ನಿಯಮಾವಳಿಗಳ ಮೂಲಕ ಅವರಿಗಿರುವ ಅವಕಾಶಗಳನ್ನು ತೆರೆದಿಟ್ಟು, ಹುರಿದುಂಬಿಸಿ ಅವರು ಕಾರ್ಯ ನಿರ್ವಹಿಸಲು ಪ್ರೇರೇಪಿಸಬೇಕು.

ಒಟ್ಟಾರೆ, ವರ್ತಮಾನದ ಸ್ಥಿತಿಗತಿಗಳು ಉನ್ನತ ಶಿಕ್ಷಣಕ್ಕೆ ಕನ್ನಡಿ ಹಿಡಿದಿವೆ. ಬರುವ ದಿನಗಳಲ್ಲಾದರೂ ಸುಧಾರಣೆ ಆಗಲೇಬೇಕು. ಅಪಾರ ಮಾನವ ಸಂಪನ್ಮೂಲವನ್ನು ಸರಿಯಾದ ದಾರಿಯಲ್ಲಿ ನಡೆಸುವ ಅವಕಾಶ ಉನ್ನತ ಶಿಕ್ಷಣಕ್ಕಿದೆ. ಜನರ ತೆರಿಗೆ ಹಣ, ಸಾಮಾಜಿಕ ಜವಾಬ್ದಾರಿ, ಸಾಂಸ್ಕೃತಿಕ ಕಾಳಜಿಗಳಿಂದ ಕೂಡಿದ ಆಡಳಿತ – ಇವೆಲ್ಲ ಸೇರಿ, ಬರುವ ದಿನಗಳ ಸಮಾಜವನ್ನು ಕಟ್ಟಬೇಕಿದೆ. ಸರ್ಕಾರದ ನಿಧಾನಗತಿ, – ನಿರ್ಲಕ್ಷ್ಯ ಪ್ರವೃತ್ತಿ ಬದಲಾದಲ್ಲಿ ವ್ಯವಸ್ಥೆ ಚುರುಕುಗೊಳ್ಳುತ್ತದೆ. ಆಗ ಉನ್ನತ ಶಿಕ್ಷಣ ಇನ್ನಷ್ಟು ವ್ಯಾಪಕವೂ, ಸೂಕ್ಷ್ಮವೂ, ಫಲಪ್ರದವೂ ಆಗಬಲ್ಲದು.

**ಡಾ॥ ಪ್ರಸಾದಸ್ವಾಮಿ ಎಸ್.**
ಕನ್ನಡ ಸಹ ಪ್ರಾಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜಪುರ, ಬೆಂಗಳೂರು – ೫೬೦ ೦೩೬

## ಆತ್ಮರತಿ

ಮುಖವಾಡಗಳಡಿಯ
ಬದುಕೇ
ವರ್ಣರಂಜಿತವಾಗಿ
ತೋರುತ್ತಿರುವ ಹೊತ್ತಲ್ಲಿ,
ಮುಖಕ್ಕೆ
ಕನಿಷ್ಠ ಪಕ್ಷ
ಮೇಕಪ್ ಕೂಡ
ಬಳಿದುಕೊಳ್ಳದವರು
'ಆತ್ಮರತಿ'ಯ ಸಂತೆಯಲ್ಲಿ
ಅನಾಥರಾಗಿ ನಿಂತಿದ್ದಾರೆ.

**ಎಚ್. ಕೆ. ಶರತ್**
ವಿದ್ಯಾನಗರ, ಹಾಸನ – ೫೭೩೨೦೧

*(೫೪ನೇ ಪುಟದಿಂದ)*

ತಿರಸ್ಕರಿಸುತ್ತದೆ. 'ಹೀರೋಯಿಸಂ' ಎಂಬ ಪರಿಕಲ್ಪನೆಯ ಮೂಲಕ ನಮ್ಮ ನಡುವಿನ ಬಹುತೇಕ ಚಿತ್ರಗಳು ವ್ಯಕ್ತಿಕೇಂದ್ರಿತ ಕಥನದ ಅತಿರೇಕಗಳನ್ನು ಮುಟ್ಟುತ್ತಿರುವ ಸಂದರ್ಭದಲ್ಲಿ 'ತಿಥಿ' ಚಿತ್ರವು ಒಂದು ಜೀವಂತ ಸಮುದಾಯವನ್ನು ಯಾವುದೇ ಬಗೆಯ ಒರಟು ಬೌದ್ಧಿಕ ಪೂರ್ವಗ್ರಹಗಳಿಗೆ ಒಳಪಡಿಸದೆ ಆ ಸಮುದಾಯದ ಜೀವಂತಿಕೆಯನ್ನು ಗ್ರಹಿಸಲು ತೋರಿರುವ ಶ್ರದ್ಧೆ, ಈ ಚಿತ್ರದ ಮಹತ್ವವನ್ನು ಇಮ್ಮಡಿಗೊಳಿಸುತ್ತದೆ.

ಇಷ್ಟೆಲ್ಲಾ ಜಿಜ್ಞಾಸೆಗೆ ಎಡೆಮಾಡಿಕೊಡುವ 'ತಿಥಿ'ಯು, ಒಂದು ಅಪ್ಪಟ ಹಾಸ್ಯ ಚಿತ್ರದ ಹಾಗೆ ನೋಡಿಸಿಕೊಂಡು ಹೋಗುತ್ತದೆ. ಈ ಚಿತ್ರದಲ್ಲಿರುವ ಹಾಸ್ಯವು ಹಳೇ ಮೈಸೂರಿನ ಗ್ರಾಮೀಣ ಭಾಷೆಯ ಬಾಗು ಬಳುಕುಗಳನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡಿರುವ ಫಲವಾಗಿ ಹುಟ್ಟಿದೆ. ಈ ಹಾಸ್ಯಕ್ಕೆ ಗೇಲಿಯ ಗುಣವಿಲ್ಲ. ಅದು ಯಾವುದೇ ವ್ಯಕ್ತಿಯನ್ನಾಗಲೀ ಆತನ ಕೊರತೆಗಳನ್ನಾಗಲೀ ಗುರಿಯಾಗಿಸಿ ಕೊಳ್ಳುವುದಿಲ್ಲ. ಅಲ್ಲದೆ, ಯಾವುದೇ ದೃಶ್ಯದಲ್ಲೂ ಕೂಡ ಪ್ರೇಕ್ಷಕನಿಗೆ ಹಾಸ್ಯವನ್ನು ಪ್ರಯತ್ನಪೂರ್ವಕವಾಗಿ ಸರಬರಾಜು ಮಾಡುವ ಗೋಜಿಗೆ ಈ ಚಿತ್ರವು ಹೋಗುವುದಿಲ್ಲ. ಈ ಮೂಲಕ ಹಳ್ಳಿಗರನ್ನು, ಅವರ ಭಾಷೆ, ನಡವಳಿಕೆಗಳನ್ನು ವಕ್ರವಾಗಿ ತೋರಿಸಿ ಅವರನ್ನು ಹಾಸ್ಯದ ವಸ್ತುವನ್ನಾಗಿ ಮಾಡುವ ಅಪಾಯಕಾರಿ ಹಾಸ್ಯಪ್ರಜ್ಞೆಯಿಂದ 'ತಿಥಿ' ಚಿತ್ರವು ಸಂಪೂರ್ಣವಾಗಿ ಮುಕ್ತವಾಗಿದೆ. ಇದರ ಜೊತೆಗೆ ನಮ್ಮ ಚಿತ್ರಗಳು ಈಗಾಗಲೇ ಸಂಪೂರ್ಣವಾಗಿ ಮರೆತುಬಿಟ್ಟಿರುವ 'ವಿಷುಯಲ್ ಕಾಮಿಡಿ'ಯ ಸಾಧ್ಯತೆಗಳನ್ನು ಈ ಚಿತ್ರವು ಉತ್ತಮವಾಗಿ ದುಡಿಸಿಕೊಳ್ಳುತ್ತದೆ. ಕೇವಲ ಸಂಭಾಷಣೆಯ ಮೂಲಕವಷ್ಟೇ ಅಲ್ಲದೆ ದೃಶ್ಯ ಸಂಯೋಜನೆ ಹಾಗೂ ಸಂಕಲನದ ಮೂಲಕ ಹಾಸ್ಯವನ್ನು ಯಾವೆಲ್ಲಾ ಬಗೆಯಲ್ಲಿ ಹುಟ್ಟುಹಾಕಬಹುದು ಎಂಬುದಕ್ಕೆ 'ತಿಥಿ' ಚಿತ್ರದ ಹಲವಾರು ಕ್ಷಣಗಳು ಉದಾಹರಣೆಗಳಾಗಿ ನಿಂತಿವೆ. ಹಾಸ್ಯಪ್ರಜ್ಞೆಯ ಜೊತೆಗೆ, ಸಿನೆಮಾ ಮಾಧ್ಯಮದ ಮೇಲೆ ಉತ್ತಮ ಹಿಡಿತವನ್ನು ಹೊಂದಿದ್ದರೆ ಮಾತ್ರ ಇಂತಹ ನವಿರು ದೃಶ್ಯರೂಪಿ ಹಾಸ್ಯವನ್ನು ಸೃಷ್ಟಿಸಲು ಸಾಧ್ಯ ಎಂದು 'ತಿಥಿ'ಯು ಸ್ಪಷ್ಟವಾಗಿ ತೋರಿಸಿಕೊಡುತ್ತದೆ.

ಕಡೆಯದಾಗಿ, ಮನುಷ್ಯ ಜೀವನದ ಮೂಲ ಸೆಲೆಯಾದ ಸಾಮುದಾಯಿಕತೆಯನ್ನು ಕಲೆಯ ಮೂಲಕ ಮರುರೂಪಿಸುವ ನಮ್ರ ಪ್ರಯತ್ನವಾಗಿ 'ತಿಥಿ'ಯನ್ನು ಗುರುತಿಸಬಹುದು. ಮನುಷ್ಯರ ವರ್ತನೆಗಳ ಕುರಿತು 'ತಿಥಿ' ಚಿತ್ರವು ಹೊಂದಿರುವ ಅದಮ್ಯ ಆಸಕ್ತಿ ಹಾಗೂ ಅವುಗಳನ್ನು ಅರ್ಥೈಸಿಕೊಳ್ಳುವಲ್ಲಿ ಈ ಚಿತ್ರವು ಅಳವಡಿಸಿಕೊಂಡಿರುವ ಪೂರ್ವಗ್ರಹ–ಮುಕ್ತ ದೃಷ್ಟಿಕೋನವು 'ತಿಥಿ'ಯನ್ನು ಮೆಚ್ಚಿಕೊಳ್ಳುವ ಜೊತೆಗೆ ಪ್ರೀತಿಸುವಂತೆಯೂ ಮಾಡುತ್ತದೆ. 'ತಿಥಿ'ಯ ಕುರಿತು ಪ್ರಪಂಚದ ವಿವಿಧ ಭಾಗದ ಪ್ರೇಕ್ಷಕರಿಂದ ಬಂದಿರುವ ಉತ್ತೇಜಕ ಪ್ರತಿಕ್ರಿಯೆಗಳನ್ನು ಗಮನಿಸಿದರೆ, ತೋರಿಕೆಯನ್ನು ಮೀರಿದ ಕಲೆಯು ಎಲ್ಲರನ್ನೂ ತಲುಪುತ್ತದೆ ಎಂಬ ಮಾತು ಬಹುಶಃ ನಿಜ ಎಂದೆನಿಸುತ್ತದೆ. ಕಲಾತ್ಮಕತೆಯೆಂದರೆ ನಿರ್ದೇಶಕನ ಬೌದ್ಧಿಕತೆಯನ್ನು, ಪಾತ್ರದ ವೈಯಕ್ತಿಕತೆಯನ್ನು ಎತ್ತಿಹಿಡಿದು, ಪೊಲಿಟಿಕಲಿ ಕರೆಕ್ಟ್ ಆಗಿರುವುದಷ್ಟೇ ಎಂದು ಇದುವರೆಗೂ ಭಾವಿಸಿದ್ದ ಕನ್ನಡ ಕಲಾತ್ಮಕ ಸಿನಿಮಾ ಜಗತ್ತಿಗೆ, ಈ ಚಿತ್ರವು ಹೊಸ ದೃಷ್ಟಿಕೋನವನ್ನು ಹಾಗೂ ಹುರುಪನ್ನು ಕೊಡುತ್ತದೆ ಎಂದು ಆಶಿಸಬಹುದು. ಎಲ್ಲಕ್ಕಿಂತ ಹೆಚ್ಚಾಗಿ, "ಯಾರನ್ನೂ ಮುಖ್ಯಗೊಳಿಸದೆ ಯಾರನ್ನೂ ತಿರಸ್ಕರಿಸದೆ ಬದುಕಲು ಸಾಧ್ಯವಾಗುವುದಾದರೆ..." ಎಂಬುದು ಕನ್ನಡದ ಕಥನ ಪರಂಪರೆಯಲ್ಲಿ ಆಗಾಗ್ಗೆ ವ್ಯಕ್ತವಾಗಿರುವ ಒಂದು ಪ್ರಾಮಾಣಿಕ ಕನಸು. 'ತಿಥಿ' ಚಿತ್ರವು ತನ್ನೆಲ್ಲಾ ಅಂತರರಾಷ್ಟ್ರೀಯತೆಯ ನಡುವೆಯೂ ಈ ಕನಸನ್ನು ಅಲ್ಪಸ್ವಲ್ಪವಾದರೂ ಜೀರ್ಣಿಸಿಕೊಂಡಿರುವುದರಿಂದ, ಅದು ಕನ್ನಡ ಜೀವನ–ಸಂಸ್ಕೃತಿಯ ಒಂದು ಮೌಲಿಕ ದಾಖಲೆಯಾಗಿ ಉಳಿಯಲಿರುವುದಂತೂ ಸತ್ಯ.

**ಉತ್ಥಾನ ಭಾರಿಘಾಟ್**
ನಂ. ೧೮, ಪೊಲೀಸ್ ಸ್ಟೇಷನ್ ರಸ್ತೆ, ಬಸವನಗುಡಿ, ಬೆಂಗಳೂರು – ೫೬೦ ೦೦೪



# ಅಮೆರಿಕದ ಚಕ್ರವ್ಯೂಹದಲ್ಲಿ ಭಾರತ

ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಅಮೆರಿಕ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಅನುವಾಗುವ ನೀತಿಯನ್ನೇ ಅನುಸರಿಸುತ್ತದೆ. ತನಗೆ ಬೇಕೆನಿಸಿದಾಗ ಬೇಕಾದ ದೇಶದೊಂದಿಗೆ ಸಂಬಂಧಗಳನ್ನು ಬೆಳೆಸಿ ಕೊಳ್ಳುತ್ತದೆ, ಬೇಡವಾದಾಗ ಕೈಬಿಡುತ್ತದೆ. ಎರಡನೇ ಮಹಾಯುದ್ಧದ ನಂತರ ಅತ್ಯಂತ ಪ್ರಬಲ ರಾಷ್ಟ್ರವಾಗಿ ಬೆಳೆದಿರುವ ಅಮೆರಿಕದ ವಿದೇಶಾಂಗ ನೀತಿಯ ಇತಿಹಾಸವನ್ನು ಅಧ್ಯಯನ ಮಾಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಭಾರತ–ಅಮೆರಿಕ ಸಂಬಂಧಗಳ ಏರುಪೇರುಗಳು ಅದಕ್ಕೆ ಉದಾಹರಣೆ. ಆಗ್ನೇಯ ಏಶಿಯದಲ್ಲಿ ಬೆಳೆಯುತ್ತಿರುವ ಚೀಣಾದ ಪ್ರಾಬಲ್ಯವನ್ನು ಎದುರಿಸಲು ಈಗ ಅಮೆರಿಕಾಗೆ ಭಾರತದ ಸಖ್ಯ ಬೇಕಾಗಿದೆ. ಎನ್‌ಡಿಎ ನೇತೃತ್ವದಲ್ಲಿರುವ ಭಾಜಪಗೂ ಅಮೆರಿಕದೊಂದಿಗೆ ಸಂಬಂಧವನ್ನು ಬೆಸೆಯುವುದು ಬೇಕಾಗಿತ್ತು. ಅದರ ಫಲಶೃತಿಯೇ ಇತ್ತೀಚೆಗೆ ಎರಡೂ ದೇಶಗಳ ಮಧ್ಯೆ ಮಾಡಿಕೊಂಡ ಸೈನ್ಯ ವ್ಯವಸ್ಥಾಪನಾ ವಿನಿಮಯ ಒಪ್ಪಂದ (ಲಾಜಿಸ್ಟಿಕ್ಸ್ ಎಕ್ಸ್‌ಚೇಂಜ್ ಮೆಮೊರಾಂಡಮ್ ಆಫ್ ಅಗ್ರಿಮೆಂಟ್ (ಲೆಮೊಅ). ಇದರ ಪ್ರಕಾರ ಎರಡೂ ದೇಶಗಳು ಪರಸ್ಪರರ ಮಿಲಿಟರಿ ಸೌಕರ್ಯಗಳನ್ನು ಅಗತ್ಯಬಿದ್ದಾಗ ಉಪಯೋಗಿಸಿಕೊಳ್ಳಬಹುದು. ಖಾಯಂ ಸೈನಿಕ ನೆಲೆಯ ಪ್ರಸ್ತಾಪ ಒಪ್ಪಂದದಲ್ಲಿ ಇಲ್ಲದೇ ಹೋದರೂ ಅಮೆರಿಕಾಗೆ ಅದು ಹೆಚ್ಚು ಪ್ರಯೋಜನಕಾರಿ. ಏಕೆಂದರೆ ನಮ್ಮ ದೇಶದ ಮಿಲಿಟರಿ ವಿಮಾನ ನಿಲ್ದಾಣಗಳು, ಇತರ ಸೌಲಭ್ಯಗಳು, ಯುದ್ಧನೌಕೆಗಳು ಅಮೆರಿಕಾಗೆ ಲಭ್ಯವಿರುತ್ತವೆ. ನಾವು ಅವರ ಸೌಲಭ್ಯ ಉಪಯೋಗಿಸಿಕೊಳ್ಳಲು ಅವಕಾಶ ಇರುವುದಿಲ್ಲ. ಭಾರತ–ಅಮೆರಿಕದ ಪ್ರಮುಖ ಸಹಭಾಗಿತ್ವದಿಂದ ಬಹುದೂರ ಪಯಣಿಸಿ ಈಗ ಹೆಚ್ಚು ಕಡಿಮೆ ಅಮೆರಿಕದ ನೇತೃತ್ವದಲ್ಲಿರುವ ಮಿಲಿಟರಿ ಕೂಟದ ಹೊರಗಿರುವ ಪಾಲುದಾರನಾಗಿಬಿಟ್ಟಿದೆ.

ಭಾರತ–ಅಮೆರಿಕ ಸಂಬಂಧಗಳನ್ನು ಅವಲೋಕಿಸಿದರೆ, ಸ್ವತಂತ್ರ ವಿದೇಶೀ ನೀತಿ ಅನುಸರಿಸುತ್ತಿದ್ದು, ಶೀತಯುದ್ಧದ ಕಾಲದಲ್ಲಿ ಸಾಮ್ರಾಜ್ಯಶಾಹಿ–ಸಮಾಜವಾದಿ ಎರಡೂ ಬಣಗಳಿಂದ ದೂರವಿದ್ದು, ಅಲಿಪ್ತ ಚಳವಳಿಗೆ ನಾಯಕತ್ವ ನೀಡಿದ್ದ ದೇಶಗಳಲ್ಲಿ ಒಂದಾಗಿದ್ದ ಭಾರತ ಈಗ ಅಮೆರಿಕದ ಚಕ್ರವ್ಯೂಹದ ಭಾಗವಾಗಿದೆ. ಈ ಬೆಳವಣಿಗೆ ಹಠಾತ್ತಾಗಿ ಸಂಭವಿಸಿದ್ದೇನಲ್ಲ. ಸಮಾಜವಾದಿ ದೇಶದ ವಿಘಟನೆಯ ನಂತರ ಅಮೆರಿಕ ಏಕಕೇಂದ್ರಿತ ಜಗತ್ತಿನ ಪ್ರಬಲ ಶಕ್ತಿಯಾದಾಗಲೇ ಅದು ಪ್ರಾರಂಭ ವಾಯಿತು. ಸ್ವಾತಂತ್ರ್ಯಾನಂತರ ಅಧಿಕಾರಕ್ಕೇರಿದ ಕಾಂಗ್ರೆಸ್ ಸರಕಾರ ಅನಿವಾರ್ಯವಾಗಿ ಅಲಿಪ್ತನೀತಿಯನ್ನು ಅನುಸರಿಸಬೇಕಾಯಿತೇ ಹೊರತು, ಅಮೆರಿಕದೊಂದಿಗೆ ಮೈತ್ರಿ ಬೆಳೆಸುವ ಅವಕಾಶವನ್ನು ಎಂದೂ ಕೈಬಿಟ್ಟಿರಲಿಲ್ಲ. ಈಗ ಬಲಪಂಥೀಯ ಭಾಜಪ ಅಧಿಕಾರ ಬಂದಮೇಲೆ ಅದಕ್ಕೆ ಹೆಚ್ಚು ಒತ್ತಾಸೆ ದೊರೆಯಿತು, ಅಷ್ಟೆ. ಭಾರತದ ಬಂಡವಾಳಶಾಹಿ ವರ್ಗಕ್ಕೆ ಬೇಕಾಗಿದ್ದುದೂ ಕೂಡ ಅದೇ ಆಗಿತ್ತು. ಸ್ವತಂತ್ರ ಭಾರತ ತನ್ನೆಲ್ಲ ಯೋಜನೆಗಳಿಗೂ ಮೊದಲು ಮೊರೆಹೋಗಿದ್ದುದು ಅಮೆರಿಕದ ಬಳಿಗೆ. ಅಂದಿದ್ದ ಪರಿಸ್ಥಿತಿಯಲ್ಲಿ ಬೇರೆ ವಿಧಿಯಿಲ್ಲದೆ ಅಂದಿನ ಸೋವಿಯೆತ್ ಒಕ್ಕೂಟದ ಮೇಲೆ ಅವಲಂಬಿತವಾಗಬೇಕಾಯಿತು. ವಿವರಗಳಿಗೆ ಹೋಗಿ ಇಲ್ಲಿ ಪಟ್ಟಿ ತಯಾರಿಸುವುದು ಅನಗತ್ಯ. ಉದಾರೀಕರಣ, ಜಾಗತೀಕರಣ, ಮುಂತಾದ ನೀತಿಗಳನ್ನು ಭಾರತ ಅಂಗೀಕರಿಸಿದ ಮೇಲೆ ಆದ ಬೆಳವಣಿಗೆಯೇ ಅಮೆರಿಕದೊಂದಿಗೆ ಸಂಬಂಧಗಳ ವರ್ಧನೆಯಾದದ್ದು ಕೂಡ.

ಆಗಸ್ಟ್ ೨೦, ೨೦೧೬ರಂದು ಭಾರತ ಮತ್ತು ಅಮೆರಿಕದ ರಕ್ಷಣಾ ಸಚಿವರುಗಳು ಸಹಿ ಹಾಕಿದ ಸೈನ್ಯ ವ್ಯವಸ್ಥಾಪನಾ ವಿನಿಮಯ ಒಪ್ಪಂದ ಏಕಾಏಕಿ ಉದ್ಭವಿಸಿದ್ದೇನಲ್ಲ. ಅಮೆರಿಕ ೨೦೦೨ರಿಂದಲೇ ಭಾರತದೊಂದಿಗೆ ಇಂಥ ಒಂದು ಒಪ್ಪಂದ ಮಾಡಿಕೊಳ್ಳಲು ಅಪೇಕ್ಷಿಸಿತ್ತು. ಭಾಜಪ ಮೊದಲ ಬಾರಿಗೆ ಅಧಿಕಾರಕ್ಕೆ ಬಂದಾಗಲೇ ಪ್ರಧಾನಿ ವಾಜಪೇಯಿ ಅಮೆರಿಕದ ಜೊತೆ ಸಂಬಂಧಗಳನ್ನು ಬೆಸೆಯುವ ಸೂಚನೆ ವ್ಯಕ್ತಗೊಳಿಸಿದ್ದರು. ಮೋದಿ ಸರಕಾರ ಅಸ್ತಿತ್ವಕ್ಕೆ ಬಂದ ಎರಡು ವರ್ಷಗಳಾದ ಮೇಲೆ ಅದೀಗ ಕೈಗೂಡಿದೆ. ರಕ್ಷಣಾ ಕ್ಷೇತ್ರದಲ್ಲಿ ಸಹಕರಿಸಲು ಮೊದಲ ಬಾರಿಗೆ ಭಾರತ–ಅಮೆರಿಕಗಳ ಮಧ್ಯೆ ಒಪ್ಪಂದವಾದ್ದು ೨೦೦೫ರಲ್ಲಿ. ಅದುವರೆಗೆ ಭಾರತ ಅಮೆರಿಕದಿಂದ ಶಸ್ತ್ರಾಸ್ತ್ರಗಳನ್ನೂ ಖರೀದಿಸುತ್ತಿದ್ದಾಗ್ಯೂ ಯಾವುದೇ ಒಪ್ಪಂದವಾಗಿರಲಿಲ್ಲ. ೨೦೧೦ರಲ್ಲಿ ಮತ್ತು ೨೦೧೫ರಲ್ಲಿ ಈ ಸಹಕಾರ ಒಪ್ಪಂದವನ್ನು ಮುಂದುವರಿಸಿ ವಿಸ್ತರಿಸಲಾಯಿತು. ಆ ವೇಳೆಗಾಗಲೇ ಅಮೆರಿಕ ಭಾರತಕ್ಕೆ ಶಸ್ತ್ರಾಸ್ತ್ರಗಳನ್ನು ಒದಗಿಸುವ ಪ್ರಮುಖ ಭಾಗೀದಾರನಾಗಿತ್ತು. ೨೦೦೬–೨೦೦೮ರಲ್ಲಿ ಅಮೆರಿಕ ರಕ್ಷಣಾ ವಲಯದಲ್ಲಿ ಸಹಕಾರವನ್ನು ವಿಸ್ತರಿಸಲು ಭಾರತದೊಂದಿಗೆ ಮೂರು ಪ್ರತ್ಯೇಕ ಒಪ್ಪಂದಗಳನ್ನು ಮಾಡಿಕೊಂಡಿತು. ತಂತ್ರಜ್ಞಾನವನ್ನು ವಿನಿಮಯ ಮಾಡಿಕೊಳ್ಳಲು ಒಪ್ಪಂದಗಳನ್ನು ಮಾಡಿಕೊಂಡಿದ್ದರೂ ಅದು ಕಾರ್ಯ ರೂಪಕ್ಕಿಳಿದಿರುವುದು ಕಮ್ಮಿ. ಈ ಕಾಲಾವಧಿಯಲ್ಲೇ ನ್ಯೂಕ್ಲಿಯರ್ ಕ್ಷೇತ್ರದಲ್ಲಿ, ಮುಖ್ಯವಾಗಿ ನ್ಯೂಕ್ಲಿಯರ್ ವಿದ್ಯುತ್ ಸ್ಥಾವರಗಳ ನಿರ್ಮಾಣಕ್ಕೆ ಅಮೆರಿಕದೊಂದಿಗೆ ಸಹಕಾರಕ್ಕೆ ಒಪ್ಪಂದವಾಗಿದ್ದು. ಆದರೆ ಅದು ಇಂದಿನವರೆಗೆ ಕಾರ್ಯರೂಪಕ್ಕೆ ಬಂದಿಲ್ಲ.

ಈ ವರ್ಷ ಜೂನ್ ತಿಂಗಳಲ್ಲಿ ಪ್ರಧಾನಮಂತ್ರಿ ನರೇಂದ್ರ ಮೋದಿ ಅಮೆರಿಕಕ್ಕೆ ನೀಡಿದ ಭೇಟಿ ಸಂಬಂಧಗಳನ್ನು ಹೊಸ ಮಜಲಿಗೆ ಒಯ್ದಿತು. ಭಾರತಕ್ಕೆ ಅಮೆರಿಕ 'ಪ್ರಮುಖ ರಕ್ಷಣಾ ಪಟ್ಟ' ನೀಡಿದ್ದು ಕೂಡ ಆಗಲೆ. ಬದಲಾಗುತ್ತಿರುವ ಅಂತರರಾಷ್ಟ್ರೀಯ ವಿದ್ಯಮಾನಗಳ ಹಿನ್ನೆಲೆಯಲ್ಲಿ ಅಮೆರಿಕದೊಂದಿಗೆ ಮಾಡಿಕೊಂಡಿರುವ ರಕ್ಷಣಾ ಸಹಕಾರ ಒಪ್ಪಂದ ಎಲ್ಲಿಗೆ ಕೊಂಡೊಯ್ಯುವುದೋ ನೋಡಬೇಕಿದೆ. ಇದರಿಂದ ಪಾಕಿಸ್ತಾನವನ್ನು ಪ್ರತ್ಯೇಕಿಸಬಹುದು ಎನ್ನುವುದು ಕನಸು.



# ಸೌದಿ ದಾಳಿಯಿಂದ ತತ್ತರಿಸುತ್ತಿರುವ ಯೆಮೆನ್

ಅರೇಬಿಯನ್ ಪರ್ಯಾಯ ದ್ವೀಪದ ದಕ್ಷಿಣದ ತುದಿಗಿರುವ ದೇಶ ಯೆಮೆನ್. ಏಶಿಯಾ ಖಂಡಕ್ಕೆ ಸೇರಿರುವ ಈ ಪುಟ್ಟ ದೇಶ ಒಂದು ಕೋಟಿಗೂ ಹೆಚ್ಚು ಜನಸಂಖ್ಯೆ ಹೊಂದಿದೆ. ತೈಲ ನಿಕ್ಷೇಪ ಇದ್ದರೂ ಬಡ ದೇಶ. ನೆರೆಯ ಸೌದಿ ಅರೇಬಿಯದಲ್ಲಿ ದುಡಿಯಲು ಇಲ್ಲಿನ ಜನ ಹೋಗುತ್ತಾರೆ. ಮೊದಲೇ ಬಡತನದ ಬವಣೆಯಲ್ಲಿರುವ ಈ ದೇಶ ಈಗ ಹದಿನಾರು ತಿಂಗಳಿಂದ ಸೌದಿ ಅರೇಬಿಯ ಮತ್ತು ಮಿತ್ರ ರಾಷ್ಟ್ರಗಳು ನಡೆಸುತ್ತಿರುವ ಯುದ್ಧದಿಂದ ಬಳಲುತ್ತಿದೆ. ಈ ಯುದ್ಧಕ್ಕೆ ಪಾಶ್ಚಾತ್ಯ ರಾಷ್ಟ್ರಗಳ ಬೆಂಬಲವೂ ಇದೆ. ಕಡಿಮೆ ಮಳೆ ಇರುವ ಈ ದೇಶದಲ್ಲಿ ಸಾಗುವಳಿಗೆ ಭೂಮಿಯ ಪ್ರಮಾಣ ಕಡಿಮೆ. ನಿರಂತರವಾಗಿ ಸೌದಿ ವೈಮಾನಿಕ ದಾಳಿಗೆ ತುತ್ತಾಗಿರುವ ಈ ದೇಶ ತತ್ತರಿಸುತ್ತಿದೆ. ಇದುವರೆಗೆ ೬,೫೦೦ ಜನ ಬಲಿಯಾಗಿದ್ದಾರೆ. ದೇಶದ ಜನಜೀವನ ಅಸ್ತವ್ಯಸ್ತಗೊಂಡಿದೆ. ವಿಶ್ವಸಂಸ್ಥೆ ಹಾಗೂ ಮಾನವ ಹಕ್ಕುಗಳ ಆಯೋಗ ಹೆಚ್ಚಿನ ಭಾಗ ಜನರು ಸೌದಿ ವಿಮಾನ ದಾಳಿಗೆ ಬಲಿಯಾಗಿದ್ದಾರೆ. ಸುಮಾರು ಎರಡು ಮಿಲಿಯ ಜನ ನಿರಾಶ್ರಿತರಾಗಿದ್ದಾರೆ, ಯೂರೋಪು ಮತ್ತು ಪ್ರಪಂಚದ ಇತರ ದೇಶಗಳಿಗೆ ಲಕ್ಷಾಂತರ ಮಂದಿ ವಲಸೆ ಹೋಗಿದ್ದಾರೆ. ಹೆಚ್ಚು ಕಡಿಮೆ ಹದಿನಾರು ಮಿಲಿಯ ಜನ ಹೊಟ್ಟೆಗಿಲ್ಲದೆ ಸಾವಿಗೀಡಾಗುವ ಸಂಭವವಿದೆ. ಯೂನಿಸೆಫ್‌ಗೆ ಒದಗಿಸಿರುವ ಅಂಕಿ–ಅಂಶಗಳ ಪ್ರಕಾರ ೩೭೦,೦೦೦ ಮಕ್ಕಳು ಹಸಿವಿನಿಂದ, ರೋಗ–ರುಜಿನಗಳಿಂದ ಬಳಲುತ್ತಿವೆ. ಆಯಕಟ್ಟಿನ ಪ್ರದೇಶದಲ್ಲಿರುವ ಯೆಮೆನ್ ಬಹುಮುಖ್ಯ ಸಮುದ್ರಮಾರ್ಗ. ಯಾವತ್ತೂ ಸೌದಿಅರೇಬಿಯಕ್ಕೆ ಅದನ್ನು ಆಕ್ರಮಿಸಿಕೊಳ್ಳಲು ಆಸಕ್ತಿ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಕಾರಂತರ ಕಾದಂಬರಿಗಳನ್ನು ಅವಲೋಕಿಸುತ್ತಾ ಹೋದಲ್ಲಿ ಅವು ಸ್ತ್ರೀ ಬದುಕಿನ ವಿವಿಧ ಮಾದರಿಗಳನ್ನು ಬಿಂಬಿಸುತ್ತವೆ. ಸ್ತ್ರೀವಾದಿ ಚಿಂತನೆಯ ಮೂಲಕ ಇಂತಹ ಕಾದಂಬರಿಗಳನ್ನು ರಚಿಸಿರುವ ಕಾರಂತರು ಸಾಮಾಜಿಕ ಮತ್ತು ಕೌಟುಂಬಿಕ ವ್ಯವಸ್ಥೆಯೊಳಗಿನ ಸ್ತ್ರೀಯ ಬದುಕಿನ ಸ್ವರೂಪವನ್ನು, ಶೋಷಣೆಯ ವಿವಿಧ ಮುಖಗಳನ್ನು ಬಯಲಿಗೆಳೆಯುತ್ತಾರೆ. ಇಲ್ಲಿ ಕಾರಂತರ ಮೂಲ ಆಶಯ ಸ್ತ್ರೀಯನ್ನು ಕೀಳಾಗಿ ನಡೆಸುತ್ತಿರುವ ನಮ್ಮ ಪುರುಷಪ್ರಧಾನ ಕೌಟುಂಬಿಕ, ಸಾಮಾಜಿಕ, ಸಾಂಪ್ರದಾಯಿಕ ದೃಷ್ಟಿಕೋನ ಬದಲಾಗಬೇಕೆಂಬುದು. ಈ ಹಿನ್ನೆಲೆಯಲ್ಲಿ ರಚನೆಗೊಂಡ ಅವರ ಸ್ತ್ರೀ ಪ್ರಧಾನ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ.

# ಕಾರಂತರ ಸ್ತ್ರೀ ಪ್ರಧಾನ ಕಾದಂಬರಿಗಳು

## ಒಂದು ವಿಶ್ಲೇಷಣೆ

**ದಿವ್ಯ ಎಸ್.**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ನಿಲುವುಗಳ ಮೂಲಕ ತಮ್ಮ ಅನುಭವ ಜಗತ್ತನ್ನು ಕಾದಂಬರಿಗಳ ರೂಪದಲ್ಲಿ ಹೊರತಂದವರು ಕಾರಂತರು. ಶಿವರಾಮ ಕಾರಂತರ ಬಹುತೇಕ ಕಾದಂಬರಿಗಳು ಸ್ತ್ರೀ ಕೇಂದ್ರಿತ ವಸ್ತುವನ್ನೊಳಗೊಂಡಿವೆ. ಪ್ರಸ್ತುತ ಲೇಖನದಲ್ಲಿ 'ಕನ್ಯಾಬಲಿ' (ಸೂಳೆಯ ಸಂಸಾರ), 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ', 'ಧರ್ಮರಾಯನ ಸಂಸಾರ' – ಈ ಐದು ಸ್ತ್ರೀ ಪ್ರಧಾನ ಕಾದಂಬರಿಗಳನ್ನು ಇಲ್ಲಿ ಅವಲೋಕಿಸಲಾಗಿದೆ.

ಕಾರಂತರ ಸ್ತ್ರೀ ಪ್ರಧಾನ ಕಾದಂಬರಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಗೆ ದೊರಕುತ್ತಿರುವ ಸ್ಥಾನಮಾನ ಎಂತಹದ್ದು, ಯಾವ ನೆಲೆಯಲ್ಲಿ ಸ್ತ್ರೀಯ ಬದುಕು ಅನಾವರಣಗೊಳ್ಳುತ್ತಿದೆ, ಅವಳ ಬದುಕಿನ ಸ್ವರೂಪವೇನು ಎಂಬುದನ್ನು ಕುರಿತ ಗಾಢ ಚಿಂತನೆಯತ್ತ ಸಾಗುವುದರೊಂದಿಗೆ ಸ್ತ್ರೀಯ ಸಮಸ್ಯೆಗಳನ್ನೂ ಅವಲೋಕಿಸುತ್ತವೆ. ಅದು ಸಾಮಾಜಿಕ ವಲಯದಲ್ಲಾಗಿರಬಹುದು, ಕೌಟುಂಬಿಕ ವಲಯದಲ್ಲಾಗಿರಬಹುದು ಅಥವಾ ಇಂತಹ ಸಾಮಾಜಿಕ ಮತ್ತು ಕೌಟುಂಬಿಕ ರಂಗದಲ್ಲಿನ ಸ್ತ್ರೀಯರ ಬದುಕನ್ನು ಈ ಕಾದಂಬರಿಗಳು ತೆರೆದಿಡುತ್ತವೆ.

ಪುರುಷಪ್ರಧಾನ ವ್ಯವಸ್ಥೆಯೊಳಗೆ ಸಿಲುಕಿರುವ ಸ್ತ್ರೀ ಬದುಕಿನ ಹಲವಾರು ಸಮಸ್ಯೆಗಳ ವಿಶ್ಲೇಷಣೆ ಅವರ ಕಾದಂಬರಿಗಳಲ್ಲಿದೆ. ಸಂಪ್ರದಾಯದ ಹೆಸರಿನಲ್ಲಿ ಸ್ತ್ರೀಗೆ ಮಾತ್ರವೆ ಅನ್ವಯವಾಗುವ ಸಮಾಜದ ಅನಿಷ್ಟ ಪದ್ಧತಿಗಳಾದ ಬಾಲ್ಯ ವಿವಾಹ, ವಿಧವಾ ಪದ್ಧತಿ ಆಚರಣೆ, ಕೇಶಮುಂಡನ, ಸತಿಸಹಗಮನ ಮತ್ತು ವೇಶ್ಯಾವೃತ್ತಿಯಂತಹ ಅಮಾನವೀಯ ಆಚರಣೆಗಳ ಬಗ್ಗೆ ಅನಾದರವನ್ನು ವ್ಯಕ್ತಪಡಿಸುವ ಕಾರಂತರು ಆ ಮೂಲಕ ನಿರ್ಮಲ ಸಮಾಜ ನಿರ್ಮಾಣದ ಕನಸು ಕಂಡವರು. ಹಾಗಾಗಿಯೆ ಸ್ತ್ರೀಯನ್ನು ಶೋಷಣಾ ಕೂಪಕ್ಕೆ ತಳ್ಳುವ ಇಂತಹ ಸಾಮಾಜಿಕ ಪಿಡುಗುಗಳನ್ನು ವಿರೋಧಿಸುವ ಮೂಲಕ ಸ್ವಾಸ್ಥ್ಯ ಸಮಾಜ ನಿರ್ಮಾಣಕ್ಕಾಗಿ ಅವರು ಹಂಬಲಿಸುತ್ತಾರೆ.

ಕಾರಂತರ 'ಕನ್ಯಾಬಲಿ', 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ', 'ಧರ್ಮರಾಯನ ಸಂಸಾರ' – ಕಾದಂಬರಿಗಳಲ್ಲಿ ಬರುವ ಮಾಲತಿ, ಸುನಾಲಿನಿ, ಭಾಗೀರಥಿ, ಮಂಜುಳೆ, ಮೂಕಜ್ಜಿ, ಸರಸ್ವತಿ ಮೊದಲಾದ ಸ್ತ್ರೀ ಪಾತ್ರಗಳು ಒಂದಲ್ಲ ಒಂದು ರೀತಿಯಲ್ಲಿ ಇಂತಹ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದವರೆ ನಿಜ. ಆದರೆ ಅವರಲ್ಲಿ ಅಂತಹ ಸಮಸ್ಯೆಗಳ ವಿರುದ್ಧ ಪ್ರತಿಭಟನಾಕಾರಿ ನಿಲುವಿದೆ. 'ಕನ್ಯಾಬಲಿ'ಯ ಮಾಲತಿ ಇಡೀ ಸಾಮಾಜಿಕ ವ್ಯವಸ್ಥೆಯನ್ನೇ ವಿರೋಧಿಸಿದರೆ, 'ಸರಸಮ್ಮನ ಸಮಾಧಿ'ಯ ಸುನಾಲಿನಿ ಪಾತಿವ್ರತ್ಯದ ಹೆಸರಿನಲ್ಲಿ ಸ್ತ್ರೀಯ ಮೇಲೆ ಹೇರುವ ಪುರುಷಪ್ರಧಾನ ಅಧಿಕಾರವನ್ನೇ ಪ್ರಶ್ನಿಸುತ್ತಾಳೆ. ಇನ್ನುಳಿದಂತೆ 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ'ನ ಪಾತ್ರಗಳು ಸ್ತ್ರೀ ಸಾಮರ್ಥ್ಯದ ಪ್ರತೀಕಗಳಾಗಿ ಕಾಣಿಸುತ್ತವೆ.

ಕಾರಂತರ ಕಾದಂಬರಿಗಳು ಚರ್ಚಿಸುವ ಸ್ತ್ರೀ ಬದುಕಿನ ಬಹುಮುಖ್ಯ ಸಮಸ್ಯೆಗಳಲ್ಲಿ 'ಬಾಲ್ಯವಿವಾಹ' ಮತ್ತು 'ವೈಧವ್ಯ ಜೀವನ ಪದ್ಧತಿ' ಪ್ರಧಾನವಾಗಿ ಕಾಣಬರುತ್ತವೆ. ಎಳೆಯ ಪ್ರಾಯದಲ್ಲೇ ಹೆಣ್ಣನ್ನು ಮದುವೆಯ ಹೆಸರಿನಲ್ಲಿ ಸಾಂಪ್ರದಾಯಿಕ ಕೌಟುಂಬಿಕ ಚೌಕಟ್ಟಿನೊಳಗೆ ಅವಳ ಸಂಪೂರ್ಣ ಸ್ವಾತಂತ್ರ್ಯವನ್ನು ಬಿಗಿದಿಡುವ 'ಬಾಲ್ಯವಿವಾಹ' ನಮ್ಮ ಸಮಾಜಕ್ಕಂಟಿದ ಮಸಿ. ಈ ಅಂಧ ಆಚರಣೆಯ ಬಗೆಗೆ ಕಾರಂತರಿಗೆ ಕ್ರಾಂತಿಕಾರಿ ನಿಲುವಿದೆ. 'ಕನ್ಯಾಬಲಿ'ಯ ಮಾಲತಿ, 'ಸರಸಮ್ಮನ ಸಮಾಧಿ'ಯ ಸುನಾಲಿನಿ, 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಮೂಕಜ್ಜಿ ಬಾಲ್ಯವಿವಾಹಕ್ಕೆ ಬಲಿಯಾದವಳೆ. ಇಂತಹ ಸಮಸ್ಯೆಗೆ ಗುರಿಯಾದವರ ಬದುಕು ಒಂದು ತೆರನಾದರೆ, ಬಾಲ್ಯದಲ್ಲೇ ವೈಧವ್ಯ ಪ್ರಾಪ್ತಿಯಾದ ಸ್ತ್ರೀಯರ ಬದುಕಿನ ರೀತಿಯೇ ಮತ್ತೊಂದು ತೆರನಾದುದು. ರೂಢಿಗತ ಸಂಪ್ರದಾಯದ ಹೆಸರಿನಲ್ಲಿ ಕುಂಕುಮ, ಹೂವು, ಬಳೆ, ಮೂಗುತಿಯನ್ನು ಕಿತ್ತು ಕೆಂಪು ಸೀರೆ ಉಡಿಸಿ, ಕೇಶಮುಂಡನ ಮಾಡಿಸಿ, ಹೆಣ್ಣನ್ನು ವಿಕಾರಗೊಳಿಸುವ ಮೂಲಕ ಬಲವಂತವಾಗಿ ಸ್ತ್ರೀಗೆ ಮಾತ್ರವೇ ಅನ್ವಯವಾಗುವಂತೆ

ವೈಧವ್ಯ ಜೀವನವನ್ನು ಹೇರಲಾಗುತ್ತಿದೆ. ಇಂತಹ ವೈದಿಕ ವಿಧವೆಯರ ಬದುಕಿನ ಬವಣೆಯನ್ನು ಕಾರಂತರ ಕಾದಂಬರಿಗಳು ತೆರೆದಿಡುತ್ತವೆ.

'ಕನ್ಯಾಬಲಿ' ಕಾದಂಬರಿಯ ಮಾಲತಿ ವಿಧವೆ. ಬಾಲ ವಿಧವೆ. ತನಗರಿವಿಲ್ಲದ ವಯಸ್ಸಿನಲ್ಲಿ ವಿವಾಹಕ್ಕೆ ಕೊರಳೊಡ್ಡಿದ ತಪ್ಪಿಗೆ ಅರಿವಿಗೆ ಬರುವ ಮೊದಲೇ 'ವೈಧವ್ಯ'ದ ಫಲವಾಗಿ ದೊರೆತ 'ವಿಧವೆ' ಎಂಬ ಹಣೆಪಟ್ಟಿಯೇ ಅವಳ ಬದುಕಿಗೆ ಉರುಳಾಗಿ ಪರಿಣಮಿಸುತ್ತದೆ. ಸಮಾಜವಿರಲಿ, ತನ್ನ ಕುಟುಂಬದಲ್ಲೂ ಆಕೆಗೆ ಯಾವುದೇ ಸ್ಥಾನಮಾನವಿಲ್ಲ. ಅವಳ ಆಸೆ-ಆಕಾಂಕ್ಷೆಗಳಿಗೆ ಮನ್ನಣೆಯಿಲ್ಲ. ತಂದೆಗೆ ಮಗಳು ಲೆಕ್ಕಕ್ಕೇ ಇಲ್ಲ. ಅವಳು 'ಕೇವಲ ಕಾಲ ಕಸ'. ಅಣ್ಣನ ಮದುವೆಯ ದಿನ ಪುರೋಹಿತರ ಬಾಯಿಂದ ಹೊರಟ 'ಇದೇನಪಶಕುನ' ಎಂಬ ಮಾತು, ಅತ್ತಿಗೆಗೆ ಹೂ ಮುಡಿಸುವಾಗ ಅವಳು ತನಗೂ ಬೇಕೆಂದಾಗ ತಾಯಿ ತೋರಿದ ಔದಾಸೀನ್ಯ, ಕೋಪದಿಂದ ಅತ್ತಿಗೆಯ ಹಣೆಯ ತಿಲಕವನ್ನೊರೆಸಿದ ಚಿತ್ರ - ಹೀಗೆ ಎಲ್ಲವೂ ಅವಳಲ್ಲಿ ತೀವ್ರ ವೇದನೆಯನ್ನು ಉಂಟುಮಾಡಿವೆ. ಹೀಗೆ ಎಲ್ಲರಿಂದಲೂ ಉಪೇಕ್ಷೆಗೆ ಗುರಿಯಾಗಲು ಕಾರಣವೊಂದೇ. ಅದೆಂದರೆ ಅವಳ 'ವೈಧವ್ಯ'. ಹಾಗಾಗಿಯೆ ವಿಧವೆಯೆಂದರೆ ಅಮಂಗಳ, ಕೇಡು ಎಂಬ ನಂಬಿಕೆಯುಳ್ಳ ಸಮಾಜದ ನಡುವೆ 'ಮುಂಡೆ' ಎನಿಸಿಕೊಂಡು ಬಾಳಲು ಒಪ್ಪದ ಮಾಲತಿ ಅಂತಹ ಇಡೀ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯನ್ನೇ ಧಿಕ್ಕರಿಸಿ ನಡೆಯುತ್ತಾಳೆ. ಆದರೆ ಬದುಕನ್ನು ಸಾಗಿಸಬೇಕಾದ ಅನಿವಾರ್ಯತೆ ಅವಳನ್ನು ವೇಶ್ಯೆಯನ್ನಾಗಿಸುತ್ತದೆ. ವೇಶ್ಯೆಯಾಗಿ ಅವಳು ಅನುಭವಿಸುವ ಯಾತನೆಗಳನ್ನು ಕಾದಂಬರಿಯು ಕಟ್ಟಿಕೊಡುತ್ತದೆ. ಸ್ತ್ರೀಯ ಮೇಲಿನ ದೌರ್ಜನ್ಯವನ್ನು ಬಯಲಿಗೆಳೆಯುವ ಈ ಕಾದಂಬರಿಯ ಅಂತ್ಯ ಮಾತ್ರ ದುರಂತಮಯವಾದುದು. 'ವಿಧವೆ'ಗೆ ಅಲಂಕಾರವೇಕೆಂದು ತಿರಸ್ಕರಿಸಿ, ಅವಳ ಎಲ್ಲಾ ಸುಖ-ಸಂತೋಷಗಳನ್ನು ಗಂಡನೊಂದಿಗೇ ಕೊಲ್ಲಬೇಕೆಂಬ ನಂಬಿಕೆಯುಳ್ಳ ತಂದೆಯ ಅಮಾನವೀಯ ವರ್ತನೆಯಿಂದಾಗಿ ಮನೆ ಬಿಟ್ಟು ಬಂದು ಅನಿವಾರ್ಯವಾಗಿ ವೇಶ್ಯಾವೃತ್ತಿ ಹಿಡಿದ ಮಾಲತಿಗೆ ಕೊನೆಗೆ ತಂದೆಯನ್ನೇ ಗಿರಾಕಿಯ ಸ್ಥಾನದಲ್ಲಿ ಕಾಣಬೇಕಾದ ದುರಂತ ಸನ್ನಿವೇಶ ಎದುರಾಗುತ್ತದೆ. ವೇಶ್ಯೆಯ ಸಹವಾಸ ಬಯಸಿ ಬಂದ ಆತ ಕೂಡ ಹೆಂಡತಿಯನ್ನು ಕಳೆದುಕೊಂಡ ಒಬ್ಬ ವಿದುರ. ಕೇವಲ ಮಹಿಳೆಯ ಮೇಲಷ್ಟೇ ಹೇರುವ ವೈಧವ್ಯದ, ಪಾತಿವ್ರತ್ಯದ ಚೌಕಟ್ಟು ಇಲ್ಲಿ ಪುರುಷನಿಗೇಕಿಲ್ಲ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅಂತಹ ಪುರುಷಪ್ರಧಾನ ನಿಕೃಷ್ಟ ಸಂಪ್ರದಾಯದ ಮೌಲ್ಯಗಳನ್ನು ಕಾರಂತರು ಇಲ್ಲಿ ವಿರೋಧಿಸುತ್ತಾರೆ.

ಕಾರಂತರ ಕಾದಂಬರಿಗಳಲ್ಲಿ ವಿಧವೆಯರಿಗೆ ಒಂದು ವಿಶೇಷ ಸ್ಥಾನವಿದೆ. ವಿಧವೆ ಎಂದರೆ ಅಮಂಗಳದ ಸಂಕೇತ ಎಂಬುದನ್ನು ನಿರಾಕರಿಸುವ ಅವರು ವಿಧವೆಯರಲ್ಲೂ ಸ್ತ್ರೀ ಸಾಮರ್ಥ್ಯದ ಸಾಧ್ಯತೆಗಳನ್ನು ತೆರೆದಿಡುತ್ತಾರೆ. 'ಮೂಕಜ್ಜಿಯ ಕನಸುಗಳು' ಕಾದಂಬರಿಯ 'ಮೂಕಜ್ಜಿ' ಇಂತಹ ಸ್ತ್ರೀತ್ವದ ಒಂದು ಮಾದರಿ. ಈಕೆ ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡು ವೈದಿಕ ಸಂಪ್ರದಾಯಕ್ಕೆ ತನ್ನೆಲ್ಲಾ ಆಸೆ-ಆಕಾಂಕ್ಷೆಗಳನ್ನು ಬಲಿಕೊಟ್ಟು ಕ್ರಮೇಣ 'ಮೂಕಿ'ಯಾದವಳು. ಇನ್ನೂ ಹತ್ತು ತುಂಬದ ಪ್ರಾಯದಲ್ಲೇ 'ವಿಧವೆ' ಎನಿಸಿಕೊಂಡು ವೈಧವ್ಯದ ಬದುಕು ಸಾಗಿಸುತ್ತಿದ್ದ ಆಕೆ ಪ್ರಾಯಕ್ಕೆ ಕಾಲಿರಿಸಿದಾಗ ತನ್ನಷ್ಟಕ್ಕೆ ತಾನೇ ಏನೇನೋ ಗೊಣಗಿದ್ದನ್ನು ಕಂಡು ನೋಡುವವರು ಅವಳಿಗೆ 'ಜಕ್ಕಣಿ' ಹಿಡಿದಿದೆ ಎಂದು ತೀರ್ಮಾನಿಸಿದರ ಫಲವಾಗಿ ಮಂತ್ರವಾದಿಯ ಕೈಯಿಂದ ಹೊಡೆಸಿಕೊಂಡು ತೀರದ ನೋವುಂಡ ಬಳಿಕವೇ, "ತಾನು ಮಾತನಾಡಿದುದರ ಫಲವೇ ನನ್ನ ಈ ನೋವಿಗೆ ಕಾರಣ" ಎಂದು ತೀರ್ಮಾನಿಸಿ, ಅಂದಿನಿಂದ ಮಾತನ್ನೇ ಆಡದೆ ಮೌನವಾಗಿಯೇ ಜೀವನ ನಡೆಸುವುದನ್ನು ಆರಂಭಿಸಿದಳು. ಹಾಗಾಗಿಯೆ ತಂದೆ ತಾಯಿ ಇರಿಸಿದ್ದ 'ಮೂಕಾಂಬಿಕೆ' ಎಂಬ ಹೆಸರೇ ಅನ್ವರ್ಥವಾಗಿ 'ಮೂಕಿ', 'ಮೂಕಜ್ಜಿ' ಎಂದಾಗಿದೆ.



'ಸರಸಮ್ಮನ ಸಮಾಧಿ' ಎಂಬುದು ಗಂಡನೊಂದಿಗೆ ಸಹಗಮನ ಮಾಡಿದ ಮಹಾಸತಿ ಸರಸ್ವತಿಯ ಸಮಾಧಿ. ನಂತರ ಅಲ್ಲೇ ಒಂದು ಮಾಸ್ತಿಕಲ್ಲು ಸ್ಥಾಪನೆಯಾಗಿ ಗುಡಿಯಾಗಿ ಮಾರ್ಪಟ್ಟಿದೆ. "ಯಾವ ಸಂಸಾರದಲ್ಲೇ ಆಗಲಿ ದಂಪತಿಗಳಲ್ಲಿ ಒಡಕು ಬಂದು, ಜೀವನ ಅಸಹ್ಯವಾದರೆ ಅಂಥವರು ಸರಸಮ್ಮನಲ್ಲಿಗೆ ಬಂದು ಮಾಸ್ತಿ ಹಣೆಗೆ ಕುಂಕುಮವಿರಿಸಿ, ಗುಡಿಯ ಮುಂದಿನ ತೀರ್ಥದಲ್ಲಿ ಒಂದು ತೆಂಗಿನಕಾಯಿಯನ್ನು ತೇಲಿ ಬಿಟ್ಟರೆ ಅವರ ದಾಂಪತ್ಯ ಸಮಸ್ಯೆ ಬಗೆಹರಿಯುವುದು" ಎಂಬ ನಂಬಿಕೆ ಜನರದ್ದು. ಹಾಗಾಗಿ ಪ್ರತಿ ಗುರುವಾರವೂ 'ಸರಸಮ್ಮನ ಸಮಾಧಿ'ಗೆ ಬಂದು ಪೂಜೆ ಸಲ್ಲಿಸುವವರಿದ್ದಾರೆ. ಅವರೆಲ್ಲರೂ ದಾಂಪತ್ಯದಲ್ಲಿ ಸುಖ ಕಾಣದವರೆ. ಆದರೆ ಈ ನಂಬಿಕೆಯ ಹಿಂದಿರುವ ವಾಸ್ತವ ಸತ್ಯವೇ ಬೇರೆ. ದಾಂಪತ್ಯದ ಬಿರುಕುಗಳನ್ನು ಸರಿಪಡಿಸುವ 'ಮಹಾಸತಿ ಸರಸಮ್ಮ' ದಾಂಪತ್ಯ ಜೀವನದಲ್ಲಿ ಸುಖ ಕಾಣದವಳು. ರೋಗಿಷ್ಠ ಗಂಡನೊಂದಿಗೆ ಜೀವನ ನಡೆಸಲಾರದೆ ನರಳುತ್ತಾ ಕೊನೆಗೆ ಗಂಡನ ಮೃತ ಶರೀರದೊಂದಿಗೆ ಪುರುಷಾಧಿಕಾರದ ಸಮಾಜವನ್ನು ವಿರೋಧಿಸಲಾಗದೆ ಚಿತೆಯೇರಿದ ನತದೃಷ್ಟ ಹೆಣ್ಣು. ಬದುಕಿದ್ದಾಗ ಅವಳ ಮನದ ವೇದನೆಯನ್ನು ಅರಿಯದ ಸಮಾಜ ಸತ್ತ ನಂತರ ಅವಳನ್ನು ದೈವತ್ವಕ್ಕೇರಿಸಿದೆ, 'ಮಹಾಸತಿ'ಯನ್ನಾಗಿಸಿದೆ. ಹಾಗಾಗಿ ದಾಂಪತ್ಯದ ವಿರಸಗಳನ್ನು ಸರಿಪಡಿಸುವಳೆನ್ನುವ ಜನರ ನಂಬಿಕೆಯ "ಸರಸಮ್ಮನ ಸಮಾಧಿಯಲ್ಲಿನ ಸೂಕ್ಷ್ಮ ಶರೀರಿಯಾದ ಸರಸಮ್ಮನ ಭೂತ ಇಲ್ಲಿ ವಿಷಮ ದಾಂಪತ್ಯದ ವ್ಯಂಗ್ಯದ ಸಂಕೇತ" (ಶಿವರಾಮ ಕಾರಂತ; ಸಾಂಸ್ಕೃತಿಕ ಅನುಸಂಧಾನದ - ಸಂ. ಡಾ॥ ಗುರುಲಿಂಗ ಕಾಪಸೆ).

ಕಾದಂಬರಿಯ ಮುನ್ನುಡಿಯಲ್ಲಿ ಕಾರಂತರೇ ಹೇಳಿರುವಂತೆ, "ಪುರುಷಪ್ರಧಾನ ಸಮಾಜದಲ್ಲಿ ಜೀವನದ ಅನೇಕ ಕ್ಷೇತ್ರಗಳಲ್ಲಿ ಸ್ತ್ರೀಯ ಮನಸ್ಸು ಮತ್ತು ಶರೀರಗಳೆರಡೂ ಅವನ ಸೊತ್ತು; ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ ಎಂಬ ಭಾವನೆ ಜಗತ್ತಿನ ಹಲವು ದೇಶ ಮತ್ತು ಮತಗಳು ಸಾರುತ್ತ ಬಂದಿವೆ." ಇಂತಹ ಜಡ್ಡುಗಟ್ಟಿದ ಸಾಂಪ್ರದಾಯಿಕ, ಮತೀಯ ನಂಬಿಕೆಗೊಳಗಾಗಿರುವ ಪುರುಷಪ್ರಧಾನ ಸಮಾಜವು ಸ್ತ್ರೀಯನ್ನು ತನ್ನ ಬಂಧನದಲ್ಲಿರಿಸಿದೆ. ಕಾದಂಬರಿಯ ಸುನಾಲಿನಿ, ಭಾಗೀರಥಿ, ಸರಸಮ್ಮ, ಸೀತಕ್ಕ, ಜಾನಕಮ್ಮ ಮೊದಲಾದ ಸ್ತ್ರೀ ಪಾತ್ರಗಳು ಇಂತಹ ಪುರುಷ ಪ್ರಧಾನ ಕೌಟುಂಬಿಕ ಚೌಕಟ್ಟಿನಲ್ಲಿ ನಲುಗಿದವರು. ಹೆಣ್ಣಿನ ಅಧಿಕಾರವನ್ನಾಗಲಿ, ಸ್ವಾತಂತ್ರ್ಯವನ್ನಾಗಲಿ ಒಪ್ಪದ ಕಾದಂಬರಿಯ ತಿಮ್ಮಪ್ಪಯ್ಯ, ವೆಂಕಣ್ಣಯ್ಯನಂಥವರು ಅಂತಹ ವ್ಯವಸ್ಥೆಯ ಪ್ರತಿನಿಧಿಗಳು. ಆದರೆ ಕಾದಂಬರಿಯು ಇಂಥ ಪುರುಷಾಧಿಕಾರದ ನಿಲುವನ್ನು ಸಮರ್ಥಿಸುವುದಿಲ್ಲ. ಬದಲಿಗೆ ಸುನಾಲಿನಿ, ಭಾಗೀರಥಿಯ ಮೂಲಕ ಅಂತಹ ದಾಂಪತ್ಯ ಜೀವನದ ವಿಧೇಯತೆಯನ್ನು ಪ್ರಶ್ನಿಸುತ್ತದೆ. ಮದುವೆಯಾದರೂ ದಾಂಪತ್ಯ ಸುಖ ಕಾಣದ 'ಸುನಾಲಿನಿ' ಹಾಗೂ ಗಂಡನ ಮನೆಯಲ್ಲಿ ಕೀಳೆಂದೆನಿಸಿಕೊಂಡು ಬಾಳಲು ಒಪ್ಪದ 'ಭಾಗೀರಥಿ'ಯ ಪ್ರತಿಭಟನಾತ್ಮಕ ನಿಲುವು ಹೆಣ್ಣಿಗೂ ಸ್ವತಂತ್ರ ಅಸ್ತಿತ್ವವಿದೆ ಎಂಬುದನ್ನು ಸಾರುತ್ತದೆ.

'ಸುನಾಲಿನಿ' ತನ್ನ ಹದಿನೇಳನೇ ವಯಸ್ಸಿಗೆ ವೈವಾಹಿಕ ಜೀವನಕ್ಕೆ ಕಾಲಿರಿಸಿದವಳು. ವಿವಾಹವಾಗಿ ಹಲವು ವರ್ಷಗಳು ಉರುಳಿದರೂ ಅವಳಿಗೆ ಯಾವುದೇ ದಾಂಪತ್ಯ ಸುಖವಿಲ್ಲ. ಸದಾಕಾಲ ವ್ಯಾಪಾರದಲ್ಲೇ ಮುಳುಗಿರುತ್ತಿದ್ದ ಗಂಡನೊಡನೆ ಸರಿಯಾದ ಮಾತೂ ಸಹ ಇಲ್ಲ. ಯಾವುದನ್ನೂ ಪ್ರಶ್ನಿಸುವ ಅಧಿಕಾರವಿಲ್ಲ. ತನ್ನ ದುಃಖವನ್ನು ಮರೆಯಲು ಒಂದು ಸಂತತಿಯೂ ಇಲ್ಲ. ಮನುಷ್ಯರ ನಡುವೆ ಬದುಕುತ್ತಿದ್ದರೂ

ಅವಳದು ಒಬ್ಬಂಟಿ ಜೀವನದಂತೆ. ಹಾಗಾಗಿ ಅವಳಿಗೆ ಗಂಡು–ಹೆಣ್ಣಿನ ವೈವಾಹಿಕ ಬದುಕಿನ ಮೇಲೆಯೆ ಅಸಡ್ಡೆ ಮೂಡುತ್ತದೆ. "ತಾನು ಮದುವೆಯಾದ ಬಳಿಕ ತನಗೆ ಬಾಯಿಲ್ಲ, ಅಧಿಕಾರವಿಲ್ಲ, ಬೇರೆ ಮದುವೆ ಯಾಗುವಂತಿಲ್ಲ. ಆದ್ದರಿಂದ ಈ ಆಮರಣಾಂತ ಶಿಕ್ಷೆಯನ್ನು ಸ್ವೀಕರಿಸಬೇಕು" (ಸರಸಮ್ಮನ ಸಮಾಧಿ, ಪು. ೧೦೩) ಎಂದು ನುಡಿಯುವ ಸುನಾಲಿನಿ, "ಪ್ರಾಯಶಃ ಹೆಂಗಸಿಗೆ ಅಭಿಮಾನವಿರಬಾರದು ಅವಳು ತಾನೆಂಬುದನ್ನು ಗಂಡನ ಕಾಲ್ತುಳಿತಕ್ಕೆ ಬಲಿಕೊಡಬೇಕು ಹಾಗೆ ಮಾಡಿದಲ್ಲಿ ಯಾವ ಬೈಗುಳವನ್ನೂ ಸಹಿಸಬಹುದು, ಒದೆಯನ್ನೂ ತಾಳಬಹುದು. ಅಷ್ಟು ನಿಂದೆಯಿಂದ ಕಂಡ ಸ್ತ್ರೀ ಜಂತು ಉಚ್ಚ ಪೀಠದ ಮೇಲೆ ಕುಳಿತ ಪುರುಷದೇವನಿಗೆ ರಾತ್ರಿ ಕಾಲಕ್ಕೆ ಅನಿವಾರ್ಯ. ಭೂತಕ್ಕೆ ಸುಳಿದೆಸೆಯುವ ಕೋಳಿಯಂತೆ, ಕಾಮಕ್ಕೆ ಸುಳಿದೆಸೆಯುವ ಕೋಳಿ ಹೆಣ್ಣಲ್ಲವೇ" ಎಂದು ಹೇಳುವ ಮೂಲಕ ದಾಂಪತ್ಯ ಜೀವನದ ಪುರುಷಾಧಿಕಾರವನ್ನು ಪ್ರಶ್ನಿಸುತ್ತಾಳೆ, ಅಂತಹ ದಾಂಪತ್ಯ ಜೀವನವನ್ನೇ ನಿರಾಕರಿಸುತ್ತಾಳೆ.

ರಾಜ್ಯದಲ್ಲಿ ಹೆಚ್ಚಾದ ಮರುಭೂಮಿ!



ಯೋಚಿಸಿ ಪ್ರಯೋಜನವಿಲ್ಲ, ನನಗೊಬ್ಬ ರಿಯಲ್ ಎಸ್ಟೇಟ್ ಮನುಷ್ಯ ಗೊತ್ತು, ಈ ಭೂಮಿಗೆ ಬಂಗಾರದ ಬೆಲೆ ಕೊಡ್ತಾನವ!

ಇನ್ನುಳಿದಂತೆ ಕಾದಂಬರಿಯ ಮತ್ತೊಂದು ಪ್ರಮುಖ ಪಾತ್ರ 'ಭಾಗೀರಥಿ'. ಸ್ವಾಭಿಮಾನಿ, ಛಲವಾದಿಯಾದ ಈಕೆ ಕಾಲವಸ್ತುವಿನಂತೆ ಕಾಣುವ ಮಾವನ ಮನೆಗೆ ಹೋಗುವುದಿಲ್ಲವೆಂದು ಧಿಕ್ಕರಿಸಿ ತವರಿಗೆ ಬಂದವಳು. ಆ ಮೂಲಕ ಹೆಣ್ಣನ್ನು ಕೀಳೆಂದು ಕಾಣುವ ಗಂಡನ ಮನೆಯನ್ನೇ ಸಂಪೂರ್ಣವಾಗಿ ತಿರಸ್ಕರಿಸಿ ಪುರುಷಾಧಿಕಾರಕ್ಕೆ ಸವಾಲೊಡ್ಡಿ ನಿಲ್ಲುತ್ತಾಳೆ.

ಇಂಥದ್ದೇ ಪ್ರತಿಭಟನಾತ್ಮಕ ನೆಲೆಯಲ್ಲಿ ಸ್ತ್ರೀಯ ಅಸ್ತಿತ್ವವನ್ನು ಸಾರುವ ಮತ್ತೊಂದು ಕಾದಂಬರಿ 'ಧರ್ಮರಾಯನ ಸಂಸಾರ'. ಕಾದಂಬರಿಯ ನಾಯಕಿ 'ಸರಸ್ವತಿ' ಇಂತಹ ಸ್ತ್ರೀ ಸಾಮರ್ಥ್ಯದ ಒಂದು ಮಾದರಿ. ಎಳೆಯ ಪ್ರಾಯದಲ್ಲೇ ವಿವಾಹವಾಗಿ ಗಂಡನ ಮನೆಗೆ ಕಾಲಿಡುವ ಆಕೆ ಗಂಡ ಮಹಾಬಲಯ್ಯನ ಲೈಂಗಿಕ ಆಸೆಯ ಕ್ರೂರತೆಗೆ ಬಲಿಯಾಗಬೇಕಾಗುತ್ತದೆ. ಗಂಡನ ವಿಚಿತ್ರ ವರ್ತನೆ ಅವಳಲ್ಲಿ ಪ್ರತಿಭಟನೆಯ ಕಿಚ್ಚನ್ನು ಹಚ್ಚುತ್ತದೆ. ಹಾಗಾಗಿ ಗಂಡನ ಮನೆಯಲ್ಲಿದ್ದುಕೊಂಡೇ ಅವನ ವಿಕೃತ ವರ್ತನೆಗೆ ತಿರುಗಿಬಿದ್ದು ತನ್ನದೇ ಮಾದರಿಯಲ್ಲಿ ಸ್ವಬದುಕನ್ನು ಕಟ್ಟಿಕೊಳ್ಳುತ್ತಾಳೆ. ತನ್ನ ಕಣ್ಣೆದುರಿಗೆ ನಡೆದ ಗಂಡನ ಹಾದರವನ್ನು, ಅವನ ಹಿಂಸೆಯ ಕ್ರೂರತೆಯನ್ನು ನೆನೆದೇ ಅವಳು ಮನೆಕೆಲಸದಾತ ನಾಗಪ್ಪನೊಂದಿಗೆ ಲೈಂಗಿಕ ಸಂಬಂಧ ಹೊಂದಿ ಮಗುವನ್ನು ಪಡೆಯುವ ಮೂಲಕ ಕ್ರೂರ ಗಂಡನ ವಿರುದ್ಧ ಪ್ರತಿಭಟನಾಕಾರಿ ನಿಲುವನ್ನು ವ್ಯಕ್ತಪಡಿಸುತ್ತಾಳೆ.

ಇನ್ನುಳಿದಂತೆ ಕಾದಂಬರಿಯಲ್ಲಿ ಕಂಡುಬರುವ ಮಹಾಲಕ್ಷ್ಮಿ, ಪದ್ಮಾವತಿಯರು ಸಹ ಇಂತಹ ಪುರುಷಾಧಿಕಾರತ್ವದ ತುಳಿತಕ್ಕೆ ಸಿಕ್ಕವರೆ. ಮಹಾಲಕ್ಷ್ಮಿಯ ಗಂಡನಿಗೆ 'ಹೆಂಡತಿ' ಕೇವಲ 'ಒಂದು ವಸ್ತುವಿನಂತೆ' ಮಾತ್ರ. ಆದರೆ ಇವರಲ್ಲಿ ಸರಸ್ವತಿಯಲ್ಲಿರುವಂಥ ಪ್ರತಿಭಟನಾ ಸಾಮರ್ಥ್ಯವಿಲ್ಲ. ಪುರುಷಪ್ರಧಾನ ಕೌಟುಂಬಿಕ ಚೌಕಟ್ಟಿನೊಳಗೆ ಬದುಕಿದ ಸಹಜ ಸ್ತ್ರೀಯರ ಮಾದರಿಗಳಾಗಿ ಇವರು ಕಾಣಿಸುತ್ತಾರೆ.

ಕಾರಂತರ ಕಾದಂಬರಿಗಳಲ್ಲಿ ಕಾಣುವ ಮತ್ತೊಂದು ಸ್ತ್ರೀ ಬದುಕಿನ ಸ್ವರೂಪವೆಂದರೆ ಅದು 'ವೇಶ್ಯೆಯರ ಬದುಕಿನ ಚಿತ್ರಣ'. ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ ಬದುಕು ಸಾಗಿಸುವ ಅನೇಕ ವೇಶ್ಯೆಯರ ಪಾತ್ರಗಳು ಕಾರಂತರ ಕಾದಂಬರಿಗಳಲ್ಲಿವೆ. 'ಕನ್ಯಾಬಲಿ'ಯ ಮಾಲತಿ, 'ಸರಸಮ್ಮನ ಸಮಾಧಿ'ಯ ಬೆಳ್ಳಕ್ಕ ಮತ್ತು ಗುಲಾಬಿಯಂತಹ ಪಾತ್ರಗಳು ಇದಕ್ಕೆ ಉದಾಹರಣೆ. ಆದರೆ ಅವುಗಳಿಗಿಂತ ಭಿನ್ನವಾಗಿ ನಿಲ್ಲುವ ವೇಶ್ಯೆಯರ ಬದುಕನ್ನೇ ಕೇಂದ್ರವಾಗಿರಿಸಿಕೊಂಡ ಕಾದಂಬರಿ 'ಮೈ ಮನಗಳ ಸುಳಿಯಲ್ಲಿ'.

'ಮೈಮನಗಳ ಸುಳಿಯಲ್ಲಿ' ಇದು ವೇಶ್ಯೆಯೊಬ್ಬಳ ಆತ್ಮವೃತ್ತ. ಮಂಜುಳೆ ಈ ಕಾದಂಬರಿಯ ಕೇಂದ್ರಬಿಂದು. ಆದರೆ ಮಂಜುಳೆ ಕಾರಂತರ ಇತರೆ ಕಾದಂಬರಿಗಳಲ್ಲಿ ಕಂಡುಬರುವ ವೇಶ್ಯೆಯರಂತಲ್ಲ. ಮಂಜುಳೆಯ ತಾಯಿ ಭವಾನಿ ಆಕೆಗೆ ಮೈ ಮಾರಿದರೂ ಮನಸ್ಸನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಬೋಧಿಸಿದ್ದಳು. ಆದರೆ ಮಂಜುಳೆ ಮೈ ಮನಗಳ ಸವಿಗಾಗಿ ಹಾತೊರೆದಳು. ಏಕೆಂದರೆ ಅವಳಿಗೆ "ಲೈಂಗಿಕ ಅಭೀಪ್ಸೆಯೆಂಬುದು ಕೇವಲ ಮೈಯ ಹಸಿವು ಅಲ್ಲ; ಅದೊಂದು ಬಗೆಯ ಮನಸ್ಸಿನ ತಾದ್ಯಾತ್ಮದ ಪ್ರಕ್ರಿಯೆ" (ಶಿವರಾಮ ಕಾರಂತರ ಕಾದಂಬರಿಗಳು; ಸ್ತ್ರೀ ಸಂಕಥನದ ಸ್ವರೂಪ ಡಾ॥ ಟಿ. ರಾಜೇಂದ್ರ ತಗಡ್ಲಿ, ಪುಟ ೧೧೯). ಹಾಗಾಗಿ ಅವಳ ದೃಷ್ಟಿಯಲ್ಲಿ ಮೈಮನಸುಗಳೆರಡು ಒಂದಾದಾಗಲೆ ನಿಜವಾದ ತೃಪ್ತಿ ದೊರಕುವುದು. ಹೀಗೆ ಮೈಮನಸುಗಳೆರಡರ ಸಾಮರಸ್ಯದಲ್ಲಿ ಬದುಕಬೇಕೆಂದು ಬಯಸುವ ಮಂಜುಳೆಯ ಬಾಳಿನಲ್ಲಿ ಬಂದು ಹೋದ ಕಡಲೂರ ಪೈಗಳು, ಸುಬ್ರಾಯ ಉಳ್ಳೂರರು, ನಂಜಪ್ಪ ಮೊದಲಾದವರಿಂದ ಮೈಮನಸುಗಳೆರಡರ ಸುಖವನ್ನು ಕಾಣಲಾಗದೆ ಅವಳು ವಿಫಲಳಾಗುತ್ತಾಳೆ. ಹಾಗಾಗಿ "ಮಂಜುಳೆ ತಾನು ಬಯಸುವ ಜೀವನದ ಪರಿಪೂರ್ಣ ಲೈಂಗಿಕ ಜೀವನ ಪಡೆಯಲು ಸಾಧ್ಯವಾಗದೇ ಗಂಡಿನ 'ಕಾಮಪಿಪಾಸೆ'ಗೆ ಬಲಿಯಾಗುತ್ತಾಳೆ" (ಕಾರಂತರ ಕಾದಂಬರಿಗಳು; ಸ್ತ್ರೀ ಸಂಕಥನದ ಸ್ವರೂಪ : ಡಾ॥ ಟಿ. ರಾಜೇಂದ್ರ ತಗಡ್ಲಿ, ಪುಟ ೧೨೦). ಕಡೆಗೆ ಅವಳ ಬಯಕೆ ಲಕ್ಷ್ಮಣತೀರ್ಥ ಸ್ವಾಮಿಯವರಿಂದ ಈಡೇರುತ್ತದೆ. ಹೀಗೆ ತೃಪ್ತ ಜೀವನವನ್ನು ಪಡೆದೆ ಎನ್ನುವಲ್ಲಿಗೆ ಅವಳ ಆತ್ಮವೃತ್ತವು ಅಂತ್ಯವಾಗುತ್ತದೆ. ಆ ಮೂಲಕ ಕಾರಂತರು ಮೈಮನಗಳ ಹೊಂದಾಣಿಕೆಗೆ ಹಂಬಲಿಸುವ ವೇಶ್ಯೆಯ ಬದುಕಿನ ಸ್ವರೂಪವನ್ನು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ವೇಶ್ಯಾಕುಲದಲ್ಲಿ ಜನಿಸಿದ ಮಂಜುಳೆ ಸಹಜವಾಗಿ ವೇಶ್ಯೆಯಾಗಿ ಬದುಕನ್ನು ಸಾಗಿಸಿದಂಥವಳು. ಹಾಗೆಂದು ಆಕೆ ಸಮಾಜದ ಇತರೆ ಸ್ತ್ರೀಯರಂತೆ 'ಗರತಿ'ಯರಾಗಿ ಬದುಕಲು ಇಚ್ಛಿಸಿದವಳಲ್ಲ. ಏಕೆಂದರೆ ಅವಳ ಪಕ್ಕದ ಮನೆಯ ಅಡಿಗರು ತಮ್ಮ ಹೆಂಡತಿಗೆ ನೀಡಿರುವ ಸ್ಥಾನದ ಬಗ್ಗೆ ಅವಳಿಗೆ ನಿರಾಕರಣೆಯಿದೆ. 'ಹೆಂಡತಿ'ಯನ್ನು ಇಷ್ಟು ಕೀಳಾಗಿ ಕಾಣುವ ಗೃಹಸ್ಥಾಶ್ರಮಕ್ಕೆ ಕಾಲಿರಿಸಿ ಬದುಕುವುದಕ್ಕಿಂತಲೂ ಅವಳಿಗೆ ತನ್ನ ಬಾಳೇ ಮೇಲು ಎಂದೆನಿಸುತ್ತದೆ. ಹಾಗಾಗಿ ವೇಶ್ಯೆಯಾಗಿಯೆ ಜೀವನ ನಡೆಸುತ್ತಾಳೆ. ಮಂಜುಳೆಯ ಈ ಅಭಿಪ್ರಾಯ ಪುರುಷ ಪ್ರಧಾನ ಕೌಟುಂಬಿಕ ಚೌಕಟ್ಟಿನೊಳಗಿನ ಹೆಣ್ಣಿನ ಅಧೀನತೆಯ ನಿರಾಕರಣೆಯ ಸಂಕೇತ. ಇನ್ನುಳಿದಂತೆ ಭವಾನಿ, ಶಾರಿ, ಚಂದ್ರಿ ಮೊದಲಾದ ಸ್ತ್ರೀ ಪಾತ್ರಗಳು ಕಾದಂಬರಿಯಲ್ಲಿವೆ. ಭವಾನಿ, ಶಾರಿ ಕೂಡ ವೇಶ್ಯೆಯಾಗಿಯೇ ಜೀವನ ನಡೆಸಿದವರು. ಆದರೆ ಕಾದಂಬರಿಯ ನಾಲ್ಕನೆ ತಲೆಮಾರಿನ ಚಂದ್ರಿಯ ಪಾತ್ರ ಈ ಬಗೆಯದಲ್ಲ. ವೇಶ್ಯಾಜೀವನವನ್ನು ನಿರಾಕರಿಸಿ ವಿದ್ಯೆ ಕಲಿತು ನೌಕರಿ ಮಾಡಿಯಾದರೂ ಸ್ವಬದುಕನ್ನು ಕಟ್ಟಿಕೊಳ್ಳಬೇಕೆಂಬ ಹೊಸ ಬದುಕಿನ ಅನ್ವೇಷಣೆ ಅವಳಲ್ಲಿದೆ.

ಈ ರೀತಿಯಾಗಿ ಕಾರಂತರ ಕಾದಂಬರಿಗಳನ್ನು ಅವಲೋಕಿಸುತ್ತಾ ಹೋದಲ್ಲಿ ಅವು ಸ್ತ್ರೀ ಬದುಕಿನ ವಿವಿಧ ಮಾದರಿಗಳನ್ನು ಬಿಂಬಿಸುತ್ತವೆ. ಸ್ತ್ರೀವಾದಿ ಚಿಂತನೆಯ ಮೂಲಕ ಇಂತಹ ಕಾದಂಬರಿಗಳನ್ನು ರಚಿಸಿರುವ ಕಾರಂತರು ಸಾಮಾಜಿಕ ಮತ್ತು ಕೌಟುಂಬಿಕ ವ್ಯವಸ್ಥೆಯೊಳಗಿನ ಸ್ತ್ರೀಯ ಬದುಕಿನ ಸ್ವರೂಪವನ್ನು, ಶೋಷಣೆಯ ವಿವಿಧ ಮುಖಗಳನ್ನು ಬಯಲಿಗೆಳೆಯುತ್ತಾರೆ. ಇಲ್ಲಿ ಕಾರಂತರ ಮೂಲ ಆಶಯ ಸ್ತ್ರೀಯನ್ನು ಕೀಳಾಗಿ ನಡೆಸುತ್ತಿರುವ ನಮ್ಮ ಪುರುಷಪ್ರಧಾನ ಕೌಟುಂಬಿಕ, ಸಾಮಾಜಿಕ, ಸಾಂಪ್ರದಾಯಿಕ ದೃಷ್ಟಿಕೋನ ಬದಲಾಗಬೇಕೆಂಬುದು. ಈ ಹಿನ್ನೆಲೆಯಲ್ಲಿ ರಚನೆಗೊಂಡ ಅವರ ಸ್ತ್ರೀ ಪ್ರಧಾನ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ.

**ದಿವ್ಯ ಎಸ್.**
ನಂ. ಎಫ್–೮/ಎ, ವೀವರ್ಸ್ ಕಾಲೋನಿ, ೫ನೇ ಅಡ್ಡರಸ್ತೆ
ವಿಶ್ವೇಶ್ವರ ನಗರ, ಮೈಸೂರು – ೫೭೦ ೦೦೮

# ಸಾಧಕ–ಬಾಧಕ

"ಅಯ್ಯೋ ಮೂದೇವಿ, ಅಯೋಗ್ಯ. ಯಾವಾಗ ನೋಡಿದರೂ ತಲೆತಗ್ಗಿಸಿಕೊಂಡು ಮೊಬೈಲ್ ನೋಡುತ್ತಿರುತ್ತಿ... ತಲೆ ಎತ್ತಿ ಮೇಲೆ ನೋಡುವುದನ್ನು ಕಲಿ". ಹೀಗೆ ಶುರುವಾಗುತ್ತೆ ಸಹಸ್ರನಾಮ ಬೆಳಿಗ್ಗೆ ಹಿರಿಯರಿಂದ. ನಿಜವಾಗಿ ಪ್ರಶ್ನೆ ಇರುವುದು ಸಾಮಾಜಿಕ ಜಾಲತಾಣ ಮತ್ತು ಸ್ಮಾರ್ಟ್ ಫೋನ್‌ಗಳ ಕುರಿತಾಗಿ. ದೊಡ್ಡವರು ಹೇಳುವುದರಲ್ಲಿ ಏನಾದರೂ ನಿಜವಿದೆಯೆ ? ಸ್ಮಾರ್ಟ್ ಫೋನ್ ನನ್ನನ್ನು ಹಾಳುಮಾಡುತ್ತಿದೆಯೇ ? ಸ್ವಲ್ಪಮಟ್ಟಿಗೆ ನನ್ನನ್ನು ಚಂಚಲಚಿತ್ತನಾಗಿ ಮಾಡಿದೆ ಅದು ಎನ್ನುವುದು ನಿಜ. ಆದರೂ ಅದು ಅಂಥ ಕೆಟ್ಟದೇನಲ್ಲ. ಇದು ನನ್ನ ಅನಿಸಿಕೆ.

ಸಾಮಾಜಿಕ ಜಾಲತಾಣ ಕೆಲವರಿಗೆ ಗೀಳಾಗಿಬಿಟ್ಟಿದೆ ಎಂದು ಹಿರಿಯರು ಹೇಳುವುದರಲ್ಲಿ ಅರ್ಥವಿದೆ. ಅದರಲ್ಲೂ 'ಸೆಲ್ಫಿ ಸಂಸ್ಕೃತಿ' ಚಟ ಕೆಟ್ಟ ಪರಿಣಾಮ ಬೀರುತ್ತದೆ. ಆದರೆ ಇದು ಬಹುಮುಖಿ ಸಾಮಾಜಿಕ ಜಾಲತಾಣದ ಒಂದು ಭಾಗ, ಅಷ್ಟೆ. ಸಾಮಾಜಿಕ ಜಾಲತಾಣ ಒಂದು ರೀತಿಯಲ್ಲಿ ಹಲವು ವಿಷಯಗಳಿಗೆ ವೇದಿಕೆಯಾಗಿದೆ. ವರ್ಣಭೇದ, ಲಿಂಗ ತಾರತಮ್ಯ, ದೇಶಿ ಹಾಗೂ ವಿದೇಶಿ ವ್ಯವಹಾರ ಮೊದಲಾದವುಗಳ ಕುರಿತು ಅದರಲ್ಲಿ ಚರ್ಚೆ ಇರುತ್ತದೆ. ಆ್ಯಪ್ಸ್ ಮತ್ತು ಸಾಮಾಜಿಕ ಜಾಲತಾಣಗಳಲ್ಲಿ ಈಗ ಸುದ್ದಿವಾಹಿನಿ ಸಂಸ್ಥೆಗಳು ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಿರುವುದರಿಂದ ಅತಿಮುಖ್ಯವಾದ ಬೆಳವಣಿಗೆಗಳ ಬಗ್ಗೆ ತಿಳುವಳಿಕೆ ಪಡೆದುಕೊಳ್ಳಲು ಅನುಕೂಲವಾಗಿದೆ. ಕೆಲವರು ಅದರ ಬಳಕೆಯನ್ನು ಮೂರ್ಖತನ ಎಂದು ಕರೆಯಬಹುದು. ಆದರೆ ನನ್ನ ಮಟ್ಟಿಗೆ ಸುತ್ತಲ ಜಗತ್ತಿನ ಕುರಿತು ಅರಿವು ಮೂಡಿಸುವಂಥದ್ದು ಅದು.

ಅಮೆರಿಕದಲ್ಲಿ ಸಂಭವಿಸಿದ ಮೈಕೇಲ್ ಬ್ರೌನ್ ಸಾವಿನ ಪ್ರಕರಣ ಅದಕ್ಕೆ ಒಂದು ಉದಾಹರಣೆ. ಇದು ನನ್ನನ್ನು ಚಕಿತಗೊಳಿಸಿತ್ತು. ಪೊಲೀಸರ ದೌರ್ಜನ್ಯ ಮತ್ತು ವರ್ಣಭೇದ ಕುರಿತು ದೇಶದೆಲ್ಲೆಡೆ ಕಿಚ್ಚು ಹಬ್ಬಿತ್ತು. ಸಾಮಾಜಿಕ ಜಾಲತಾಣ ಇದಕ್ಕೆ ಹೊರತಾಗಿರಲಿಲ್ಲ. ಸುದ್ದಿ ಮತ್ತು ಸಾಮಾಜಿಕ ಜಾಲತಾಣ ಪರಿಕರಗಳನ್ನು ಹೊಂದಿರುವ ನನ್ನ ಸ್ಮಾರ್ಟ್ ಫೋನ್ ಒಂದು ದೊಡ್ಡ ಪುಸ್ತಕ ಭಂಡಾರವೇ ಆಗಿತ್ತು. ಹಲವು ಆಕರಗಳಿಂದ ನನಗೆ ಮಾಹಿತಿ ಲಭಿಸಿತು. ವಿಷಯ ಕುರಿತು ಉಪನ್ಯಾಸಗಳನ್ನೂ ಕೇಳಿಸಿಕೊಳ್ಳಲು ಅವಕಾಶವಾಯಿತು. ಹಲವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಮೊದಲ ಬಾರಿಗೆ ನನಗೆ ಅಮೆರಿಕದಲ್ಲಿ ಬೇರೂರಿರುವ ವರ್ಣ ತಾರತಮ್ಯದ ಬಗ್ಗೆ ಅರಿವು ಹೆಚ್ಚಿಸಿಕೊಳ್ಳಲು ಅವಕಾಶವಾಯಿತು. ಅಮೆರಿಕದಲ್ಲಿ ವರ್ಣ ಅಸಮಾನತೆಯನ್ನು ಅಂತ್ಯಗೊಳಿಸಲು ಹೋರಾಡುವುದಕ್ಕೆ ಅದು ನನ್ನನ್ನು ತೊಡಗಿಸಿಕೊಳ್ಳುವಂತೆ ಮಾಡಿತು. ವಿಷಯ ಅರಿತುಕೊಳ್ಳಲು ನಾನು ಸಾಕಷ್ಟು ಸಮಯವನ್ನು ಕಳೆದೆ ಸಾಮಾಜಿಕ ಜಾಲತಾಣದ ಮುಂದೆ. ಹಾಗಾದರೆ ಅದು ನನ್ನನ್ನು ಕರ್ತವ್ಯದಿಂದ ವಿಮುಖಗೊಳಿಸಿತೆ? ಖಂಡಿತ ಇಲ್ಲ. ನಾನು ಇನ್ನಷ್ಟು ಹೆಚ್ಚು ಮತಿವಂತನಾದೆ, ಜಾಗೃತನಾದೆ. ಸ್ಮಾರ್ಟ್ ಫೋನ್ ಹಾಗೂ ಸಾಮಾಜಿಕ ಜಾಲತಾಣ ವೈಯಕ್ತಿಕವಾಗಿ, ವ್ಯಾವಹಾರಿಕವಾಗಿ ಜಗತ್ತನ್ನು ಅವಲೋಕಿಸಲು ನನ್ನ ದೃಷ್ಟಿಯನ್ನು ವಿಶಾಲಗೊಳಿಸಿದೆ. ಅದು ಅಂಗೈಯಲ್ಲೇ ಇರುವ ಜ್ಞಾನಭಂಡಾರ. ಅಲ್ಲಿ ದೊರಕುವ ಮಾಹಿತಿಯ ಪ್ರವಾಹ ದಿಕ್ಕೆಡಿಸಬಹುದು. ಆದರೆ ನಾವು ಇಂದು ಮಾಧ್ಯಮ ಸಂಸ್ಕೃತಿಯಲ್ಲಿ ಅತಿ ದೊಡ್ಡ ಕ್ರಾಂತಿಯನ್ನೇ ಕಾಣುತ್ತಿದ್ದೇವೆ. ನಾನು ಅದರಿಂದ ಪ್ರಯೋಜನ ಪಡೆದಿದ್ದೇನೆ. ಹಾಗಾಗಿ ಮೂದಲಿಸಬೇಡಿ ನಾನು ತಲೆತಗ್ಗಿಸಿ ಅಂಗೈಯಲ್ಲಿ ಮೊಬೈಲ್ ಇರಿಸಿಕೊಂಡಿದ್ದರೆ.

**ಶಶಾಂಕ್**
ಕ್ಯಾಂಟನ್, ಅಮೆರಿಕ

## ವೃಷಭಾವತಿ

ಬೆಂಗಳೂರು ಊರಾಗಿದ್ದಾಗ
ವೃಷಭಾವತಿ ಕುಂಟೆಬಿಲ್ಲೆ ಆಡುವ ಪುಟ್ಟ ತುಂಟ ಹುಡುಗಿ

ಬೆಂಗಳೂರು ನಗರವಾದಾಗ
ಮುನಿಸು ಮೌನಗಳ ನಡುವೆ ಹೊರಳಾಡುತ್ತ
ಪುಷ್ಪವತಿಯಾದ ವೃಷಭಾವತಿ,

ಬೆಂಗಳೂರು ಮಹಾನಗರವಾದಾಗ
ಕಾಂಡೋಮು ಕಾರ್ಬನ್ನು ಸಿರಂಜುಗಳ, ಪ್ಲಸ್
ಮನೆಮನೆಯ ತೀರ್ಥಪ್ರಸಾದಗಳ ತುಂಬಿಸಿಕೊಂಡು
ಫಲವತಿಯಾದ ವೃಷಭಾವತಿ

ಈಗ ಬಾಯಲ್ಲಿ ನೊರೆಯಾಡುತ್ತಾಳೆ
ಮಡಿಲಲಿ ಬೆಂಕಿಬಾಗಿನ ತುಂಬಿಕೊಂಡು
ಕೆಂಪಾಂಬುಧಿಯಾಗಿ ತೆವಳುತ್ತಾಳೆ

ಮೈತುಂಬ ಕಜ್ಜಿ ಕೀವುಗಳ ಜೆಲ್ ಹಚ್ಚಿಕೊಂಡು
ದುರ್ನಾತ ಹೊಡೆಯುತ್ತಾಳೆ

ನೆನೆಯುತ್ತಾಳೆ
ಪುಷ್ಪಾವತಿಯರೂ ಫಲವತಿಯರೂ ಆಗಿ
ಎದೆಯೂಡಿಸಿ ಜೀವಲಾಲಿಯ ಹಾಡಿ
ನೆಲದ ನಾಡಿಯಲಿ ಜೀವದ ಭಾವ ತುಂಬುವ
ನೇತ್ರಾವತಿ ಹೇಮಾವತಿ ಶರಾವತಿಯರನ್ನ

ಕರುಬುತ್ತಾಳೆ
ಬಿಕ್ಕಳಿಸುತ್ತಾಳೆ



ಅತಿ ಆಳದಲಿ ಮರುಗುತ್ತಾಳೆ
ಬೆಂಗಳೂರಂಥ ಮಹಾನಗರಗಳು
ಹುಟ್ಟದಿರಲೆಂದು ಶಪಿಸುತ್ತಾಳೆ.

**ಪ್ರೊ॥ ಬಿ. ಗಂಗಾಧರಮೂರ್ತಿ**
ನಂ. ಎ–೬೮೯, 'ನಳಂದ', ಸಂಪಿಗೆ ರಸ್ತೆ, ಕುವೆಂಪುನಗರ
ಗೌರಿಬಿದನೂರು – ೫೬೧ ೨೦೮, ಕೋಲಾರ ಜಿಲ್ಲೆ



# ಅದ್ಭುತ ‘ಕಲೆಗಾರ’ ಬಸವರಾಜ್



ರೇಖೆ ಚಿತ್ರಕಲೆಯ ಜೀವಸೆಲೆ. ಬಸವರಾಜ ಕಲೆಗಾರರ ರೇಖೆಗಳಿಗೆ ಅವುಗಳದ್ದೇ ಆದ ಒಂದು ಸತ್ವವಿದೆ, ಸ್ವಂತ ವ್ಯಕ್ತಿತ್ವವಿದೆ, ಸ್ವತಂತ್ರ ಅಭಿವ್ಯಕ್ತಿಯಿದೆ. ‘ಕಲೆಗಾರ’ ಅಡ್ಡ ಹೆಸರಿಗೆ ಅನ್ವರ್ಥಕವಾಗಿ ಬದುಕುತ್ತಿರುವ ಬಸವರಾಜ ನಿಜಕ್ಕೂ ಅದ್ಭುತ ಕಲೆಗಾರ. ರೇಖೆಗಳನ್ನೆ ಮುಖ್ಯವಾಗಿಟ್ಟುಕೊಂಡು ನಿರಂತರವಾಗಿ ದುಡಿದು ನುರಿತಿರುವ ಇವರ ಕೈಗಳಲ್ಲಿ ಅರಳುವ ರೇಖಾಚಿತ್ರಗಳು ನೋಡುಗರನ್ನು ತಕ್ಷಣ ಸೆಳೆದು ಸೂಜಿಗಲ್ಲಿನಂತೆ ನಿಲ್ಲಿಸುವಷ್ಟು ಸಶಕ್ತವಾಗಿವೆ.

ಬಡತನದಲ್ಲಿಯೇ ಬೆಳೆದ ಬಸವರಾಜ ಬಣ್ಣ, ಕ್ಯಾನವಾಸ್‌ಗಳ ಗೋಜಿಗೆ ಹೋಗದೆ ಅಂಗೈ ಅಗಲದ ಹಾಳೆಗಳಲ್ಲಿಯೇ ತಮ್ಮೆಲ್ಲಾ ಸಂವೇದನೆಗಳನ್ನು ಸಂಕಲಿಸಿದ್ದಾರೆ. ಈಗಾಗಲೇ ಸುಮಾರು ಪುಸ್ತಕಗಳಿಗೆ ಚಿತ್ರ ಬರೆದಿರುವ ಮತ್ತು ತಾವೇ ಒಂದು ರೇಖಾಚಿತ್ರ ಪ್ರಕಾಶನವನ್ನು ಹುಟ್ಟುಹಾಕಿ ನಾಲ್ಕು ಪುಸ್ತಕಗಳನ್ನು ಪ್ರಕಟಿಸಿರುವ ಇವರು, ಪ್ರತಿಯೊಂದು ಘಟನೆಯನ್ನೂ ತುಂಬಾ ವಿಭಿನ್ನವಾಗಿ ನೋಡುವುದನ್ನು ರೂಢಿ ಮಾಡಿಕೊಂಡಿದ್ದಾರೆ.

ಬರೀ ಆನಂದಕ್ಕಾಗಿ ಗೆರೆ ಎಳೆಯದೆ ಬದುಕಿನ ವೈರುಧ್ಯತೆಗಳನ್ನು, ಸಾಮಾಜಿಕ ತಲ್ಲಣಗಳನ್ನು, ನೊಂದವರ, ಹಿಂದುಳಿದವರ, ದಲಿತರ ಧ್ವನಿಯಾಗುವ ಕನಸಿರಿಸಿಕೊಂಡು ಬಸವರಾಜ ಗೆರೆ ಎಳೆಯುತ್ತಿದ್ದಾರೆ.



ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು ಪ್ರಸ್ತುತ ಕಲಬುರಗಿ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿದ್ದಾರೆ. ಇತ್ತೀಚೆಗಷ್ಟೆ ಹೈದರಾಬಾದಿನಲ್ಲಿ ಇವರ ರೇಖಾಚಿತ್ರಗಳ ಪ್ರದರ್ಶನ ನಡೆಯಿತು. ಸಿಯಾಚಿನ್ ಪ್ರದೇಶದಲ್ಲಿ ಮಡಿದ ವೀರಯೋಧ ಹುತಾತ್ಮ ಹನುಮಂತಪ್ಪ ಕೊಪ್ಪದ ಅವರಿಗೆ ಈ ಪ್ರದರ್ಶನವನ್ನು ಅರ್ಪಿಸಿದ್ದಾರೆ.

ಡಾ. ಚಿನ್ನಸ್ವಾಮಿ ಸೋಸಲೆ ಅವರ ಸಂಪಾದಕತ್ವದಲ್ಲಿ ನವಕರ್ನಾಟಕ ಪ್ರಕಾಶನ ಹೊರತಂದ ‘ಕರ್ನಾಟಕದ ಸಮಗ್ರ ದಲಿತ ಚರಿತ್ರೆ’ ಎಂಬ ಬೃಹತ್ ಸಂಪುಟದಲ್ಲಿ ಬಸವರಾಜ್ ಕಲೆಗಾರರ ಹಲವು ರೇಖಾಚಿತ್ರಗಳನ್ನು ಬಳಸಿಕೊಳ್ಳಲಾಗಿದೆ.

**– ಕೆ. ಬಿ. ವೀರಲಿಂಗನಗೌಡ್ರ**







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

